

# ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ

NAAC accredited with “B+” Grade

**ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ**

ಹಾಗೂ

**ಸ್ನಾತ್ತಕೋತ್ತರ ಅಧ್ಯಯನ ಕೇಂದ್ರ**

ಜ್ಞಾನ ಗಂಗೋತ್ರಿ, ಜಿ.ಆರ್.ಹಳ್ಳಿ ಚಿತ್ರದುರ್ಗ

ಇವರ ಸಹಯೋಗದಲ್ಲಿ

# ಕನ್ನಡ ಸಾಹಿತ್ಯ ಸಂಶೋಧನೆ ಹೊಸ ಸಾಧ್ಯತೆಗಳು

ವಿಷಯ ಕುರಿತು ದಿನಾಂಕ ಜುಲೈ 6 ಮತ್ತು 7, 2024 ರಂದು ನಡೆದ

ಎರಡು ದಿನಗಳ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮಂಡಿಸಿದ ಆಯ್ದ ಸಂಶೋಧನಾ ಲೇಖನಗಳ ಸಂಗ್ರಹ

**ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ**

ದಾವಣಗೆರೆ ವಿಶ್ವವಿದ್ಯಾಲಯ

ಶಿವಗಂಗೋತ್ರಿ

ದಾವಣಗೆರೆ–577007

https://davangereuniversity.ac.in/

**Author Guidelines**

- Online submission of the article should be sent as an attachment only in MS word to: editor@srujani.in
- Articles should be in Kannada or English
- Article should be 4,000 - 8,000 words in length
- It should be typed in Times New Roman Font for English and Nudi 01 e Font for Kannada Article, Text type should be 12 Font size, 1.5 lines spaced.
- Covering letter declaring that the submitted article is original work of the author and is unpublished must be sent on a separate page
- Abstract of 150 words along with key words should be given on the separate sheet
- Text Organization: The main text should begin on a separate page preferably divided into separate sections such as Introduction, Materials and Methodology, main Subject of the article and conclusion.
- References must be according to APA 7th Edition guidelines.
- Visit our website for more details: www.srujani.in

MOB: +91-7411851852 and +91-9164061581

## ಸಂಚಿಕೆ ಸಂಪಾದಕರು

**ಡಾ. ವಿಜಯಕುಮಾರ ಎಚ್. ಜಿ**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ರೂಪೇಶ ಕುಮಾರ ಆರ್**
ಸಹಾಯಕ ಪ್ರಾಧ್ಯಾಪಕರು
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ.

**ನಾಗರಾಜ ಎಸ್**
ಸಂಶೋಧನಾರ್ಥಿ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ವೆಂಕೋಬ ತಳವಾರ**
ಸಂಶೋಧನಾರ್ಥಿ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ಹರೀಶ ಕೆ. ಜೆ**
ಸಂಶೋಧನಾರ್ಥಿ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ವಸಂತ ಕುಮಾರ ಟಿ**
ಸಂಶೋಧನಾರ್ಥಿ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ಸಚಿನ್ ಜಿ. ಎಚ್**
ಸಂಶೋಧನಾರ್ಥಿ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ಅಶ್ವಿನಿ ಬಿ. ಆರ್**
ಸಂಶೋಧನಾರ್ಥಿ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

**ಸಂತೋಷ ಕುಮಾರ ಬಿ. ಪಿ**
ಸಂಶೋಧನಾರ್ಥಿ
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ
ದಾವಣಗೆರೆ ವಿಶ್ವವಿದ್ಯಾಲಯ, ದಾವಣಗೆರೆ

# ಕುಲಪತಿಗಳ ಆಶಯ ನುಡಿ

ಭಾರತೀಯ ಭಾಷೆಗಳಲ್ಲಿ ಕನ್ನಡಕ್ಕೆ ತನ್ನದೇ ಆದ ವಿಶಿಷ್ಟ ಸ್ಥಾನವಿದೆ. ಕನ್ನಡ ಭಾಷೆ ಸಾಹಿತ್ಯ ಸಂಸ್ಕೃತಿಗೆ ಸರಿಸುಮಾರು 2000 ವರ್ಷಗಳ ಇತಿಹಾಸವಿದೆ. ಶಾಸನ ಹಸ್ತಪ್ರತಿಗಳಲ್ಲಡಗಿರುವ ಇಂತಹ ಶ್ರೀಮಂತ ಸಾಹಿತ್ಯವನ್ನು ನಮ್ಮ ಪೂರ್ವಿಕರು ಸಂಶೋಧಿಸಿ ಪ್ರಕಟಿಸುವ ಮೂಲಕ ನಮಗೆ ಸಾಹಿತ್ಯ ಸುಧೆಯ ಸವಿಯನ್ನುಣಿಸಿದ್ದಾರೆ; ಇದರೊಂದಿಗೆ ಸಾಹಿತ್ಯ ಸಂಶೋಧನೆಯ ವಿಧಿ ವಿಧಾನಗಳನ್ನು ನಮಗೆ ತಿಳಿಸಿ ಕೊಟ್ಟಿದ್ದಾರೆ. ಸಾಹಿತ್ಯ ಹೃದಯಗಮ್ಯವಾದರೆ, ಸಾಹಿತ್ಯ ಸಂಶೋಧನೆಯು ಬುದ್ಧಿಗಮ್ಯವಾಗಿದೆ. ಸಾಹಿತ್ಯ ಸುಲಿದ ಬಾಳೆ ಹಣ್ಣಾದರೆ, ಸಾಹಿತ್ಯ ಸಂಶೋಧನೆ ತೊಗಟೆ ಚಿಪ್ಪುಗಳಿಂದ ಕೂಡಿದ ತೆಂಗಿನಕಾಯಿಯಾಗಿದೆ.  ಸಾಹಿತ್ಯ ಅನುಭವ ಪ್ರಧಾನವಾದರೆ, ಸಾಹಿತ್ಯ ಸಂಶೊಧನೆ ಬುದ್ಧಿಪ್ರಧಾನವಾಗಿದೆ. ಬೌದ್ಧಿಕ ಕಾಳಜಿ, ತಾತ್ವಿಕ ಚಿಂತನೆಯ, ಕಲ್ಪಕತೆಯ ಮೂಲಕ ವಾಸ್ತವಿಕತೆಯ ಮೂಸೆಯಲ್ಲಿ ಘಟನೆಗಳನ್ನಿಟ್ಟ ಸಂಶೋಧಕನು ಅವುಗಳನ್ನು ಬಗೆ ಬಗೆಯ ಅವತಾರಗಳನ್ನಾಗಿ ತೋರಿಸುತ್ತಾನೆ. ಸಾಹಿತಿ ತನ್ನ ಪ್ರಜ್ಞಾ ಪಾತಳಿಯಲ್ಲಿ ಬದುಕಿನ ನಿಗೂಢಗಳನ್ನು ಕಲಾತ್ಮಕವಾಗಿ ಪುನರ್ ಸೃಷ್ಟಿ ಮಾಡುವ ಮೂಲಕ ತಾನು ಕಂಡು ಅದನ್ನು ಇತರರಿಗೂ ಕಾಣುವಂತೆ ಮಾಡುತ್ತಾನೆ. ಸಂಶೋಧಕನು ತಿಲದೊಳಗಿನ ತೈಲದಂತೆ, ಕಾಷ್ಠದೊಳಗಿನ ಅಗ್ನಿಯಂತೆ, ಹಾಲಿನೊಳಗಿನ ತುಪ್ಪದಂತೆ, ನೆಲದ ಮರೆಯ ನಿಧಿಯಂತೆ  ಬೆಳಗಿಸಿ ಅದರೊಳಗಡಗಿರುವ  ನಿಜಾಂಶವನ್ನು ಜನರಿಗೆ ತಿಳಿಸುವ ಮೂಲಕ ಪುನರ್ ಸೃಷ್ಟಿಕರ್ತನೆನಿಸಿಕೊಳ್ಳುತ್ತಾನೆ. ಮೂಲ ಜ್ಞಾನವನ್ನು ವ್ಯವಸ್ಥಿತ ರೀತಿಯಲ್ಲಿ ಊಹೆ ಸಂಭಾವ್ಯಗಳ ಮೂಲಕ  ಸಾದರಪೂರ್ವಕವಾಗಿ ಪ್ರಿಯ ಮತ್ತು ಅಪ್ರಿಯ ಸತ್ಯವನ್ನಾಗಿಸುತ್ತ ಹೋಗುತ್ತಾನೆ. ಈ ರೀತಿಯಾಗಿ ಹಿಂದಿನ, ಮುಂದಿನ ಹೊರಗಿನ, ಒಳಗಿನ ಎಲ್ಲಾ ಅಂಶಗಳನ್ನು ಕೆದಕಿ ನಿಶ್ಚಿತ ನಿರ್ಣಯಗಳನ್ನು ಸುಂದರ ಶೈಲಿಯಲ್ಲಿ ಎದುರಿಗಿಡುವ ಕಷ್ಟಸಾಧ್ಯವಾದ ಪ್ರಯತ್ನವೇ ಸಾಹಿತ್ಯ ಸಂಶೋಧನೆ.

ಹೊಸ ಹೊಸ ಸಾಹಿತ್ಯ ಪ್ರಕಾರಗಳು ಜನ್ಮತಳೆದಂತೆ ನವೀನ ರೀತಿಯ ಸಂಶೋಧನಾ ಕಾರ್ಯಗಳತ್ತ ನಾವು ವಾಲಬೇಕಾಗುತ್ತದೆ. ನವನವೋನ್ಮೇಶಶಾಲಿನಿಯಾದ ಈ ಸಾಹಿತ್ಯ ಹಾಗೂ ಸಂಶೋಧನೆಯ ಹೊಸ ಹೊಳಹುಗಳನ್ನು ನಾವು ಅರಿಯಬೇಕಾಗಿದೆ. ಇದರ ಬಗ್ಗೆ ಹೆಚ್ಚಿನ ಜ್ಞಾನ ತಿಳಿವಳಿಕೆಯ ಅವಶ್ಯಕತೆಯನ್ನು ಮನಗಂಡ ನಮ್ಮ ದಾವಣಗೆರೆ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗದ ಸರ್ವ ಪ್ರಾಧ್ಯಾಪಕರು ಹಾಗೂ ಸಂಶೋಧನಾ ವಿದ್ಯಾರ್ಥಿಗಳು ಸೇರಿಕೊಂಡು  ಚಿತ್ರದುರ್ಗದ ಸ್ನಾತಕೋತ್ತರ ಕೇಂದ್ರದಲ್ಲಿ  "ಕನ್ನಡ ಸಾಹಿತ್ಯ ಸಂಶೋಧನೆಯ ಹೊಸ ಸಾಧ್ಯತೆಗಳು" ಎಂಬ ಶೀರ್ಷಿಕೆಯಡಿ ಎರಡು ದಿನಗಳ ರಾಷ್ಟ್ರೀಯ ವಿಚಾರ ಸಂಕಿರಣವನ್ನು ಆಯೋಜಿಸಿರುವುದು ಸ್ತುತ್ಯರ್ಹವಾಗಿದೆ. ಈ ವಿಚಾರ ಸಂಕಿರಣಕ್ಕೆ  ವಿವಿಧ ವಿಶ್ವವಿದ್ಯಾಲಯಗಳ ಹಲವಾರು ಪ್ರಾಧ್ಯಾಪಕರು, ಸಂಶೋಧನಾರ್ಥಿಗಳು, ವಿದ್ಯಾರ್ಥಿಗಳು ತಮ್ಮ ಜ್ಞಾನ ಮಂಥನದಿಂದ ಕಡೆದು ಕಳುಹಿಸಿರುವ ಸಂಶೋಧನಾ ಲೇಖನಗಳನ್ನು ಒಂದೆಡೆ ಕ್ರೋಡೀಕರಿಸಿ ಪುಸ್ತಕ ರೂಪದಲ್ಲಿ  ವಿಚಾರ ಸಂಕಿರಣದ ದಿನದಂದೇ ಆ ಪುಸ್ತಕವನ್ನು ಲೋಕಾರ್ಪಣೆಗೊಳಿಸಿ ಸರ್ವರ ಕೈ ಸೇರುವಂತೆ ಮಾಡುತ್ತಿರುವ ಈ ನಿಮ್ಮ ಕಾರ್ಯ ಶ್ಲಾಘನೀಯವಾದುದು.

ಈ ಪುಸ್ತಕವು ವಿದ್ಯಾರ್ಥಿಗಳಿಗೆ, ಸಂಶೋಧಕರಿಗೆ, ವಾಚಕರಿಗೆ ತುಂಬ ಉಪಯುಕ್ತವಾಗಿದ್ದು ಸಾಹಿತ್ಯ ಹಾಗೂ ಸಾಂಸ್ಕೃತಿಕ ವಲಯಕ್ಕೆ ಒಂದು ವಿಶಿಷ್ಟ ಕೊಡುಗೆಯಾಗಿದೆ.  ಇಂತಹ ಕೊಡುಗೆಗೆ ಕಾರಣೀಕರ್ತರಾಗಿ ಅತೀವ ಶ್ರದ್ಧೆ

ಹಾಗೂ ಸತತ ಪರಿಶ್ರಮವಹಿಸಿದ ಕನ್ನಡ ಅಧ್ಯಯನ ವಿಭಾಗದ ಅಧ್ಯಕ್ಷರಿಗೂ, ಸಂಪಾದಕ ಮಂಡಳಿಯ ಸರ್ವ ಸದಸ್ಯರಿಗೂ, ಸಂಶೋಧನಾ ವಿದ್ಯಾರ್ಥಿಗಳಿಗೂ ವಿಶ್ವವಿದ್ಯಾನಿಲಯದ ಪರವಾಗಿ ಹೃತ್ಪೂರ್ವಕವಾಗಿ ಅಭಿನಂದಿಸುತ್ತೇನೆ. ಹಾಗೆಯೇ ಈ ಲೇಖನಗಳನ್ನು ವಿಶೇಷ ಸಂಚಿಕೆಗಳ ರೂಪದಲ್ಲಿ ಅಚ್ಚುಕಟ್ಟಾಗಿ ಮುದ್ರಿಸಿ ಹೊರತಂದು ಕನ್ನಡದ ವಿದ್ವತ್ ಲೋಕಕ್ಕೆ ಅರ್ಪಿಸಿದ ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ ಅಂಡ್ ಡೆವಲಪ್‌ಮೆಂಟ್ ಜರ್ನಲ್‌ನ ಪ್ರಕಾಶಕರನ್ನು ಸಹ ಅಭಿನಂದಿಸುತ್ತೇನೆ. ಇವರೆಲ್ಲರ ಪರಿಶ್ರಮದ ಫಲವಾಗಿ ರೂಪುಗೊಂಡ ಈ ವಿಶೇಷ ಸಂಚಿಕೆಗಳ ಸವಿಯನ್ನು ಕನ್ನಡ ಸಾರಸ್ವತಲೋಕ ಪ್ರೀತಿಯಿಂದ ಸ್ವೀಕರಿಸಿಲಿ, ಕನ್ನಡ ಅಧ್ಯಯನ ವಿಭಾಗವು ಜ್ಞಾನಾತ್ಮಕ ವಲಯದತ್ತ ಇನ್ನೂ ಹೆಚ್ಚಿನ ಯಶಸ್ಸನ್ನು ಸಾಧಿಸಲಿ ಎಂದು ಹಾರೈಸುತ್ತೇನೆ.

**ಪ್ರೊ. ಬಿ. ಡಿ. ಕುಂಬಾರ**
ಕುಲಪತಿಗಳು
ದಾವಣಗೆರೆ ವಿಶ್ವವಿದ್ಯಾನಿಲಯ
ದಾವಣಗೆರೆ

# ಸಂಪಾದಕರ ನುಡಿ

ಕನ್ನಡ ಸಾಹಿತ್ಯ ಮತ್ತು ಸಂಶೋಧನೆಗಳು ಇಂದು ಬಹುಶಿಸ್ತೀಯ ನೆಲೆಯಲ್ಲಿ ವಿಸ್ತರಿಸಿಕೊಂಡಿವೆ. ಸಾಹಿತ್ಯ ನಿಂತ ನೀರಲ್ಲ, ಅದು ನಿತ್ಯ ನೂತನವಾಗಿ ಪ್ರವಹಿಸುತ್ತಲೇ ಸಾಗಿ ಬಂದಿದೆ. ಹಾಗಾಗಿ ಅಂದಂದಿನ ಕಾಲಕ್ಕೆ ತಕ್ಕಂತೆ ಆಲೋಚನೆಗಳು, ಅಭಿರುಚಿಗಳು, ಆಯ್ಕೆಗಳು ಬದಲಾಗುತ್ತದೆ. ಬದಲಾದ ಕಾಲಕ್ಕೆ ತಕ್ಕಂತೆ, ನಮ್ಮ ಸಾಹಿತ್ಯವೂ ಸಹ ಸಮಕಾಲೀನ ಸಂವೇದನೆಗಳನ್ನು ಸ್ವೀಕರಿಸಿಕೊಂಡು ಸಾಗುತ್ತವೆ. ಸಾಹಿತ್ಯ, ಸಂಸ್ಕೃತಿ ಕುರಿತ ಸಂಶೋಧನೆಗಳು ಕೂಡ ಇಂದು ಹಲವು ನೆಲೆಯಲ್ಲಿ ವಿಸ್ತರಿಸಿಕೊಂಡಿವೆ. ನಮ್ಮ ಶೈಕ್ಷಣಿಕ ವಲಯದ ಸಂಶೋಧನೆಗಳು ಇಂದು ತೀವ್ರಗತಿಯಲ್ಲಿ ನಡೆಯುತ್ತಿವೆ. ಇವುಗಳಲ್ಲಿ ಗಟ್ಟಿಯಾದವುಗಳೆಷ್ಟು, ಜಾಳಾದವುಗಳೆಷ್ಟು ಎಂಬುದನ್ನು ನಿಕರವಾಗಿ ಯಾವ ಮಾನದಂಡದಿಂದಲೂ ಗುರುತಿಸಲು ಸಾಧ್ಯವಾಗುತ್ತಿಲ್ಲ. ಇಂದಿನ ವರ್ತಮಾನದ ತುರ್ತುಗಳು ಈ ರೀತಿಯ ಸನ್ನಿವೇಶಗಳನ್ನು ರೂಪಿಸಿವೆ. ಆದ್ದರಿಂದ 21 ನೇ ಶತಮಾನದ ಸಾಹಿತ್ಯ ಸಂಶೋಧನೆಗಳು ಎತ್ತ ಸಾಗುತ್ತಿದೆ ಎಂಬುದನ್ನು ಕಂಡುಕೊಳ್ಳುವ ಅನಿವಾರ್ಯತೆ ನಮಗೀಗ ಎದುರಾಗಿದೆ. ವಿಶ್ವವಿದ್ಯಾಲಯಗಳಲ್ಲಿ ಇಂದು ಸ್ವಲ್ಪಮಟ್ಟಿನ ಗುಣಮಟ್ಟದ ಸಂಶೋಧನೆಗಳನ್ನು ನಿರೀಕ್ಷಿಸಬಹುದಾಗಿದೆ. ಈ ಹಿನ್ನೆಲೆಯಲ್ಲಿ ನಮ್ಮ ವಿಶ್ವವಿದ್ಯಾನಿಲಯದಿಂದ ಇಂಥದೊಂದು ಪ್ರಯೋಗಕ್ಕೆ ನಾವು ಮುಂದಾಗಿದ್ದೇವೆ. ಕನ್ನಡ ಸಾಹಿತ್ಯ–ಸಂಶೋಧನೆಯ ಹೊಸ ಸಾಧ್ಯತೆಗಳನ್ನು ಕುರಿತ ಹಾಗೆ ಎಂಬ ಹೊತ್ತಿಗೆಯನ್ನು ದಾವಣಗೆರೆ ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ವಿಭಾಗದಿಂದ ಹೊರತರಲು ಯೋಜಿಸಲಾಗಿದೆ.

ನಮ್ಮ ಕನ್ನಡ ಸಾಹಿತ್ಯವನ್ನು ಪ್ರಾಚೀನ, ಮಧ್ಯಕಾಲೀನ, ಆಧುನಿಕ ಕನ್ನಡ ಸಾಹಿತ್ಯವೆಂದು ಮೂರು ಮುಖ್ಯ ನೆಲೆಯಲ್ಲಿ ವಿಭಾಗಿಸಿಕೊಂಡಿದ್ದರೂ, ಆಧುನಿಕ ಕನ್ನಡ ಸಾಹಿತ್ಯದಲ್ಲಿ ಕಾವ್ಯ, ಸಣ್ಣಕಥೆ, ಕಾದಂಬರಿ, ನಾಟಕ, ಪ್ರಬಂಧ ಸಾಹಿತ್ಯ, ಪ್ರವಾಸ ಸಾಹಿತ್ಯ, ಅಂಕಣ ಬರಹ, ಜೀವನ ಚರಿತ್ರೆ, ಆತ್ಮಕಥೆ, ವಿಮರ್ಶೆ ಹೀಗೆ ಹಲವು ವಿಶಿಷ್ಟ ಬಗೆಯ ಸಾಹಿತ್ಯ ರೂಪಗಳನ್ನು ಕಾಣಬಹುದು. ಇಷ್ಟೊಂದು ವೈವಿಧ್ಯಮಯವಾಗಿರುವ ಕನ್ನಡ ಸಾಹಿತ್ಯ ಹೊಸ ಸಂಶೋಧನಾ ಸಾಧ್ಯತೆಗಳಿಗೆ ತನ್ನನ್ನು ತಾನು ತೆರೆದುಕೊಂಡಿದೆ. ಹಾಗಾಗಿ ಸಮೃದ್ಧವಾದ, ವಿದ್ವತ್‌ಪೂರ್ಣವಾದ ಕನ್ನಡ ಸಾಹಿತ್ಯವನ್ನು ಇಂದಿನ ಹೊಸ ಸಾಧ್ಯತೆಗಳ ಓರೆಗಲ್ಲಿಗೆ ಹಚ್ಚುವ ಪ್ರಯತ್ನಗಳು ನಡೆಯುತ್ತಿವೆ. ಈ ಪ್ರಯತ್ನದ ಫಲವಾಗಿ ನಾವು ನಮ್ಮ ವಿಭಾಗದಿಂದ ಸಂಶೋಧನಾ ಲೇಖನಗಳನ್ನು ಆಹ್ವಾನಿಸಿದೆವು. ಇದಕ್ಕೆ ಸ್ಪಂದಿಸಿದ ಕನ್ನಡದ ಸಹೃದಯರು, ಪ್ರಾಧ್ಯಾಪಕರು, ಸಂಶೋಧನಾರ್ಥಿಗಳು, ಸ್ನಾತಕೋತ್ತರ ವಿದ್ಯಾರ್ಥಿಗಳು, ಸಾಹಿತ್ಯಾಸಕ್ತರು 50 ಕ್ಕೂ ಅಧಿಕ ವಿದ್ವತ್‌ಪೂರ್ಣ ಲೇಖನಗಳನ್ನು ಕಳುಹಿಸಿದ್ದಾರೆ. ವಿವಿಧ ವಯೋಮಾನದ, ವಿವಿಧ ಕ್ಷೇತ್ರದ, ವಿವಿಧ ಅಭಿರುಚಿಯುಳ್ಳ ಲೇಖಕರ ಲೇಖನಗಳನ್ನು ಇಲ್ಲಿ ಸಂಗ್ರಹಿಸಿರುವುದರಿಂದ ಈ ಕೃತಿಯೂ ಹೊಸ ಆಲೋಚನೆ ಹಾಗೂ ಸಂಶೋಧನೆಗಳಿಗೆ ದಾರಿ ಮಾಡಿ ಕೊಡುತ್ತದೆ ಎಂಬ ಭರವಸೆ ಈ ಕೃತಿಯ ಹಿಂದಿದೆ. ಪ್ರಾಚೀನದಿಂದ ಹಿಡಿದು ಪ್ರಸ್ತುತದವರೆಗಿನ ಎಲ್ಲಾ ಬಗೆಯ ಸಾಹಿತ್ಯವನ್ನು ಇದರಲ್ಲಿ ಸಂಗ್ರಹಿಸಲಾಗಿದೆ. ಈ ಕೃತಿ ವೈಚಾರಿಕ, ವೈಧಾನಿಕ, ವೈಜ್ಞಾನಿಕ, ಜ್ಞಾನ, ಪರಂಪರೆಯನ್ನು ಸೃಷ್ಟಿಸುವಲ್ಲಿ ಸಹಕಾರಿಯಾಗಬಲ್ಲದು.

ಇಂಥದೊಂದು ಬೃಹತ್ ಆಲೋಚನೆಯನ್ನು ಹೊತ್ತು ನಡೆದಾಗ ನಮ್ಮ ಕನಸಿನ ಸಸಿಗೆ ನೀರೆರೆದು ಪೋಷಿಸಿದ ನಮ್ಮ ವಿಶ್ವವಿದ್ಯಾನಿಲಯದ ಮಾನ್ಯ ಕುಲಪತಿಗಳಾದ ಪ್ರೊ. ಬಿ. ಡಿ. ಕುಂಬಾರ ಅವರಿಗೆ ಅನಂತ ಕೃತಜ್ಞತೆಗಳು. ಈ

ಸಂಚಿಕೆಗಳನ್ನು ಹೊರತರಲು ತುಂಬು ಮನಸ್ಸಿನಿಂದ ಸಹಕರಿಸಿದ ನಮ್ಮ ವಿಶ್ವವಿದ್ಯಾನಿಲಯದ ಆಡಳಿತ ಕುಲಸಚಿವರಾದ ಪ್ರೊ. ಯು. ಎಸ್. ಮಹಾಬಲೇಶ್ವರ್ ಅವರಿಗೆ, ಪರೀಕ್ಷಾಂಗ ಕುಲಸಚಿವರಾದ ಪ್ರೊ. ಸಿ. ಕೆ. ರಮೇಶ್ ಅವರಿಗೆ, ಹಣಕಾಸು ಅಧಿಕಾರಿಗಳಾದ ಶ್ರೀ ದ್ಯಾಮನಗೌಡ್ರ ಮುದ್ದನಗೌಡ್ರ ಅವರಿಗೂ ತುಂಬು ಹೃದಯದ ಕೃತಜ್ಞತೆಗಳು.

ರಾಷ್ಟ್ರೀಯ ವಿಚಾರ ಸಂಕಿರಣ ಆಯೋಜಿಸಿ ಇಂಥದೊಂದು ಕೃತಿ ಪ್ರಕಟವಾಗಲು ಚಾಲಕ ಶಕ್ತಿಯಾಗಿ ನಮ್ಮನ್ನು ಪ್ರೋತ್ಸಾಹಿಸಿದ ಪ್ರೊ. ಬರಗೂರು ರಾಮಚಂದ್ರಪ್ಪ, ಪ್ರೊ. ಮಲ್ಲೇಪುರಂ ಜಿ ವೆಂಕಟೇಶ, ಪ್ರೊ.ಬಸವರಾಜ ಕಲ್ಗುಡಿ, ಪ್ರೊ. ಶಿವಾನಂದ ಕೆಳಗಿನಮನಿ, ಪ್ರೊ. ಜಿ. ಪ್ರಶಾಂತ ನಾಯಕ, ಪ್ರೊ. ಬಿ. ಎಂ. ಪುಟ್ಟಯ್ಯ, ಪ್ರೊ.ಜೆ. ಕರಿಯಪ್ಪ ಮಾಳಿಗೆ,ಪ್ರೊ.ಎ.ಬಿ,ರಾಮಚಂದ್ರಪ್ಪ, ಪ್ರೊ. ಹೆಚ್. ಶಶಿಕಲಾ, ಡಾ. ನೆಲ್ಲಿಕಟ್ಟೆ ಎಸ್. ಸಿದ್ದೇಶ, ಡಾ. ಗೀತಾ ವಸಂತ, ಡಾ.ತಾರೀಣಿ ಶುಭದಾಯಿನಿ, ಡಾ. ಹಾ. ಮಾ. ನಾಗಾರ್ಜುನ ಮುಂತಾದ ವಿದ್ವಾಂಸರಿಗೆ ನಮ್ಮ ಅಧ್ಯಯನ ವಿಭಾಗದ ಪರವಾಗಿ ವಿಶೇಷ ಧನ್ಯವಾದಗಳು.

ಏಕಕಾಲಕ್ಕೆ 50 ಲೇಖನಗಳನ್ನು ಸಂಗ್ರಹಿಸಿ, ಪ್ರಕಟಿಸುವ ಮಹತ್ ಕಾರ್ಯದಲ್ಲಿ ಅವಿರತವಾಗಿ ನಮ್ಮೊಟ್ಟಿಗೆ ಶ್ರಮಿಸಿದ ನಮ್ಮ ಕನ್ನಡ ಅಧ್ಯಯನ ವಿಭಾಗದ ಅಧ್ಯಕ್ಷರಾದ ಡಾ.ಜಯರಾಮಯ್ಯ, ವಿ., ಸಹೊದ್ಯೋಗಿ ಮಿತ್ರರುಗಳಾದ ಡಾ.ಹೆಚ್.ವಿಶ್ವನಾಥ್., ಪ್ರೊ. ಜೋಗಿನಕಟ್ಟೆ ಮಂಜುನಾಥ್., ಡಾ.ಮಲ್ಲಿಕಾರ್ಜುನ., ಕೆ. ಡಾ.ಬಸವರಾಜ್,ಬಿ., ಡಾ.ಶಾಂತರಾಜು.ಹೆಚ್.ವಿ., ಇವರೆಲ್ಲರಿಗೂ ಕೃತಜ್ಞತೆಗಳು. ಈ ವಿಶೇಷ ಸಂಚಿಕೆಗಳ ಪ್ರಕಟಣೆಯ ಸಂಪೂರ್ಣ ಜವಾಬ್ದಾರಿ ಹೊತ್ತು ನಾಡಿನಾದ್ಯಂತ ಸಂಪರ್ಕ ಸಾಧಿಸಿ, ಲೇಖನಗಳನ್ನು ಸಂಗ್ರಹಿಸಿ, ಹಗಲು–ರಾತ್ರಿ ಕಾರ್ಯ ನಿರ್ವಹಿಸಿ, ಅದರ ಯಶಸ್ಸಿನ ಸಂಪೂರ್ಣ ಹಕ್ಕುದಾರರು, ಪ್ರೀತಿಯ ಸಂಶೋಧನಾ ಮಿತ್ರರೂ ಆದ ಹನುಮಂತಪ್ಪ. ಸಿ.ಬಿ., ರಾಘವೇಂದ್ರ. ಕೆ.ಆರ್., ನಾಗರಾಜ. ಎಸ್., ವೆಂಕೋಬ ತಳವಾರ., ಹರೀಶ. ಕೆ,ಜೆ., ಮಂಜುಳಾ. ಎಂ.ಎಲ್., ರಂಗನಾಥ. ಆರ್., ತಿಪ್ಪೆಸ್ವಾಮಿ. ಟಿ.ಆರ್., ವಸಂತಕುಮಾರ. ಓ., ಸಚಿನ್. ಜಿ.ಹೆಚ್., ಸಂತೋಷ ಕುಮಾರ. ಬಿ.ಪಿ., ಅಶ್ವಿನಿ. ಬಿ.ಆರ್ ಮುಂತಾದವರಿಗೆ ಕೃತಜ್ಞತೆಗಳು. ಹಾಗೆಯೇ ಈ ಲೇಖನಗಳನ್ನು ವಿಶೇಷ ಸಂಚಿಕೆಗಳ ರೂಪದಲ್ಲಿ ಅಚ್ಚುಕಟ್ಟಾಗಿ ಮುದ್ರಿಸಿ ಹೊರತಂದು ಕನ್ನಡದ ವಿದ್ವತ್ ಲೋಕಕ್ಕೆ ಅರ್ಪಿಸಿದ ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ ಅಂಡ್ ಡೆವಲಪ್‌ಮೆಂಟ್ ಜರ್ನಲ್‌ನ ಪ್ರಕಾಶಕರಿಗೂ ಸಹ ಕೃತಜ್ಞತೆಗಳು.

**– ಸಂಪಾದಕ ಮಂಡಳಿ**

| | ಅನುಕ್ರಮಣಿಕೆ | ಪು.ಸಂ |
|---|---|---|
| 1 | ಎಚ್.ಎಸ್.ರಾಘವೇಂದ್ರರಾವ್ ವಿಮರ್ಶಾ ದೃಷ್ಟಿಯಲ್ಲಿ ದೇವನೂರ ಮಹಾದೇವರ ಕಾದಂಬರಿಗಳ ತಾತ್ವಿಕತೆ – ***ವಸಂತ ಕುಮಾರ ಟಿ*** | 1 |
| 2 | ಕಲಾ ಮಾಧ್ಯಮವಾಗಿ ಕುಂಬಾರಿಕೆ – ***ಆಶಾಲತಾ ಮತ್ತು ಡಾ. ಶಾಂತರಾಜು ಎಚ್. ವಿ*** | 6 |
| 3 | ಬುಡಕಟ್ಟು ಸಂಸ್ಕೃತಿ ಮತ್ತು ಸಾಹಿತ್ಯ – ***ಅನಿಲ್ ಕುಮಾರ್ ಎಂ. ಕೆ*** | 12 |
| 4 | ಎಮ್.ಎಸ್.ಸಿಂಧೂರ ಅವರ ಸಣ್ಣಕಥೆಗಳ ಅವಲೋಕನ – ***ಮಹಾಂತೇಶ ಸೀತಾರಾಮ ಕಾಂಬಳೆ ಮತ್ತು ಡಾ. ಭೀಮಾಶಂಕರ ಜೋಷಿ*** | 19 |
| 5 | ಹೆಚ್. ನಾಗವೇಣಿಯವರ ಕಸಬರಿಕೆ ಕಥೆ : ವರ್ಗ ಸಂಘರ್ಷದ ಪ್ರತಿರೋಧದ ನೆಲೆಗಳು – ***ಮಧು ಟಿ*** | 25 |
| 6 | ದಲಿತ–ಬಂಡಾಯ ಕಾದಂಬರಿಗಳು : ಪ್ರತಿಭಟನೆ ಮತ್ತು ಪ್ರತಿರೋಧದ ಭಾಷೆ – ***ವೆಂಕೋಬ ತಳವಾರ ಮತ್ತು ಪ್ರೊ. ಜೋಗಿನಕಟ್ಟೆ ಮಂಜುನಾಥ*** | 30 |
| 7 | ದಲಿತ ಸಾಹಿತ್ಯ : ಭಾಷಿಕ ಸಂಬಂಧ – ***ಅನಿಲ್ ಕುಮಾರ್ ಎಂ.ಕೆ ಮತ್ತು ಪ್ರೊ. ಚಲುವರಾಜು*** | 36 |
| 8 | ಮಾನವ ಕಳ್ಳಸಾಗಣಿಕೆಗೆ ಒಳಗಾದವರಿಗೆ ಪುನರ್ವಸತಿ ಕೇಂದ್ರದಿಂದ ಆಗುವ ಪ್ರಯೋಜನಗಳ ಕುರಿತು ಒಂದು ಅಧ್ಯಯನ – ***ಶೃತಿ ಮತ್ತು ಡಾ. ಪಟವರ್ಧನ ರಾಠೋಡ್*** | 43 |
| 9 | ಪರಿಸರವನ್ನು ಸಂರಕ್ಷಿಸುವಲ್ಲಿ ಘನ ತ್ಯಾಜ್ಯ ಮರುಬಳಕೆಯ ಪರಿಣಾಮ – ***ಅಂಜಿನಪ್ಪ ಡಿ ಮತ್ತು ಡಾ. ಲೋಕೇಶ್ ಎಂ. ಯು*** | 47 |
| 10 | ಸಾಹಿತ್ಯ ಮತ್ತು ತಂತ್ರಜ್ಞಾನ ಸಂಶೋಧನೆ ಹೊಸ ಸಾಧ್ಯತೆಗಳು – ***ಬಸವರಾಜ ಕೆ. ಎನ್ ಮತ್ತು ಡಾ. ಗಿರೀಶ್. ಡಿ. ಹೆಚ್*** | 52 |
| 11 | ಸ್ತ್ರೀವಾದಿ ಸಾಹಿತ್ಯ ಸಂಶೋಧನೆ ನೆಲೆಯಲ್ಲಿ ಹೊಸ ಸಾಧ್ಯತೆಗಳು; ರಾಜಕೀಯ, ಆರ್ಥಿಕ, ಸಾಮಾಜಿಕ ನೆಲೆಯಲ್ಲಿ ಮೋಟಮ್ಮ ಅವರ ಆತ್ಮಕಥೆ – ***ಸಿದ್ದನಾಗಪ್ಪ ಬಿ. ಬಿ*** | 56 |
| 12 | ಸಾಂಸ್ಕೃತಿಕ ಅಧ್ಯಯನದ ಹೊಸ ಸಾಧ್ಯತೆಗಳು – ***ತಿಪ್ಪೇಶ ಬಿ ಮತ್ತು ಡಾ. ಭೀಮಾಶಂಕರ ಜೋಷಿ*** | 61 |
| 13 | ಬಿ.ಎಲ್. ವೇಣು ಅವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರ ಚಿತ್ರಣ – ***ಬಿ. ಆರ್. ಅಶ್ವಿನಿ ಮತ್ತು ಡಾ. ವಿಜಯಕುಮಾರ್ ಎಚ್. ಜಿ*** | 69 |
| 14 | ಹೊನ್ನಾಳಿ ಸೀಮೆಯ ಕಥನ ಸಾಹಿತ್ಯದ ಭಾಷಿಕ ನಿರೂಪಣೆ – ***ರಾಧ ಎಚ್. ಎಂ*** | 74 |
| 15 | ಕನ್ನಡ ರಂಗ ಪಠ್ಯ ಸಾಹಿತ್ಯಿಕ ಅಧ್ಯಯನದ ಸ್ವರೂಪ – ***ಶ್ರೀ ಶ್ರೀಹರಿ ಧೂಪದ*** | 78 |
| 16 | ಐತಿಹಾಸಿಕ ವ್ಯಕ್ತಿಯಾಗಿ ಮಲೆಯ ಮಾದೇಶ್ವರ – ***ಉಷಾ ಎನ್ ಮತ್ತು ಡಾ. ಕೆ. ಸೌಭಾಗ್ಯವತಿ*** | 83 |
| 17 | ಡಾ.ಕೆ.ಎನ್.ಗಣೇಶಯ್ಯನವರ ಕಥೆಗಳಲ್ಲಿನ ಹೊಸ ಸಾಧ್ಯತೆಗಳು – ***ಸಚಿನ್ ಜಿ. ಎಚ್*** | 89 |

| | | |
|---|---|---|
| 18 | ಅಮರೇಶ ನುಗಡೋಣಿಯವರ 'ತಮಂಧದ ಕೇಡು' ಸಣ್ಣಕಥೆ: ಭಾಷಾ ವೈಶಿಷ್ಟ್ಯತೆ – ***ಸಂತೋಷಕುಮಾರ್. ಬಿ. ಪಿ*** | 94 |
| 19 | ಶರಣ ಸಾಹಿತ್ಯದಲ್ಲಿ ವೈಚಾರಿಕ ನೆಲೆಯ ಹೊಸ ಸಾಧ್ಯತೆಗಳು – ***ಶ್ವೇತಶ್ರೀ ಎನ್*** | 98 |
| 20 | ಬಂಜಾರ ಸಂಬೋಧನೆಯಲ್ಲಿ ಸಂಬಂಧವಾಚಕಗಳ ಪರ್ಯಾಯ ರೂಪಗಳು – ***ಶ್ರೀ ಉಮ್ಲರ ಗೋಪಿನಾಯ್ಕ*** | 104 |
| 21 | ಹೆಳವನಕಟ್ಟೆ ಗಿರಿಯಮ್ಮನವರ ಕೀರ್ತನೆಗಳಲ್ಲಿ ಭಕ್ತಿ – ***ನಾಗರಾಜ ಎಸ್ ಮತ್ತು ಡಾ. ಭೀಮಾಶಂಕರ ಜೋಷಿ*** | 111 |
| 22 | Impact of Globalization on Indian culture - ***Sadashiv Madar & Dr. Girish D H*** | 116 |
| 23 | Health Issues of Trafficked Women - ***Shruti & Dr. Patwardhan Rathod*** | 121 |
| 24 | Solid Waste Management in Rural Areas of Karnataka - ***Anjinappa D & Dr. Lokesh M. U*** | 134 |
| 25 | Study on Socio-Economic Conditions of Scheduled Tribes with Special Reference to the Medha Community in Davanagere District, Karnataka - ***Nitinkumar. V & Dr. Girish D. H*** | 141 |

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 1-5
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಎಚ್.ಎಸ್.ರಾಘವೇಂದ್ರರಾವ್ ವಿಮರ್ಶಾ ದೃಷ್ಟಿಯಲ್ಲಿ ದೇವನೂರ ಮಹಾದೇವರ ಕಾದಂಬರಿಗಳ ತಾತ್ವಿಕತೆ

**ವಸಂತ ಕುಮಾರ ಟಿ**
ಸಂಶೋಧನಾ ವಿದ್ಯಾರ್ಥಿ, ಕನ್ನಡ ಅಧ್ಯಯನ ವಿಭಾಗ, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ.

***Abstract:***
*ಕನ್ನಡ ಕಥಾ ಸಾಹಿತ್ಯಕ್ಕೆ ಹೊಸ ದಿಕ್ಕು ದೆಸೆಗಳನ್ನು ತೋರಿಸಿದ ದೇವನೂರ ಮಹಾದೇವರು ನವ್ಯೋತ್ತರ ಸಾಹಿತ್ಯ ಸಂದರ್ಭದ ಅಗ್ರಗಣ್ಯ ಲೇಖಕರು. ದಲಿತ ಸಾಹಿತ್ಯದಲ್ಲಿ ತಮ್ಮದೇ ಆದ ಛಾಪು ಮೂಡಿಸಿದ ಒಬ್ಬ ಶಿಷ್ಟ ಕಾದಂಬರಿಕಾರ ಎನಿಸಿಕೊಂಡಿರುವ ಅವರು ಒಬ್ಬ ಶಿಷ್ಟ ಬರಹಗಾರರಾಗಿ ಕನ್ನಡ ಸಾಹಿತ್ಯದ ಸಾರಸ್ವತ ಲೋಕದಲ್ಲಿ ಪ್ರಸಿದ್ಧರಾಗಿದ್ದಾರೆ. ಎಚ್.ಎಸ್.ಆರ್. ಹೇಳುವಂತೆ ದೇವನೂರ ಮಹಾದೇವರವರು ದಲಿತರೆನ್ನುವುದೋ, ಆ ಸಮುದಾಯಗಳ ಜೀವನಕ್ರಮವನ್ನು ಮುನ್ನಲೆಗೆ ತಂದರೆನ್ನುವುದೋ ಅವರು ಹೆಸರುವಾಸಿಯಾಗಿರುವುದಕ್ಕೆ ಕಾರಣವಾಗಬೇಕಿಲ್ಲ, ಪ್ರತಿಯೊಬ್ಬ ಲೇಖಕನೂ ತನಗೆ ಪರಿಚಿತವಾದ ಜೀವನ ಪರಿಸರವನ್ನು ಪರಿಚಿತವಾದ ಭಾಷೆಯನ್ನು ಬರವಣಿಗೆಗೆಂದು ಆರಿಸಿಕೊಳ್ಳುತ್ತಾನೆ. ಅದು ಸಹಜ ಆದರಿಂದ ಯಾರು ದೊಡ್ಡ ಲೇಖಕರಾಗುವುದಿಲ್ಲ ಇಲ್ಲಿ ಈ ಮಾತಿನ ಪ್ರಸ್ತಾಪ ಬರುವುದು ಅವರ ಬದುಕು ಮತ್ತು ಬರಹ ಹಾಗೂ ಐತಿಹಾಸಿಕ ಮಹತ್ವವನ್ನು ಚರ್ಚಿಸುವಾಗ ದೇವನೂರರ ನಿಜವಾದ ಮಹತ್ವವಿರುದು ಸೃಜನಶೀಲತೆಯ ಸ್ವರೂಪದಲ್ಲಿ.*

**Keywords:** *ಕನ್ನಡ ಕಾದಂಬರಿ, ಬಂಡಾಯ ಸಾಹಿತ್ಯ, ದೇವನೂರ ಮಹಾದೇವ.*

**ಪೀಠಿಕೆ**

ಕನ್ನಡ ಸಾಹಿತ್ಯದಲ್ಲಿ ದೇವನೂರ ಮಹಾದೇವರವರು 'ಒಡಲಾಳ' ಮತ್ತು 'ಕುಸುಮಬಾಲೆ' ಎಂಬ ಎರಡು ಕಾದಂಬರಿಯನ್ನು ಬರೆದು ಕನ್ನಡ ಸಾಹಿತ್ಯದಲ್ಲಿ ಅನನ್ಯ ಸ್ಥಾನವನ್ನು ಪಡೆದುಕೊಂಡರು. ದೇವನೂರ ಅವರಿಗೆ ಕುವೆಂಪು ಮತ್ತು ಅನಂತಮೂರ್ತಿಯವರ ಬರಹಗಳು ದೇವನೂರರ ಸಾಹಿತ್ಯ ಆಸಕ್ತಿಯನ್ನು ಹೆಚ್ಚುಗೊಳಿಸಿತು, ಆ ವೇಳೆಗಾಗಲೇ ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಪ್ರಕಟಗೊಂಡಿತು. ದೇವನೂರರ ಸೃಜನಶೀಲತೆಯು ಎರಡು ದಿಕ್ಕಿನಲ್ಲಿ ಹರಿಯುತ್ತಿತ್ತು. ಸಾಹಿತ್ಯ ಕುರಿತು ನವ್ಯ ಸಾಹಿತಿಗಳ ನಿಲುವು ಒಂದು ಕಡೆಯಾದರೆ ಆ ಚೌಕಟ್ಟಿನಲ್ಲಿ ಬರಲು ಒಪ್ಪದೆ ಇರುವ ಅನುಭವ ಲೋಕ ಮತ್ತೊಂದು ಕಡೆ. ದೇವನೂರರು ಅನುಭವ ಸಾಹಿತ್ಯ ಲೋಕವೇ ಮುಖ್ಯ ಎಂದು ನಂಬಿದರು. ಆ ವೇಳೆಗೆ ಪೂರ್ಣಚಂದ್ರ ತೇಜಸ್ವಿಯವರ 'ಅಬಚೂರಿನ ಪೋಸ್ಟ್ ಆಫೀಸ್' ಕೃತಿಯಲ್ಲಿನ ಬಂಡಾಯ ದೇವನೂರರ ಮೇಲೆ ಅಗಾದ ಪರಿಣಾಮ ಬೀರಿತು. ತೇಜಸ್ವಿ ಅವರಿಗೆ ನೇರವಾಗಿ ತಿಳಿಯದ ದಲಿತಲೋಕದ ಅನುಭವ ಮಹಾದೇವರಿಗೆ ತಿಳಿದಿತ್ತು.

***Please cite this article as:*** ವಸಂತ ಕುಮಾರ ಟಿ. (2024). ಎಚ್.ಎಸ್.ರಾಘವೇಂದ್ರರಾವ್ ವಿಮರ್ಶಾ ದೃಷ್ಟಿಯಲ್ಲಿ ದೇವನೂರ ಮಹಾದೇವರ ಕಾದಂಬರಿಗಳ ತಾತ್ವಿಕತೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(3), 1–5

ಕುವೆಂಪುರ ಗುತ್ತಿ–ತಿಮ್ಮಿಯರಾಗಲಿ, ಕಾರಂತರ ಚೋಮನಾಗಲಿ ಇವು ಯಾವೂ ಅವರ ಮೇಲೆ ಪರಿಣಾಮ ಬೀರಲಿಲ್ಲ.

ದಲಿತ ಲೋಕದ ಬಗ್ಗೆ ಮಹಾದೇವರು ತಾವು ಕಂಡ ನೋವುಗಳನ್ನು ಕಥನ ರೂಪದಲ್ಲಿ ಬರೆಯುವ ಒತ್ತಿಗೆ ದಲಿತ ಸಮುದಾಯದಲ್ಲಿ ಅಕ್ಷರ ಕಲಿತವರಿದ್ದರು. ಕೆ.ವಿ.ನಾರಾಯಣರವರು ಬಹಳ ಹಿಂದೆ ಒಂದು ಪ್ರಶ್ನೆ ಮಾಡಿದರು, ಮಹಾದೇವರು ದಲಿತರಿಗಾಗಿಯೇ ಕಥನ ಸಾಹಿತ್ಯಕ್ಕೆ ಕೈಹಾಕಿದರೂ ಅಥವಾ ಓದುಗರಿಗೆಂದು ಬರೆದರೋ, ಇವರಲ್ಲಿ ಅವರ ಬರವಣಿಗೆಯೇ ಉತ್ತರಿಸುತ್ತದೆ. ಎಚ್.ಎಸ್.ಆರ್. ಅವಲೋಕಿಸಿದಂತೆ, ಮಹಾದೇವರು ಮಾಸ್ತಿಯವರ ಹಾಗೆಯೇ ತೀರ ಚಿಕ್ಕ ವಯಸ್ಸಿನಲ್ಲಿಯೇ 'ಮಾಗುವಿಕೆ'ಯ ಫಲವಾಗಿ ಸಂಯಮ ಹಾಗೂ ತಿಳವಳಿಕೆಗಳನ್ನು ಪಡೆದರು. "ಮಹಾದೇವರು ಇನ್ನೊಂದು ಅಂಶವನ್ನು ಬಲವಾಗಿ ನಂಬಿದರು, ನಿರೂಪಣ ನಿಲುವುಗಳು ಕೃತಿಯ ಮೂಲಕ ಚಿಮ್ಮಬೇಕೇ ಹೊರತು ಅವನ ಮಾತುಗಳಿಂದ ಅಲ್ಲ".[1] ಮಹಾದೇವರ ಸಂವೇದನಾಶೀಲತೆ ಬೇರೆನೇ ಆಗಿತ್ತು. ಇಲ್ಲಿ ಕೋಪವೂ ಅಲ್ಲ ದುಃಖವೂ ಅಲ್ಲ ಬದಲಾಗಿ ಅದು ಎಲ್ಲವನ್ನೂ ಒಳಗೊಳ್ಳಬಲ್ಲ ಪ್ರೀತಿ. ಈ ಮಾತಿಗೆ ನಿದರ್ಶನವಾಗಿ ಯಶವಂತ ಚಿತ್ತಾಲರ ಮಾತು "ತಾನು ಹಿಡಿದಿದ್ದ ಅನುಭವ ಅದರ ಹುಟ್ಟಿಗೆ ಕಾರಣವಾದ ಸಾಮಾಜಿಕ ಸಂದರ್ಭದಲ್ಲಿ ನಿಜವಾಗುವಾಗಲೇ ಅದರ ಮಾನವೀಯ ಆಯಾಮಗಳನ್ನು ಸ್ಪಷ್ಟವಾಗಿ ಕಲಾತ್ಮಕವಾಗಿ ಅವು ನೇರವಾಗಿ ಮುಟ್ಟುವಂತೆ ತೆರೆದು ತೋರಿಸಿ ಆ ಸಂದರ್ಭವನ್ನೇ ಹೊಸಬೆಳಕಿನಲ್ಲಿ ನೋಡುವಂತೆ ಮಾಡುವುದರಲ್ಲಿ ಪ್ರತಿಯೊಂದು ಕಥೆಯು ಅಸಾಧಾರಣ ಯಶಸ್ಸು ಗಳಿಸಿದೆ."[2]

ಒಬ್ಬ ಲೇಖಕ ತನ್ನ ಅನುಭವವನ್ನು ತಾನು ಪಡೆದ ಸಾಮಾಜಿಕ ವಾತಾವರಣದಲ್ಲಿ ಅವುಗಳನ್ನು ಕಲಾತ್ಮಕವಾಗಿ ಜನಮಾನಸದಲ್ಲಿ ತೊರೆದು ತೋರಿಸುವ ಕೆಲಸದಲ್ಲಿ ಆತ ಪ್ರಮಾಣಿಕನಾಗುತ್ತಾನೆ. ಎಚ್.ಎಸ್.ಆರ್. ಹೇಳುವಂತೆ ಮಹಾದೇವರ ಒಡಲಾಳ ಕಾದಂಬರಿಯು ಒಂದು ಅದ್ಭುತವಾದ ಬರೆವಣಿಗೆಯನ್ನು ಒಳಗೊಂಡಿದ್ದು, ಇವು ಯಾವುದರ ಅನುಕರಣೆಯ ಮಾದರಿಯನ್ನು ಪಡೆದಿರುವುದಿಲ್ಲ. ಅದರ ಮೂಲ ಹಸಿವು. ಅದರಲ್ಲಿ ದೈಹಿಕವಾದ ಹಸಿವು, ಶಿಕ್ಷಣದ ಹಸಿವು, ಕಲಾತ್ಮಕವಾದ ಹಸಿವು, ಅಭಿವ್ಯಕ್ತಿಯ ಹಸಿವು ಅನ್ಯಾಯದಿಂದ ಬಿಡುಗಡೆ ಪಡೆಯುವ ತವಕ ಹೀಗೆ ಹಸಿವಿನ ನಾಗಲೋಟದಲ್ಲಿ ಕಾದಂಬರಿಯು ಒಳಗೊಂಡಿದೆ. 'ಒಡಲಾಳ' ಕೇವಲ ಹಳ್ಳಿಯ ಕಥೆಯಲ್ಲಿ ಇದು ಕುಟುಂಬ ಹಾಗೂ ಸಮುದಾಯವನ್ನು ಚಿತ್ರಿಸುವ ಬಗೆಯನ್ನು ಸಂಪೂರ್ಣವಾಗಿ ಕಟ್ಟಿಕೊಟ್ಟಿದೆ.

ಒಬ್ಬ ವ್ಯಕ್ತಿಯ ಅಸಹಾಯಕತೆ ಹೇಗಿರುತ್ತದೆ ಎಂದರೆ, ಇಲ್ಲಿ ಸಾಕಮ್ಮ ಹುಂಜವನ್ನು ಕಳೆದುಕೊಂಡ ಪ್ರಸಂಗ ಮತ್ತು ಕಡಲೆಕಾಯಿ ಮೂಟೆಯನ್ನು ಖಾಲಿಮಾಡುವ ಪ್ರಸಂಗ ಮತ್ತು ಶಿವು ಜೊತೆಗೆ ಅವಳು ನಡೆಸುವ ಸಂಭಾಷಣೆಯಲ್ಲಿ ಅವಳ ಘನತೆ ಮತ್ತು ಸೃಜನಶೀಲತೆ ಗೊತ್ತಾಗುವುದು. ಯಮನ ಜೊತೆ ತಾನು ನಡೆಯುವೆನೆಂದು ಅವಳು ಹೇಳುವ ಮಾತುಕತೆಯು ಬಡವರ ಬಾಳಿಗೆ ಹತಾಶೆ ಮತ್ತು ಆಶಾವಾದಿಗಳು ಹಿಡಿದ ಕನ್ನಡಿಯಾಗಿದೆ. ಇನ್ನೊಂದು ಕಡೆ ಪುಟ್ಟ ಗೌರಿಯು ಗೋಡೆಯ ಮೇಲೆ ಮತ್ತು ಶಿವು ಸ್ಲೇಟಿನ ಮೇಲೆ ಬರೆಯುವ ಚಿತ್ರಗಳು ಕಲೆಯ ಸೃಷ್ಟಿಗೆ ಅವಕಾಶ ಇಲ್ಲದೆ ವಂಚಿತವಾಗಿ ನರಳುವುದನ್ನು ತೋರಿಸುತ್ತದೆ. ಎಚ್.ಎಸ್.ಆರ್ ರವರು ಮಹಾದೇವರ ಕಾದಂಬರಿಯಲ್ಲಿ ಜನಾಂಗದ ಪರಿಕಲ್ಪನೆಯಲ್ಲಿ ಹೇಗೆ ವಿಶೇಷತೆ ಇದೆ ಎಂಬುದನ್ನು ಇಲ್ಲಿ ಹೇಳಿದ್ದಾರೆ. ಜನಾಂಗ ನಿರ್ಧಿಷ್ಟ ಮಾನದಂಡಗಳ ಮಾತು ತಿರುಗು ಮುರುಗಾದ ಜಾತಿವಾದ ಆಗಬಾರದು. ವಿಮರ್ಶೆಯಲ್ಲಿ ವಿಶಿಷ್ಟ ಅನುಭವಲೋಕಗಳು ಗಣನೆಗೆ ಬರುವುದೇ ಇಲ್ಲವೆಂದಲ್ಲ ಗಣನೆಗೆ ಬರುವುದು ವಿಶೇಷ

ಮಾನದಂಡಗಳ ರೂಪದಲ್ಲಿ ಅಲ್ಲಿ ಬದಲಾಗಿ ಮೂಲದ್ರವ್ಯಗಳ ಜ್ಞಾನದಲ್ಲಿ ಎನ್ನಬಹುದು, ನಿರ್ಧಿಷ್ಟ ಕೃತಿಯೊಂದು ರೂಪಗೊಳ್ಳುವುದು ಸನ್ನಿವೇಶ, ಆಶಯ, ಸೈದ್ಧಾಂತಿಕ ಹಾಗೂ ಸಾಮಾಜಿಕ ನೆಲೆಗಳನ್ನು ಮೂಲದ್ರವ್ಯವೆಂದು ಕರೆಯಬಹುದು.

ಎಚ್.ಎಸ್.ಆರ್ ರವರ ದೃಷ್ಟಿಕೋನದಲ್ಲಿ ಕಾದಂಬರಿಯ ತೌಲನಿಕತೆ ನೋಡುವುದಾರೆ **'ಒಡಲಾಳ'** ಪ್ರಕಟಗೊಂಡ ಐದು ವರ್ಷಗಳ ನಂತರ **'ಕುಸುಮಬಾಲೆ'** ಹೊರಬಂದಿತು. ಒಡಲಾಳಕ್ಕಿಂತ ಭಿನ್ನವಾದ ಸ್ವರೂಪವನ್ನು ಹೊಂದಿ, ಕೇವಲ ಇಪ್ಪತ್ತೆಂಟು ಪುಟಗಳ ಈ ಬರವಣಿಗೆಯು ಕಾದಂಬರಿಯ ಬಗ್ಗೆ ನಮಗಿದ್ದ ಕಲ್ಪನೆಯನ್ನೇ ತಲೆಕೆಳಗು ಮಾಡಿತು. ಕನ್ನಡ ಲೇಖಕರು ಮತ್ತು ಓದುಗರ ನಡುವೆ ಈ ಕಾದಂಬರಿಯ ಬಗ್ಗೆ ದ್ರುವೀಕರಣವಾಯಿತು. ಇದು ಅರ್ಥವಾಗುವುದಿಲ್ಲ ಇದನ್ನು ಕನ್ನಡಕ್ಕೆ ಅನುವಾದಿಸಬೇಕು ಎಂಬ ತೀರ್ಮಾನದವರೆಗೆ ವಿಮರ್ಶೆಗಳ ವರ್ಣಪಟಲ ಹರಡಿತ್ತು. ಲಂಕೇಶ್, ಚಂದ್ರಶೇಖರ ಪಾಟೀಲರು ಪ್ರಮಾಣಿಕವಾಗಿಯೇ ಇದನ್ನು ನಿರಾಕರಿಸಿದರು. ಬೇರೆ ಲೇಖಕರು ಇದನ್ನು ಸ್ವಾಗತಿಸಿದರು. ಈ ವಿವಾದ ಕುರಿತು ಮಹಾದೇವರಿಗೆ ಯಶವಂತ ಚಿತ್ತಾಲರು ಬರೆದ ಪತ್ರ–"ಇನ್ನೊಂದು ಸಂತೋಷ ಕೊಟ್ಟ ಸಂಗತಿ ಪುಸ್ತಕ ರೂಪದಲ್ಲಿ ಓದಿದಾಗ ಭಾಷೆ ತೊಡಕಾಗದೆ ತನ್ನಲ್ಲಿ ಕಾವ್ಯಶಕ್ತಿಯನ್ನು ಪ್ರಕಟಿಸಿತು ಎನ್ನುವುದು".[3] ಈ ನುಡಿಗಳಿಂದ ಒಂದು ಬರವಣಿಗೆಯನ್ನು ಹೇಗೆ ಸ್ವೀಕರಿಸಿ ಅನಂದಿಸಬೇಕು ಎಂಬುದನ್ನು ಇಲ್ಲಿ ವ್ಯಕ್ತಪಡಿಸಲಾಗಿದೆ. ದೇವನೂರ ಮಹಾದೇವರ ಎರಡು ಕಾದಂಬರಿ **'ಒಡಲಾಳ'** ಹಾಗೂ **'ಕುಸುಮಬಾಲೆ'** ಇಲ್ಲಿ ಕಾದಂಬರಿಕಾರನ ಪ್ರಜ್ಞೆ, ಪಾತ್ರಗಳ ಪ್ರಜ್ಞೆ ಮತ್ತು ಓದುಗರ ಪ್ರಜ್ಞೆಗಳು ಭಿನ್ನತೆಯನ್ನು ಕಳೆದು ಏಕತ್ರವಾಗಿ ಮಿಡಿಯುವುದನ್ನು ಕೃತಿಗಳಲ್ಲಿ ನೋಡಬಹುದು. ಮಹಾದೇವರು **'ಕುಸುಮಬಾಲೆ'**ಯು ಅದುವರೆಗಿನ ವಾಸ್ತವ, ಸಾಂಕೇತಿಕ, ನವ್ಯ ಮುಂತಾದ ಪರಂಪರೆಯನ್ನು ನಿರಾಕರಿಸಿ ಕನ್ನಡದ ದೇಸಿ ಪರಂಪರೆಯೊಳಗೆ ಇದ್ದ ಅಪರೂಪದ ಕಥನ ಕ್ರಮವನ್ನು ರೂಪಿಸಿಕೊಂಡಿದೆ.

ಮಹಾದೇವರ ಕುಸುಮಬಾಲೆಯು ಕನ್ನಡದ ಕಥಾಪರಂಪರೆಯಲ್ಲಿ ಕಾದಂಬರಿಯ ನೆಲೆಗಳನ್ನು ಕಂಡು–ಕೊಳ್ಳುವ ಮೊಟ್ಟಮೊದಲ ಪ್ರಯತ್ನ. ಇದರಲ್ಲಿ ಸಹಜವಾಗಿಯೇ ಭಾರತೀಯ ಕಥನದ ಪರ್ಯಾಯ ಮಾರ್ಗಗಳು ಬಳಕೆಯಾದವು. ಇದರ ಕಾದಂಬರಿ ಲಿಖಿತವಾದ ಶಿಷ್ಟ ಪರಂಪರೆಯನ್ನು ಬಳಸುವ ಉಮೇದನ್ನು ತೋರಿಸಲಿಲ್ಲ. ಅದುವರೆಗೂ ಇಂಥ ಭಾವಗೀತೆ ಮಾದರಿಗೆ ಮನಸ್ಸು ಕೊಡಲಿಲ್ಲ. ಆ ದಿನಗಳಲ್ಲಿ ಪ್ರಚಲಿತವಾದ ದಲಿತ ಜೀವನ ಕೇಂದ್ರವಾದ ಜನಪದ ಕಥನ ಕಾವ್ಯಗಳು ಆಯ್ಕೆಯಾದವು. ಕುಸುಮಬಾಲೆಯು ಕವಿತೆ, ನಾಟಕ ಮತ್ತು ಗದ್ಯ ಕಥನಗಳೆಂಬ ಮೂರು ಬಗೆಗಳನ್ನು ಒಳಗೊಂಡಿದ್ದು, ಈ ಮಾರ್ಗವು ಅಪಾರವಾದ ಸಾಧ್ಯತೆಗಳನ್ನು ಹೊಂದಿತ್ತು. ಕೆಲವು ಲೇಖಕರು ಹೇಳುವಂತೆ ಮಹಾದೇವರು ವಡ್ಡಾರಾಧನೆ, ಬೃಹತ್ಕಥೆಯಂತಹ ಕೃತಿಗಳನ್ನು ಓದಿ ಅವುಗಳ ಕಥನ ಕ್ರಮದಿಂದ ಪ್ರಭಾವಿತರಾಗಿದ್ದರು. ಇಲ್ಲಿ ಮಹಾದೇವರು ಯಾವುದೇ ಅನುಕರಣೆಗೆ ಒಳಗಾಗುವುದಿಲ್ಲ. ಇದರ ಜೊತೆಗೆ ಮಹಾದೇವರು ಕೆಲವು ಆಫ್ರಿಕಾ, ಸ್ಪೇನ್ ಮತ್ತು ಲ್ಯಾಟಿನ್ ಅಮೇರಿಕಾದ ಕೆಲವು ಕೃತಿಗಳನ್ನು ಓದಿಕೊಂಡು ಅಪಾರವಾದ ಜ್ಞಾನ ಸಂಪತ್ತನ್ನು ಪಡೆದುಕೊಂಡಿದ್ದರು.

ಮಹಾದೇವರು ಕುಸುಮಬಾಲೆಯನ್ನು ವಸಾಹತುಶಾಹಿಯ ಕಪಿಮುಷ್ಠಿಯಿಂದ ಬಿಡಿಸಿಕೊಂಡು ತನ್ನದೇ ಆದ ಹೊಸಹಾದಿಯನ್ನು ಕಂಡುಕೊಳ್ಳುವ ಜಾಗತಿಕ ಪ್ರಯತ್ನವನ್ನು ಮಾಡಿದ್ದಾರೆ. ಮಹಾದೇವರವರು ಹಳೆಯ ಹಾದಿಗಳನ್ನು ಬಳಸದೆಯೇ ಅನೇಕ ಅವಿಷ್ಕಾರಗಳನ್ನು ತಂದುಕೊಂಡಿದ್ದರಿಂದ ಅವರ ಕಾದಂಬರಿಯು ಅನನ್ಯವಾಯಿತು. ಮಹಾದೇವರ ಕಥನ ಕಾದಂಬರಿಗಳೇ ಕಥೆಗೆ ಹಾಗೂ ಪಾತ್ರಗಳಿಗೆ ಮತ್ತು

ಕಥೆಯಲ್ಲಿ ಬರುವಂತಹ ದಲಿತರ ಜೀವನ ಚಿತ್ರಣವನ್ನು ಕಾದಂಬರಿಯ ಚೌಕಟ್ಟಿನಲ್ಲಿ ನೋಡಬಹುದು. ಮಹಾದೇವರ ಕಾದಂಬರಿಯ ಬಗ್ಗೆ ಹೆಚ್ಚು ಚರ್ಚೆಗಳು ನಡೆದಿವೆ. ಇದರಲ್ಲಿ ಯು.ಆರ್. ಅನಂತಮೂರ್ತಿ ಹಾಗೂ ಕೆ.ವಿ. ನಾರಾಯಣರು ಎರಡು ದ್ರುವಗಳಂತೆ ಒಡಲಾಳ ಹಾಗೂ ಕುಸುಮಬಾಲೆ ಬಗ್ಗೆ ಚರ್ಚಿಸಿರುವುದು ಕಾಣುತ್ತದೆ. ದೇವನೂರರ ಪಾತ್ರಗಳನ್ನು ಶಿವರಾಮ ಕಾರಂತರ ಚೋಮ ಮತ್ತು ಕುವೆಂಪು ಅವರ ನಾಯಿ ಗುತ್ತಿಯ ಸಂಗಡ ಹೋಲಿಸಿದ ಅನಂತಮೂರ್ತಿಯವರು ಪಾಶ್ಚಾತ್ಯ ಸಾಹಿತ್ಯ ವಿಮರ್ಶೆಯ ಪರಿಭಾಷೆಯು ಬರುವ ಲೋ–ಮೈಮೆಟಿಕ್ ಎಂಬ ಮಾತಿನಿಂದ ಆ ಪಾತ್ರಗಳನ್ನು ವಿವರಿಸಿದರು. ಒಂದು ಕಡೆ ಅಸಾಹಕತೆಯನ್ನು ತೋರ್ಪಡಿಸುವಾಗ ಚೋಮನ ಅಸಾಹಕತೆಯ ದುರಂತ ನಾಯಿ ಗುತ್ತಿಯ ಜಾಣತನ ಅದೇ ಹಾದಿಯಲ್ಲಿ ದೇವನೂರರ ಸಾಕಮ್ಮ, ಶಿವು, ಗಾರೆಸಿದ್ದಮಾವ ಮತ್ತು ಅಮಾಸ ಮುಂತಾದವರು. ಈ ಬಗೆಯವರು ಎಂದು ಅವರ ಅನಿಸಿಕೆ, ಇಲ್ಲಿ ಪಾತ್ರಗಳ ಸಾಮರ್ಥ್ಯವನ್ನು ಸಾಮಾಜಿಕ ಪರಿಸರವಾಗಲೀ ಇತಿಹಾಸವಾಗಲೀ ಗ್ರಹಿಸುವಲ್ಲಿ ಸೋತಿದೆ, ಎಂಬುದು ಈ ಕಥನದಲ್ಲಿ ಕಂಡುಕೊಳ್ಳುವ ಸಾಧ್ಯತೆ ಇದೆ.

ಕಾದಂಬರಿಯಲ್ಲಿ ಹಾಸ್ಯ ಅಣಕ ಮತ್ತು ಗೇಲಿಗಳು ಶೋಷಕ ಸಮಾಜದ ಸಂಗಡ ಏಣಿಯುವ ಕಾರ್ಯದಲ್ಲಿ ತಮ್ಮ ತಮ್ಮಲ್ಲಿ ಮಾತನಾಡುವಾಗ ಮುನ್ನಲೆಗೆ ಬರುತ್ತದೆ. ಇಲ್ಲಿ ಧೈರ್ಯತೆ ಎಂಬುದನ್ನು ನಾವು ಗಾರೆಸಿದ್ದಮಾವನಂಥವರಲ್ಲಿ ಬದಲಾಗುತ್ತಿರುವ ಸಾಕ್ಷಿಗಳನ್ನು ನೋಡಬಹುದು. ಇಲ್ಲಿ ವಿಶೇಷಣಗಳ ಬದಲಾಗಿ ಓದುಗರ ಮೇಲೆ ಪ್ರಭಾವ ಬೀರುವಂತಹ ಹತ್ತು ಹಲವು ಉಪಕರಣಗಳನ್ನು ಅವರು ಕಂಡುಕೊಂಡಿದ್ದಾರೆ, ಪಾತ್ರಗಳ ಕುರಿತು ಮಾತನಾಡುವಾಗ ಪಾತ್ರದಾರಿಯ ವರ್ತನೆಯ ಜೊತೆಯಲ್ಲಿ ನಿರೂಪಕನು ಅಂತರಂಗ ಮತ್ತು ಬಹಿರಂಗಗಳೆರಡರ ಬಗ್ಗೆಯು ಕೂಡ ವ್ಯಾಖ್ಯಾನಗಳನ್ನು ನೀಡುತ್ತಾನೆ.

ನಾವು ಕಾದಂಬರಿಯಲ್ಲಿ ಬರುವಂತಹ ಕಥಾ ಪ್ರಸಂಗಗಳನ್ನು ಕುರಿತು ಮಾತನಾಡುವುದಾದರೆ ಮಹಾದೇವರವರು ಘಟನೆಗಳಿಗಿಂತ ವರ್ಣನೆಗಳಿಗೆ ಹೆಚ್ಚು ಅವಕಾಶ ಕೊಡುವುದು ಸೂಕ್ತ ಎಂದು ಭಾವಿಸುತ್ತಾರೆ. ಯಾವುದೇ ಒಂದು ಕಥೆಯನ್ನು ಜಗತ್ತಿಗೆ ಪರಿಚಯಿಸಬೇಕಾದರೆ ಇತಿಮಿತಿಗಳ ಪರಿಚಯ ಮಾಡಲು ಭೌತಿಕವಾದ ವಿವರಗಳನ್ನು ಕಾವ್ಯಾತ್ಮಕವಾದ ವಿವರಣೆಯಿಂದ ಪಡೆಯಬೇಕಾಗುತ್ತದೆ. ಒಬ್ಬ ಲೇಖಕ ಜಡವಸ್ತುಗಳಿಗೂ ಜೀವ ಕೊಡಬೇಕಾದ ಅನಿವಾರ್ಯತೆ ಬರುತ್ತದೆ. ಕುಸುಮಬಾಲೆ ಕಾದಂಬರಿಯು ಹೇಳುತ್ತಿರುವುದು ಇಡೀ ಸಮುದಾಯದ ಇತಿಹಾಸ. ವರ್ತಮಾನ ಮತ್ತು ಮುನ್ನೋಟಗಳನ್ನು ಸಮುದಾಯದ ಚಲನಶೀಲತೆಯನ್ನು ಒಂದೆರಡು ಪಾತ್ರಗಳಿಂದ ತಿಳಿಯಲು ಆಗುವುದಿಲ್ಲ, ಒಂದು ಎರಡು ಪಾತ್ರಗಳು ಸೇರಿ ಗೆದ್ದಲು ಹುಳು ಕಟ್ಟುವ ಹಾಗೆ ಕಟ್ಟಿದರೆ ಒಂದು ಕಥೆಯಾಗಿ ಮಾರ್ಪಾಟ್ಟಾಗುತ್ತದೆ. ಕಾದಂಬರಿಯ ಲೋಕದಲ್ಲಿ ಬರುವ ಯಾಡ–ಅಮಾಸ ಮದ್ವಾಚಾರ್ಯ ಮುಂತಾದವರು ಬಲಿಪಶುಗಳೊ ಅಪರಾಧಿಗಳೋ ಹೇಳಲಾಗದು. ಕುರಿಯಯ್ಯನ ನನ್ನಿಯು ಕಾದಂಬರಿಯ ಕೇಂದ್ರಬಿಂದು, ಇಲ್ಲಿ ಪುರಾಣವಾಗಲಿ ವರ್ತಮಾನವಾಗಲಿ ಅಲ್ಲಿ ನಡೆಯು ಸಂಗತಿಗಳು ದಲಿತರ ಹೋರಾಟಕ್ಕೆ ಮುಂದಾದರೂ ನನ್ನಿಯು ಇಪ್ಪತ್ತೊಂದನೆಯ ಶತಮಾನಕ್ಕೆ ಒಳಗೊಳ್ಳುತ್ತದೆ. ಇಲ್ಲಿ ಅವನ ಮಾತುಗಳು ಅವನದಾಗಿರುವುದಿಲ್ಲ ಅವು ತೊರಾರ ಹಟ್ಟಿಯ ಜೋತಮ್ಮ ಅವನಿಂದ ಆಡಿಸಿದ ಮಾತುಗಳು.

'ಒಡಲಾಳ' ದಲ್ಲಿ ರೇಖಾಚಿತ್ರಗಳಾಗಿದ್ದ ಪಾತ್ರಗಳು ಕುಸುಮಬಾಲೆಯಲ್ಲಿ ವರ್ಣಚಿತ್ರಗಳಾಗುತ್ತವೆ. ಮೊದಲಿಗೆ ಇಲ್ಲದಿರುವ ಧ್ವನಿಶಕ್ತಿಯು ನಂತರದ ಕುಸುಮಬಾಲೆಯಲ್ಲಿ ಒದಗಿಬಂದಿದೆ. ಇಲ್ಲಿ ಜಾನಪದ

ಅವ್ಯಕ್ತಿ, ಜನಪದರ ಹಾಡು–ಪಾಡು ಮತ್ತು ಆಧುನಿಕ ಸಮಾಜ ಬಿಕ್ಕಟ್ಟುಗಳು ಇಂತಹದೊಂದು ವಾತಾವರಣದಲ್ಲಿ ಹೆಣೆದಿರುವ ಲೇಖಕ ಕನ್ನಡದಲ್ಲಿ ಮತ್ತೊಬ್ಬರಿಲ್ಲ. ದೇವನೂರ ಮಹಾದೇವರವರ ಕಾದಂಬರಿಯಲ್ಲಿ ಬಳಸಿರುವ ಭಾಷೆಯು ಸಾಕಷ್ಟು ವಾಗ್ವಾದಕ್ಕೆ ಕಾರಣವಾಗಿದೆ. ಇಲ್ಲಿ ಬಳಸಿರುವ ಭಾಷೆ ಅರ್ಥವಾಗುವುದಿಲ್ಲ, ಇದು ಒಳಗೆ ಇಳಿಯುವುದಿಲ್ಲ ಎಂಬುದು ಚಂದ್ರಶೇಖರ ಪಾಟೀಲ, ಲಂಕೇಶ್ ಮುಂತಾದವರ ಮನದಾಳದ ಮಾತು. ಇನ್ನೊಂದು ಕಡೆ ಕಾದಂಬರಿಯ ಒಳ ಭಾಷೆಯನ್ನು ಒಕ್ಕೊರಳಿನಿಂದ ಹೊಗಳಿದ್ದಾರೆ. ಚದುರಂಗರವರು ಕುಸುಮಬಾಲೆಯಲ್ಲಿ ಬಳಸಿರುವ ಭಾಷೆಯು "ಹೊಯ್ಸಳ ಶಿಲ್ಪಗಳು ಕಲ್ಲನ್ನು ಮೇಣ ಎನ್ನುವ ಹಾಗೆ".[4] ಉಪಯೋಗಿಸಿದ್ದಾರೆ ಎಂದು ಹೊಗಳಿದ್ದಾರೆ. ಕುಸುಮಬಾಲೆ ಕಾದಂಬರಿಗೆ ಬಂದ ಅಕ್ಷೇಪಣೆಗಳು ಒಡಲಾಳಕ್ಕೆ ಬಂದಿಲ್ಲ. ಸಂಭಾಷಣೆ, ವರ್ಣನೆ, ನಿರೂಪಣೆ, ಆಲೋಚನೆ ಮುಂತಾದ ಹಲವು ಕೆಲಸಗಳಿಗೆ ಆಡುಮಾತನ್ನು ಬಳಸುವ ಪ್ರಯೋಗ ಕನ್ನಡದಲ್ಲಿ ಕಡಿಮೆ, ನಿರ್ಧಿಷ್ಟ ಪ್ರದೇಶದ ಸಾಮಾಜಿಕ ಉಪಭಾಷೆಯು 'ಕುಸುಮಬಾಲೆ'ಯಲ್ಲಿ ಬಳಸಿರುವ ಭಾಷೆಯ ತಳಹದಿಯಾದರೂ ಒಂದು ಇನ್ನೊಂದರ ನಕಲು ಅಲ್ಲ, ಜನರಾಡುವ ಭಾಷೆಯು ಕಾದಂಬರಿಯಲ್ಲಿ ಬಂದಾಗ ಕೆಲವು ಕಟ್ಟುಪಾಡುಗಳಿಗೆ ಒಳಗಾಗುತ್ತದೆ. ಆಡುಮಾತು ನಡಿಗೆಯಾದರೆ ಸಾಹಿತ್ಯ ಭಾಷೆ ನರ್ತನ, ಕಾದಂಬರಿಯಲ್ಲಿ ನರ್ತನ–ನಡಿಗೆ ಎರಡರ ಸಂಯೋಜನೆ ಇರುತ್ತದೆ.

ನಿಜವಾಗಿಯು 'ಕುಸುಮಬಾಲೆ'ಯು ಸಾವಧಾನದ ಓದನ್ನು ಬಯಸುವುದು ಅದರ ಭಾಷೆಯಿಂದ ಮಾತ್ರ. ಆದರೆ ಒಟ್ಟು ರಚನಾಕ್ರಮದಿಂದ ಓದಿದರೆ ಮಾತ್ರ ನಮಗೆ ನಿಜವಾದ ಸಾಹಿತ್ಯ ಅನುಭವ ಕೊಡುವುದೇ ವಿನಃ ಅರ್ಥದ ಉಂಡೆಗಳನ್ನು ಅಲ್ಲ. ಕಾದಂಬರಿಯಲ್ಲಿ ಮೌಖಿಕ ರಚನೆಯ ಮಾದರಿಯನ್ನು ದೇಸಿಯ ಕಥನಗಳನ್ನು ಬಳಸಿರುವುದನ್ನು ಕಾಣಬಹುದು. ದೇಸಿಯತೆಯಲ್ಲಿ ಮೌಖಿಕ ರಚನೆಯನ್ನು ಕಂಡು ಕೊಳ್ಳುವುದು ಕಾದಂಬರಿಗಳಲ್ಲಿ ಎಂಬುದು ಸತ್ಯವಾದ ವಿಚಾರ. ಆ ಕಾದಂಬರಿಯಲ್ಲಿ ಬಳಸಿದ ಪ್ರಾದೇಶಿಕತೆ ಹಾಗೂ ದೇಶಿಯತೆಯ ನೆಲೆಗಟ್ಟಿನಲ್ಲಿನ ಭಾಷೆಯು ಕೂಡ ವಿಶೇಷ ಎಂಬುದಕ್ಕೆ ಕಾರಣವಾಗಿದೆ. ಮಹಾದೇವರ ಕಾದಂಬರಿಗಳಲ್ಲಿ ಹೊಸ ಹಾದಿಯನ್ನು ಕಂಡುಕೊಳ್ಳುವ ಜಾಗತಿಕ ಪ್ರಯತ್ನವನ್ನು ಮಾಡುವುದರ ಮೂಲಕ ಹಳೆಯ ಹಾದಿಯನ್ನು ಬಳಸದೆಯೇ ಅನೇಕ ಅವಿಷ್ಕಾರಗಳಿಗೆ ಸಾಕ್ಷಿಭೂತವಾಗಿದೆ.

**ಕೊನೆಟಿಪ್ಪಣಿಗಳು**

1. ರಾವೇಂದ್ರ ರಾವ್ ಎಚ್.ಎಸ್. (2020). *ನೀರಿಗೆ ಮೂಡಿದ ಆಕಾರ.* ಪುಟ. 248
2. *ಅದೇ.* ಪುಟ. 240
3. *ಅದೇ.* ಪುಟ. 251
4. *ಅದೇ.* ಪುಟ. 258

**ಪರಾಮರ್ಶನ ಗ್ರಂಥಗಳು**


- ದೇವನೂರ ಮಹಾದೇವ. (2015). ಒಡಲಾಳ. ಪುಸ್ತಕ ಪ್ರಕಾಶನ.
- ದೇವನೂರ ಮಹಾದೇವ. (2018). *ಕುಸುಮ ಬಾಲೆ.* ಅಭಿನವ ಪ್ರಕಾಶನ.
- ರಾವೇಂದ್ರ ರಾವ್ ಎಚ್.ಎಸ್. (2020). *ನೀರಿಗೆ ಮೂಡಿದ ಆಕಾರ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 6-11
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಕಲಾ ಮಾಧ್ಯಮವಾಗಿ ಕುಂಬಾರಿಕೆ

**ಆಶಾಲತಾ[1] ಮತ್ತು ಡಾ. ಶಾಂತರಾಜು ಎಚ್. ವಿ [2]**

[1]ಸಂಶೋಧನಾ ವಿದ್ಯಾರ್ಥಿ, ದಾವಣಗೆರೆ ವಿಶ್ವವಿದ್ಯಾನಿಲಯ, ಶಿವಗಂಗೋತ್ರಿ. ದಾವಣಗೆರೆ.
[2]ಸಹಾಯಕ ಪ್ರಾಧ್ಯಾಪಕರು, ದಾವಣಗೆರೆ ವಿಶ್ವವಿದ್ಯಾನಿಲಯ, ಶಿವಗಂಗೋತ್ರಿ. ದಾವಣಗೆರೆ.

***Abstract:***

*ಇತಿಹಾಸ ಪೂರ್ವದಿಂದಲೂ ಕಲಾ ಜಗತ್ತಿನ ಚರಿತ್ರೆಯಲ್ಲಿ ದೃಶ್ಯ ಕಲಾ ಮಾಧ್ಯಮವಾಗಿ ಮಣ್ಣು ಎಲ್ಲರ ಗಮನವನ್ನು ಸೆಳೆಯುತ್ತಲೇ ಬಂದಿದೆ. ಹಿಂದಿನಿಂದ ಇಂದಿನ ವರೆಗೆ ಪ್ರಪಂಚದ ಎಲ್ಲಾ ಕಡೆಗಳಲ್ಲಿ ಪ್ರಾಯೋಗಿಕ ಕಲೆಯಾಗಿ ಮಣ್ಣು ನಮ್ಮೊಂದಿಗೆ ಬೇರ್ಪಡಿಸಲಾರದಂತೆ ಬೆಳೆದು ಬಂದಿದೆ. ಇದು ಸಾಮಾನ್ಯರಿಗೂ ಕೂಡಾ ದೊರಕುವುದರಿಂದ ಎಲ್ಲರೂ ಇದರಲ್ಲಿ ತಮ್ಮ ಸಿದ್ಧಿಯನ್ನು ಗಳಿಸಿಕೊಂಡಿದ್ದಾರೆ. ನಮ್ಮಲ್ಲಿ 'ಮಣ್ಣಿನ ಕಲೆ ಬಡವನ ಶಿಲ್ಪ' ಎಂಬ ನುಡಿಗಟ್ಟೊಂದು ಇದೆ. ಬರಿ ಮಡಿಕೆ ಕುಡಿಕೆಗಳಿಗೆ ಇದು ಸೀಮಿತವಾಗಿರದರೆ, ಮೂರ್ತಿ ಶಿಲ್ಪಕ್ಕೂ ಶತಮಾನದಿಂದ ಬಳಕೆಯಾಗುತ್ತಾ ಬಂದಿದೆ. ಆಕಾಶದೆತ್ತರಕ್ಕೆ ಈ ಮಣ್ಣನ್ನು ಬೆಳೆಯುವಂತೆ ಮಾಡಿದ, ಅದರೊಂದಿಗೆ ತಾನೂ ಬೆಳೆದ ಕುಂಬಾರ ಒಂದು ಅರ್ಥದಲ್ಲಿ ಮಹಾನ್ ಕಲಾವಿದ. ಇದರಿಂದ ಈ ನೆಲದ ನಾಗರಿಕತೆಯನ್ನು, ಉಜ್ವಲ ಸಂಸ್ಕೃತಿಯನ್ನು ಪ್ರತಿಬಿಂಬಿಸುವಲ್ಲಿ ಮಣ್ಣಿನ ಪಾತ್ರ ಬಹು ದೊಡ್ಡದು.*

**Keywords:** *ದೃಶ್ಯಕಲೆ, ಕಲಾ ಮಾಧ್ಯಮ, ಮಣ್ಣು, ಕುಂಬಾರ, ಕುಂಬಾರಿಕೆ, ಕರಕುಶಲ ಕಲೆ.*

## ಪೀಠಿಕೆ

ಕುಂಬಾರಿಕೆ ಕೇವಲ ಮಡಿಕೆ ಕುಡಿಕೆ ಮಾಡುವಲ್ಲಿ ಮಾತ್ರ ಸೀಮಿತವಾಗಿಲ್ಲ. ನಾಗರಿಕತೆ ಬೆಳೆದಂತೆ ಕುಂಬಾರನು ಇದನ್ನು ಕಲಾ ಮಾಧ್ಯಮವಾಗಿ ಬಳಸಿಕೊಂಡನು. ಆಟಿಕೆ ಸಾಮಾನು, ದೈವದ ಮೂರ್ತಿಗಳು, ಅಲಂಕರಣ ಸಾಮಾನುಗಳನ್ನಾಗಿ ಮಣ್ಣಿನಲ್ಲಿ ಅರಳಿಸುವ ಕೌಶಲ್ಯವನ್ನು ಕಂಡುಕೊಂಡನು. ಗೊಂಬೆ ಮತ್ತು ಆಟಿಕೆ ಸಾಮಾನುಗಳನ್ನು ಮಣ್ಣಿನಿಂದ ಮಾಡುವ ಕಲೆ ಪ್ರಾಚೀನ ನಾಗರಿಕತೆಯಲ್ಲಿ ಭಾರತ ಮೊದಲಿನದು. ಈ ಹಿನ್ನಲೆಯನ್ನು ಗಮನಿಸಿದಾಗ ಸಿಂಧೂ ನಾಗರಿಕತೆಯಲ್ಲಿ ನಮಗೆ ಹೆಚ್ಚು ಮಂಗ, ಕುರಿ, ನಾಯಿ, ಹಂದಿ, ಗೂಳಿ, ಸುಂದರವಾದ ಹೆಣ್ಣಿನ ಮತ್ತು ಗಂಡಿನ ಮೂರ್ತಿಗಳು, ಪ್ರಾಣಿ, ಪಕ್ಷಿ ಹೀಗೆ ಸಾಕಷ್ಟು ಸಂಖ್ಯೆಯ ಮಣ್ಣಿನ ಮುದ್ರಿಕೆಗಳು ಹಾಗೂ ಸುಟ್ಟಮಣ್ಣಿನ ಮೂರ್ತಿಗಳು ದೊರಕುತ್ತವೆ.

ನಮ್ಮ ದೇಶದಲ್ಲಿ ದಸರಾ, ಗೌರಿ–ಗಣೇಶ ಮುಂತಾದ ಹಬ್ಬಗಳ ಸಂದರ್ಭದಲ್ಲಿ ಬಗೆಬಗೆಯ ಗೊಂಬೆಗಳು ಹಾಗೂ ದೇವರ ಮೂರ್ತಿಗಳನ್ನು ಕೂರಿಸುವ ಪರಿಪಾಠವಿದೆ. ಮೈಸೂರು ದಸರಾ ಸಂದರ್ಭದಲ್ಲಿ ಪಿಂಗಾಣಿಗಿಂತ ಮೊದಲು ಮಣ್ಣಿನ ಗೊಂಬೆಗಳನ್ನು ಮನೆಮನೆಗಳಲ್ಲಿ ಇಡುತ್ತಿದ್ದರು. ಶಾಂತಿನಿಕೇತನದ ಪ್ರಭಾವದಿಂದ ಬಂಗಾಲದಲ್ಲಿ ರೈತರು ಬಳಸುವ ಪರಿಕಾರಗಳಾದ ಬಂಡಿ, ಎತ್ತು, ದನಕರುಗಳು, ಗುಡಿ, ಗುಡಿಸಲುಗಳನ್ನು ಮಣ್ಣಿನಲ್ಲಿ

***Please cite this article as:*** ಆಶಾಲತಾ ಮತ್ತು ಶಾಂತರಾಜು ಎಚ್. ವಿ. (2024). ಕಲಾ ಮಾಧ್ಯಮವಾಗಿ ಕುಂಬಾರಿಕೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(3), 6–11

ಮಾಡುತ್ತಾರೆ. ಇಲ್ಲಿನ ಕೃಷ್ಣನಗರದ ಮಣ್ಣಿನ ಮೂರ್ತಿಗಳು ವಿಶ್ವದಾದ್ಯಂತ ಹೆಸರು ಪಡೆದಿವೆ. ಅಸ್ಸಾಂ, ಬಿಹಾರ ರಾಜ್ಯಗಳಲ್ಲಿ ಮಣ್ಣಿನ ಮೂರ್ತಿ ಹೆಸರು ಪಡೆದಿವೆ. ಪ್ರಾಣಿ, ಪಕ್ಷಿ ಮುಖವುಳ್ಳ ಸ್ತ್ರೀಮೂರ್ತಿಗಳು, ಅಸ್ಸಾಂ ವರ್ಣಾಲಂಕಾರವುಳ್ಳ ನೃತ್ಯದ ಮಣ್ಣಿನ ಮೂರ್ತಿಗಳು ಪೌರಾಣಿಕ ಕಥೆಗಳನ್ನು ಹೇಳುತ್ತವೆ. ಇಲ್ಲಿ ಜನರಿಗೆ ಮಣ್ಣಿನ ಮೇಲೆ ಬಲು ಪ್ರೀತಿ. ಇಲ್ಲಿಯ ರೈಲ್ವೆ ನಿಲ್ದಾಣಗಳಲ್ಲಿರುವ ಟೀ ಪಾಯಿಂಟ್‌ಗಳಲ್ಲಿ ಚಹಾವನ್ನು ಪ್ಲಾಸ್ಟಿಕ್ ಇಲ್ಲವೇ ಕಾಗದದ ಕಪ್‌ಗಳಲ್ಲಿ ನೀಡದೆ ಮಣ್ಣಿನ ಕಪ್‌ಗಳನ್ನು ಬಳಸುವಂತೆ ಅದೇಶ ಹೊರಡಿಸಿದ್ದನ್ನು ಇಲ್ಲಿ ಸ್ಮರಿಸಿಕೊಳ್ಳಬೇಕು. ದಕ್ಷಿಣ ಭಾರತದ ತಮಿಳುನಾಡಿನಲ್ಲಿ ಶಾತವಾಹನರ ಕಾಲದ ಆನೆ, ಕುದುರೆ ಇತ್ಯಾದಿ ಮಣ್ಣಿನ ಮೂರ್ತಿಗಳು ಇಂದಿಗೂ ಕಣ್ಮನ ಸೆಳೆಯುತ್ತವೆ. ಅಲಂಕರಣ ಮಾಡಿದ ವರ್ಣಮಯವಾದ ಮಡಿಕೆಗಳು ಬಹು ಪ್ರಾಚೀನ ಸಂಸ್ಕೃತಿಯಲ್ಲಿಯೇ ನಮಗೆ ದೊರಕುತ್ತವೆ. ಆಧುನಿಕ ಯುಗದಲ್ಲಿ ಕುಂಬಾರರು ಸೇರಿದಂತೆ ಇತರರು ಕೂಡಾ ಅಮೂರ್ತ ಶಿಲ್ಪಗಳ ರಚನೆಗೆ ಮಣ್ಣನ್ನು ಬಳಸುತ್ತಿದ್ದಾರೆ. ಮಣ್ಣಿನೊಂದಿಗೆ ಈಗೀಗ ಕುಂಬಾರರು ಸಿಮೆಂಟ್‌ದಲ್ಲಿ ಮೂರ್ತಿ ಮಾಡುವ ಕಲೆಯನ್ನು ಕರಗತ ಮಾಡಿಕೊಳ್ಳುತ್ತಿದ್ದಾರೆ. ಅದು ಅವರ ಬದುಕಿಗೆ ಅನಿವಾರ್ಯವೂ ಆಗುತ್ತಿದೆ. ಪ್ರಾಚೀನದಿಂದ ಅರ್ವಾಚೀನದವರೆಗೂ, ವಿಶ್ವದಾದ್ಯಂತ ನಡೆದ ಉತ್ಖನನಗಳಲ್ಲಿ ದೊರೆತ ಮಡಿಕೆಗಳಲ್ಲಿ, ಜ್ಯಾಮಿತಿಯ ರೇಖಾ ಚಿತ್ರಗಳನ್ನು, ನವಿಲು, ಜಿಂಕೆ, ಹಕ್ಕಿ ಬಸವ, ನಾಯಿ ಮೊದಲಾದ ಪ್ರಾಣಿಗಳು ಹಾಗೂ ಹೂವು, ಗಿಡ, ಬಳ್ಳಿ ಚಿತ್ರಗಳನ್ನು ಕಾಣಬಹುದು. ಈ ಚಿತ್ರಗಳನ್ನು ಮಡಕೆಗಳು ತಕ್ಕಮಟ್ಟಿಗೆ ಹಸಿ ಇರುವಾಗಲೇ ಡಬ್ಬಣ, ಸೂಜಿಯಂತಹ ಮೊನಚಾದ ವಸ್ತುವಿನಿಂದ ಚುಚ್ಚಿ ಬಿಡಿಸಲಾಗಿದೆ. ಅನೇಕ ಮಡಿಕೆಗಳಲ್ಲಿ ಕಚ್ಚು ಹೊಡೆದು, ಚಿತ್ತಾರಗಳನ್ನು ಬಿಡಿಸಲಾಗಿದೆ, ಇದಲ್ಲದೆ ಮುದ್ರೆಗಳನ್ನು ಒತ್ತಿ ಮಡಕೆಗಳನ್ನು ಅಲಂಕರಿಸಿರುವುದು ಕಂಡುಬರುತ್ತದೆ.

ಕರಕುಶಲ ಕಲೆಗಳಲ್ಲಿ ಪ್ರಮುಖವೆನ್ನಲಾದ ಕುಂಬಾರಿಕೆ ಅಥವಾ ಮೃತ್ತಿಕಾ ಶಿಲ್ಪಕಲೆಯನ್ನು ಇಂದಿಗೂ ಜೀವಂತವಾಗಿ ಕಾಯ್ದುಕೊಂಡುಬಂದ ಹಲವಾರು ಕೇಂದ್ರಗಳು ಭಾರತದಾದ್ಯಂತ ಹರಡಿವೆ. ಸಿಂಧ್, ಪಂಜಾಬ್‌ದೊಂದಿಗೆ ಗುಜರಾತ್, ದೆಹಲಿ, ಕಾಶ್ಮೀರ, ಜಲಂಧರ್, ಮಧುರೈ ಮತ್ತು ಕರ್ನಾಟಕದ ವಿವಿಧೆಡೆಗಳಲ್ಲಿ ಈ ಕಲಾಪರಂಪರೆಯು ಕಾಯ್ದುಕೊಂಡು ಬಂದಿವೆ, ಇಂತಹ ಹೆಸರು ಪಡೆದ ಸ್ಥಳಗಳಲ್ಲದೆ ಭಾರತದ ಪ್ರತಿಯೊಂದು ಹಳ್ಳಿಗಳಲ್ಲಿ ಈ ಕಲೆಯು ಇಂದಿಗೂ ಜೀವಂತವಾಗಿರುವುದನ್ನು ಕಾಣುತ್ತೇವೆ. ಇಂತಹ ಪ್ರಾಚೀನ ಕಲೆಗಳೊಂದಿಗೆ ಪಿಂಗಾಣಿ, ಗಾಜು ಮುಂತಾದ ಸಲಕರಣೆಗಳೊಂದಿಗೆ ಪ್ರಾಣಿ, ಪಕ್ಷಿ, ಮಾನವ ಮತ್ತು ದೇವತಾ ಮೂರ್ತಿ ಶಿಲ್ಪಗಳು, ವಿವಿಧ ನಮೂನೆಯ ಅಲಂಕಾರಿಕ ವಸ್ತುಗಳು ಕುಂಬಾರಿಕೆಯ ಕರಕುಶಲ ಕಲೆಯ ವಿಸ್ತಿರ್ಣಗಳೇ ಆಗಿವೆ ಎಂದರೆ ತಪ್ಪಾಗಲಾರದು.[1]

ಅಲಂಕಾರಯುತವಾದ ಮೆರಗಿನ ಕಂದು ಬಣ್ಣದ ಹಳದಿ ಗೆರೆಗಳ ವೈವಿಧ್ಯಮಯ ಅಲಂಕಾರದೊಡನೆ ಕೂಡಿದ ಮಣ್ಣಿನ ಮಡಕೆಗಳು ದಕ್ಷಿಣ ಭಾರತದ ವೆಲ್ಲೂರ, ಉತ್ತರ ಅರ್ಕಾಟ್ ಮತ್ತು ಕುಂಭಕೋಣಂಗಳು ಪಚ್ಚೆ ಹಸಿರು ಮತ್ತು ಕಂದು ಬಣ್ಣದ ಮೆರಗಿನ ಮಡಕೆಗಳಿಗೆ ಹೆಸರನ್ನು ಪಡೆದ ಸ್ಥಳಗಳಾಗಿವೆ. ಬಹಳ ಹಿಂದೆ ಇತರ ವಸ್ತಗಳನ್ನು ಬೆರೆಸಿ ಹಳದಿ ಮಣ್ಣಿನಿಂದ ವಿಶೇಷವಾಗಿ ತಯಾರಿಸಿದ ಮಿಶ್ರಣದಿಂದ ಬಣ್ಣ ಹಾಕಿದ ಕಪ್ಪು ಮಡಕೆಗಳನ್ನು ಮಥುರಾದಲ್ಲಿ ಮಾಡುತ್ತಿದ್ದರು. ಇದರಲ್ಲಿ ಎರಡು ವಿವಿಧ ಮಡಕೆಗಳಲ್ಲಿ, ಬೆಂಕಿಯಲ್ಲಿ ಸುಡುವ ಪೂರ್ವದಲ್ಲಿ ಬಣ್ಣಗೂಡಿಸುವದು. ಎರಡನೆಯದ್ದು, ಸುಟ್ಟ ನಂತರ ಬಣ್ಣಗೂಡಿಸುವದು. ಮಥುರೆಯ ಕಪ್ಪು ಮತ್ತು ಕೆಂಪು ಮಡಕೆಗಳಲ್ಲಿ ಬಣ್ಣ ಹೂಡಿಸಿ ಮೇಲ್ಮೈಗಳ ಮೇಲೆ ಅರಗನ್ನು ಬಳಿಯಲಾಗುತ್ತದೆ. ಆದರೆ ರಾಜಸ್ಥಾನದಲ್ಲಿ ವಿವಿಧ

ಬಣ್ಣದ ಅರಗನ್ನು ಪದರು ಪದರಾಗಿ ಸವರಲಾಗುತ್ತದೆ. ಕುಂಬಾರರು ಈ ಎಲ್ಲಾ ಸಾಂಪ್ರದಾಯಿಕ ಕೆಲಸಗಳಲ್ಲಿ ಗೆರೆ ಮತ್ತು ಬಣ್ಣಗಳಲ್ಲಿ ಸಂಪೂರ್ಣ ಸಂಬಂಧ ಹಾಗೂ ಪ್ರಕೃತಿಯ ತುಂಬಾ ಸೂಕ್ಷ್ಮವಾದ ಅರ್ಥ ವಿತರಣೆ ಪ್ರಚೋದನೆಯನ್ನು ಕೊಟ್ಟಿದ್ದಾರೆ, ಇದರಿಂದ ಭಾರತೀಯ ಕುಂಬಾರರು ಪಾರಂಪಾರಿಕ ಆಕೃತಿಗಳು ಮತ್ತು ಮಾದರಿಗಳಿಗೆ ತುಂಬಾ ವೈವಿಧ್ಯತೆಯನ್ನು ಸೇರಿಸಿದ್ದಾನೆ.[2] ಕುಂಭಾಲಂಕರಣ ಮಾಡುವುದರಲ್ಲಿ ಪ್ರದೇಶಕ್ಕನುಗುಣವಾಗಿ ನಾನಾ ಶೈಲಿಗಳು ಬೆಳೆದು ಬಂದಿದೆ. ವಿಂಕಾ, ಗುಮೆಲ್ ನಿತ್ತಾ, ರುಮೇನಿಯಾ ಮತ್ತು ಉಕ್ರೇನಿನ ಕ್ಯೂಕ್ ಟೆನಿ ಮತ್ತು ಟ್ರೆಪೋಲ್, ಗ್ರೀಕ್, ರೋಮನ್, ಇತ್ಯಾದಿ ಕೆಲವು ಶೈಲಿಗಳಲ್ಲಿ ನೀಳ ಮಡಕೆಗಳಿಗೆ, ಕೆಲವು ಗುಡಾಣದಂತಹ ದುಂಡಾಕೃತಿಯ ಮಡಿಕೆಗಳಿಗೆ ಪ್ರಾಧ್ಯಾನತೆ ನೀಡಿರುವುದು ಕಂಡುಬರುತ್ತದೆ. ಮಡಿಕೆಗಳಿಗೆ ಗಾಜಿನ ಮೈ ಭರಿಸುವ ಕಲೆ ಪ್ರಾಚೀನ ಕಾಲದಲ್ಲಿಯೇ ಕುಂಬಾರರಿಗೆ ತಿಳಿದಿತ್ತು. ಮಣ್ಣಿನಿಂದ ಮಾಡಿದ ಅಲಂಕರಣಗಳನ್ನು ಅಂಟಿಸುವುದೇ ಪ್ರತಿಮಾಲಂಕರಣ, ಬೇರೆ ಬೇರೆ ನಮೂನೆಗಳನ್ನು ಮರ ಇಲ್ಲವೆ ಮಣ್ಣಿನ ಅಚ್ಚಿನಲ್ಲಿಟ್ಟು ಅವುಗಳನ್ನು ತೆಗೆದು ಅಂಟಿಸುವರು. ಪ್ರತಿಮೆಗಳನ್ನು ನೇರವಾಗಿಯೇ ಮಡಕೆಯ ಮೈಮೇಲೆ ಮಾಡಬಹುದು. ಉದಾಹರಣೆಗೆ ನೀರಿನ ಹೂಜಿಗಳಿಗೆ, ಹಿಡಿಯನ್ನು ಅಂಟಿಸುವುದು. ತತ್ರಾಣಿಗೆ ಬಾಯನ್ನು ಅಂಟಿಸುವದು, ಜಾಡಿಯ ಮುಚ್ಚಳಕ್ಕೆ ಬಿರುಡೆಯನ್ನು ಅಂಟಿಸುವದು. ಕಚ್ಚು ಅಲಂಕರಣ ಬರ್ಮಾದ ಹಾಗೆ ಒಣಗಿದ ಮಡಕೆಯ ಮೈಮೇಲೆ ಚಿತ್ತಾರಗಳನ್ನು ಕೆತ್ತುವದಕ್ಕೆ; ಕಚ್ಚು ಹೊಡೆಯುವದಕ್ಕೆ ಕಚ್ಚು ಅಲಂಕರಣ ಎನ್ನುತ್ತಾರೆ. ಕಚ್ಚು ಹೊಡೆಯಲು ಸಾಮಾನ್ಯವಾಗಿ ಡಬ್ಬಣವನ್ನು ಮೊನಚಾದ ವಸ್ತುಗಳನ್ನು ಬಿದುರಿನ ಕಡ್ಡಿಗಳನ್ನು ಉಪಯೋಗಿಸುವರು. ಮಡಕೆಯ ಮೈ ಬಹಳಷ್ಟು ಒಣಗಿರಬಾರದು. ಚೀನಾದ ಟಂಗ್ ಮತ್ತು ಸಂಗ್ ವಂಶದ ಅರಸರ ಕಾಲದಲ್ಲಿ ಪಿಂಗಾಣಿ ಪಾತ್ರೆಗಳಿಗೆ ಕಚ್ಚಿನ ಅಲಂಕರಣ ಮಾಡುವ ರೂಢಿ ಇತ್ತು. ಮುದ್ರಾಲಂಕರಣದಲ್ಲಿ ಪೂರ್ವಭಾವಿಯಾಗಿ ತಯಾರಿಸಿದ ಅಚ್ಚುಗಳಿಂದ ಮುದ್ರೆ ಒತ್ತುವುದನ್ನು ಮುದ್ರಾಲಂಕರಣ ಎನ್ನುವರು. ಇದು ಪ್ರಾಚೀನ ಕಾಲದಿಂದಲೂ ಬಳಕೆಯಲ್ಲಿದೆ. ಮುದ್ರೆಗಳ ನಮೂನೆಗಳನ್ನು ಮರ, ಪ್ಲ್ಯಾಸ್ಟರ್ ಆಫ್ ಪ್ಯಾರಿಸ್‌ದಲ್ಲಿ ಮಾಡುವರು. ಕಪ್ಪೆ ಚಿಪ್ಪನ್ನು ಈ ಮುದ್ರಾಲಂಕರಣಕ್ಕೆ ಬಳಸುತ್ತಾರೆ. ಈ ವಿಧಾನದಲ್ಲಿ ರೋಮನ್ನರು ಪ್ರಸಿದ್ಧಿಯನ್ನು ಪಡೆದಿದ್ದರು. ಹಲವು ಬಗೆಯ ವರ್ಣದ ದ್ರವರೂಪದ ಮಣ್ಣನ್ನು ಸಿದ್ಧಪಡಿಸಿ ಮಡಕೆಗಳಿಗೆ ಲೇಪಿಸುವುದೇ ಸಂಗಮರಿ ಶಿಲಾಲಂಕರಣ. 17ನೆಯ ಶತಮಾನದ ಐರೋಪ್ಯದಲ್ಲಿ ಮಾರ್ಬಲಿಂಗ ಅಲಂಕರಣ ಹೆಚ್ಚಾಗಿ ಬಳಕೆಯಲ್ಲಿತ್ತು. ಚಪ್ಪಟೆ ಆಕೃತಿಯ ಕುಂಭಗಳಿಗೆ ಇದನ್ನು ಮಾಡುತ್ತಾರೆ. ವಿವಿಧ ವರ್ಣಗಳಿಂದ ಬ್ರಷ್ ಮೂಲಕ ಬಣ್ಣ ಹಾಕುವ, ಮೆರಗುಗೊಳಿಸುವ ವಿಧಾನ ಬಹುಕಾಲದಿಂದಲೂ ಮುಂದುವರಿಸಿಕೊಂಡು ಬಂದಿದೆ. ಗ್ಲೇಸಿಂಗ್ ಮಾಡುವಾಗಲೇ ಇದನ್ನು ಮಾಡುವರು. ಗ್ಲೇಸಿಂಗ್ ಕೂಡಾ, ಕುಂಭಗಳಿಗೆ ಒಂದು ರೀತಿಯ ಅಲಂಕಾರವನ್ನು ಒಸಗಿಸುವುದು. ಈ ಅಲಂಕಾರಣಗಳಲ್ಲದೆ ಸ್ಲಿಪ್‌ಪೇಟಿಂಗ್ ಎನ್ನುವ ಇನ್ನೊಂದು ಪ್ರಕಾರವಿದೆ. ದ್ರವರೂಪದ ಮಣ್ಣಿಗೆ 'ಸ್ಲಿಪ್' ಎಂದು ಕರೆಯುತ್ತಾರೆ. ಬ್ರಷ್‌ನಿಂದ ತೆಳು ಲೇಪನವನ್ನು ಕೊಟ್ಟು ಕುಂಭವನ್ನು ಅಂದಗೊಳಿಸುವರು.[3]

ವೈಜ್ಞಾನಿಕವಾಗಿ ಕುಂಭೋದ್ಯಮಗಳು ಬೆಳೆದದ್ದನ್ನು ಕಾಣಬಹುದು. ಮಣ್ಣನ್ನು ಹೊರತುಪಡಿಸಿ ಇತರ ಪ್ರಕಾರಗಳು ಕುಂಭಕಲೆಯ ಪರಿಮಿತಿಯಲ್ಲಿ ಬರುವುದಿಲ್ಲ. ಮೂಲತಃ ಕುಂಬಾರನಿಂದ ಸಿದ್ಧವಾದವುಗಳನ್ನು ಕುಂಭಕಲೆಯಲ್ಲಿ ಸೇರಿಸಿಕೊಳ್ಳಬಹುದು. ಮಣ್ಣು ಸುಟ್ಟು ಮಡಕೆಯಾದ ಮೇಲೆ ಅದು ಪುನಃ ಮೊದಲಿನ ರೂಪಕ್ಕೆ ಬರುವುದಿಲ್ಲ. ಕುಂಬಾರಿಕೆ ಎಂಬ ಪದವು ಒಂದು

ಸಮೂಹ ಸೂಚಕ ಪದವಾಗಿದ್ದು, ಅದನ್ನು ಲೇಡಿ ಮಣ್ಣಿನಿಂದ ತಯಾರಿಸಿದ ಯಾವುದೇ ವಸ್ತುವನ್ನು ವಿವರಿಸಲು ಬಳಸಬಹುದು. ಇದನ್ನು 450 ರಿಂದ 700 ಡಿಗ್ರಿ ಸೆಲ್ಸಿಯಸ್ ತಾಪಮಾನದಲ್ಲಿ ಬಿಸಿ ಮಾಡಲಾಗುತ್ತದೆ. ಹೀಗಾಗಿ ಅದು ರಾಸಾಯನಿಕ ಗುಣದೊಂದಿಗೆ ಸಂಯೋಜಕ ನೀರನ್ನು ಕಳೆದುಕೊಳ್ಳುತ್ತದೆ. ರಾಸಾಯನಿಕವಾಗಿ ಪರಿವರ್ತಿತಗೊಂಡು ಕಲ್ಲಿನಂತಹ ವಸ್ತುವಾಗಿ ಅದರ ಮೂಲ ಮಣ್ಣಿನ ಸ್ಥಿತಿಗೆ ಹಿಂತಿರಗಲು ಸಾಧ್ಯವಾಗದ ರೀತಿಯಲ್ಲಿರುತ್ತದೆ.

ಸಾಮಾನ್ಯವಾಗಿ ಜೇಡಿ ಮಣ್ಣಿನಿಂದ ಮಾಡಿ ಅವಿಗೆಯಲ್ಲಿ ಸುಟ್ಟ ಎಲ್ಲ ವಿವಿಧ ಮಣ್ಣಿನಿಂದ ಮಾಡಿದ ಮಡಕೆ ಕುಡಿಕೆ ಮೊದಲಾದವುಗಳು ಮೊದಲ ಪ್ರಬೇಧದಲ್ಲಿ ಬರುತ್ತವೆ. ಟೆರ್ರಾಕೋಟ ಮತ್ತು ಗ್ಲೇಸ್ಡ್ ಇರದ ಮಡಕೆಗಳು ಈ ವರ್ಗದವು. ಇವು ಸಾಮಾನ್ಯವಾಗಿ 400 ರಿಂದ 800 ಸೆಲ್ಸಿಯಸ್ ಶಾಖದಲ್ಲಿ ಸುಡಲ್ಪಡುತ್ತವೆ. ಇವು ಗಡುಸಾಗಿರುವುದಿಲ್ಲ. ಸುಲಭವಾಗಿ ಇವುಗಳ ಮೇಲೆ ಕಲೆ ಬೀಳುತ್ತವೆ. ಪ್ರಾಚೀನ ಮೆಡಿಟೇರಿಯನ್ ಮತ್ತು 16ನೆಯ ಶತಮಾನದ ವರೆಗಿನ ಚೀನಾ ಜಪಾನ್ ದೇಶದ ಮಡಿಕೆಗಳು ಈ ವರ್ಗದವುಗಳು. ಹೆಚ್ಚಿನ ತಾಪಮಾನದಲ್ಲಿ ಸುಟ್ಟ ಮಡಕೆಗಳನ್ನು ಕಲ್ಮಡಕೆಗಳೆನ್ನುತ್ತಾರೆ. ಮಡಕೆಗಳು ಸುಟ್ಟ ಮೇಲೆ ಕಲ್ಲಿನಂತೆ ಕಠಿಣತೆಯನ್ನು ಪಡೆಯುತ್ತವೆ. ಕಲ್ಗಡಿಗೆ ಜೇಡಿ ಮತ್ತು ಬೆಣಚು ಜೇಡಿ ಬೆರೆತ ಮಿಶ್ರಣದಿಂದ ಕಲ್ಮಡಿಕೆ ತಯಾರಿಸುವರು. ಇವನ್ನು ಸಾಮಾನ್ಯವಾಗಿ 1200 ರಿಂದ 1300 ಡಿಗ್ರಿ ಸೆಲಿಯಸ್ ಶಾಖದಲ್ಲಿ ಸುಡುವರು. ಆರೋಗ್ಯ ಮತ್ತು ಅಂದದ ದೃಷ್ಟಿಯಿಂದ ಇವುಗಳಿಗೆ ಗಾಜಿನ ಲೇಪನವನ್ನು ಬಡಿಸುವರು. ಪಿಂಗಾಣಿ ವಸ್ತುಗಳು ಚೀನಿ ಮಣ್ಣಿನಿಂದಾದವುಗಳು. ಚೀನಿ ಭಾಷೆಯಲ್ಲಿ ಪಿಂಗಾಣಿಗೆ 'ಕೆಯೊಲಿನ್' ಎನ್ನುತ್ತಾರೆ. ಕೆಯೊಲಿನ್ ಎಂದರೆ ಉನ್ನತವಾದ ಬೆಟ್ಟ ಎಂದರ್ಥ.[4] ಮೊದಲು ಈ ಬೆಟ್ಟಗಳಿಂದಲೇ ಮಣ್ಣನ್ನು ತಂದಿರಬೇಕು. ಸಾಮಾನ್ಯವಾಗಿ 1200 ಡಿಗ್ರಿ ಸೆಲ್ಸಿಯಸ್ ಉಷ್ಣತೆಯಲ್ಲಿ ಬೇಯಿಸುವರು. ಬರ್ಲಿನಿನ ಜಾನ್‌ಫ್ರೆಡ್ಸ್ ಬೊಟಜರ್ ಎಂಬವನು ಗಡಸು ಪಿಂಗಾಣಿಯನ್ನು ಕಂಡುಹಿಡಿದನು. ಚೀನಿ ಮಣ್ಣು ಮತ್ತು ಚೀನಿ ಕಲ್ಲುಗಳು ಗಡಸು ಪಿಂಗಾಣಿಯ ಘಟಕಗಳು. ಗಾಜಿನಂತಹ ನುಣುಪು ಚೀನಿ ಕಲ್ಲನ್ನು ಗರಿಷ್ಠ ಉಷ್ಣತೆಯಲ್ಲಿ ಕರಗದೆ ಕೆಯೋಲಿನ್ ಜೊತೆ ಅಂಟಿಕೊಳ್ಳುವುದು. ಇದರಿಂದ ಗಡಸು ಪಿಂಗಾಣಿಯು ಸಿದ್ಧವಾಗುತ್ತದೆ. ಜೊತೆಗೆ ಗಾಜಿನಂತಹ ಪಾರದರ್ಶಕ ಗುಣವನ್ನು ಪಡೆಯುತ್ತದೆ. ನುಣ್ಣಗೆ ಪುಡಿ ಮಾಡಿದ ಮರಳು ಮತ್ತು ಶ್ರಾವಕ ವಸ್ತುಗಳ ಮಿಶ್ರಣ, ಕಾಚ ದ್ರವ್ಯ ಅಥವಾ ಒಡೆದ ಪಿಂಗಾಣಿ ವಸ್ತು ಮೊದಲಾದ ಸಿಲಿಕೇಡ್‌ಗಳನ್ನು ಸುಟ್ಟ ಜೇಡಿಮಣ್ಣಿನ ಜೊತೆ ಕರಗಿಸಿ ಮಾಡಿದ ತೆಳು ದ್ರಾವಣದಿಂದ ಮೆದು ಪಿಂಗಾಣಿಯನ್ನು ತಯಾರಿಸುವರು. ಇದು ಬಣ್ಣದಲ್ಲಿ ತುಸು ಹಳದಿ ಛಾಯೆಯ ಕೆನೆ ಬಣ್ಣವನ್ನು ಹೊಂದಿರುತ್ತದೆ. ಪಿಂಗಾಣಿಯ ಇನ್ನೊಂದು ಕೃತಕ ಪ್ರಕಾರವನ್ನು 'ಅಸ್ಥಿ ಪಿಂಗಾಣಿ' ಎನ್ನುತ್ತಾರೆ. ಕೆಯೋಲಿನ್ ಮತ್ತು ಒಂದು ಭಾಗ ಅಸ್ತಿ ಭಸ್ಮ ಇವುಗಳ ಮಿಶ್ರಣದಿಂದ ಇದನ್ನು ತಯಾರಿಸುವರು. ಈ ಪಿಂಗಾಣಿ ವಸ್ತುಗಳು ಆಮ್ಲಗಳನ್ನು ತಡೆದುಕೊಳ್ಳಬಲ್ಲವು. ಕ್ರಿ.ಶ.1350ರಲ್ಲಿ ಇಂಗ್ಲೆಂಡಿನ ಪ್ರಯೋಗಾಲಯದಲ್ಲಿ ಕಂಡು ಹಿಡಿದ ಪಿಂಗಾಣಿ ವಸ್ತುಗಳು ಮೆದು ಪಿಂಗಾಣಿಗಿಂತ ಶುಭ್ರವಾಗಿರುತ್ತವೆ. ಇದರಲ್ಲಿ ಫ್ರಾಸ್ಫೇಟ್ ಸೇರ್ಪಡೆಯಾಗಿರುವುದರಿಂದ ಕರಗಿಸಲು ಇದು ಸುಲಭವಾಗಿರುತ್ತದೆ.[5]

ಪಾಶ್ಚಾತ್ಯ ದೇಶಗಳಿಗೆ ಸುಮಾರು 16–17 ನೆಯ ಶತಮಾನದಲ್ಲಿ ಇವುಗಳು ಚೀನಾದಿಂದ ಇತರ ದೇಶಗಳಿಗೆ ಆಮದುಗೊಂಡವೆಂದು ಹೇಳುತ್ತಾರೆ. ಸುಮಾರು 18ನೆಯ ಶತಮಾನದಲ್ಲಿ ಜರ್ಮನಿ ದೇಶದ ಯೊಹಾನೆಸ್ ಬಾಟ್ ಗರೆಂಬಾತನು ಕುಂಭೋದ್ಯಮದ ಮೂಲ ದ್ರವ್ಯವಾದ ಜೇಡಿಮಣ್ಣಿಗೆ ಎಲುಬಿನ ಭಸ್ಮವನ್ನು ಬೆರೆಸಿ ಪಾತ್ರೆಪಗಡೆಗಳನ್ನು ತಯಾರು ಮಾಡಿದನು. ಇದನ್ನೆ ಆತ 'ಎಲುಬು

ಪಿಂಗಾಣಿ' ಎಂದು ಕರೆದನು. ಅದು ಗುಣಮಟ್ಟದಲ್ಲಿ ಗಟ್ಟಿ ಹಾಗೂ ಅರೆಪಾರದರ್ಶವಾಗಿರುತ್ತದೆ.[6] ಈ ಪಿಂಗಾಣಿಗಳಲ್ಲಿ ಅಲಂಕಾರಿಕ ಪ್ರತಿಮೆಗಳು ಮತ್ತು ಆಟಿಕೆ ಹಾಗೂ ಗೊಂಬೆಗಳು ಎಂದು ವಿಂಗಡಿಸಬಹುದು. ಊಟದ ತಟ್ಟೆ, ನೀರು ಕುಡಿಯುವ ಲೋಟ, ತಿಂಡಿ ತಿನ್ನುವ ಗಂಗಾಳಗಳು, ಊಟದ ಟೇಬಲ್ ಮೇಲೆ ಬೇಯಿಸಿದ ಆಹಾರ ಪದಾರ್ಥಗಳನ್ನು ಹಾಕಿಡುವ ಬಟ್ಟಲು, ಬೋಗುಣಿಗಳು, ನೀರಿನ ಹೂಜಿಗಳು, ಮಧ್ಯದ ಬಾಟಲಿಗಳು, ಭರಣಿಗಳು, ಕಪ್ಪು, ಸಾಸರ್ ಇತ್ಯಾದಿಗಳನ್ನು ಗೃಹೋಪಯೋಗಿ ವಸ್ತಗಳನ್ನಾಗಿ ಬಳಸುತ್ತಾರೆ. ತಾಪಧಾರಕ ಪ್ರಭೇದಕಗಳು, ಇವನ್ನು ಹೆಚ್ಚು ಉಷ್ಣತೆಯನ್ನು ತಾಳಿಕೊಳ್ಳಬಲ್ಲ ರಿಫಿರಿಯಾಕ್ಟರಿ ಮಣ್ಣಿನಿಂದ ತಯಾರಿಸುವರು. ಈ ಮಣ್ಣು ಕಲ್ಲಿದ್ದಲು ಗಣಿಯಲ್ಲಿ ಸಿಗುತ್ತದೆ. ಇದರಲ್ಲಿ 50% ಸಿಲಿಕಾ ವಸ್ತು ಇರುತ್ತದೆ. ಇವುಗಳನ್ನು 1200 ರಿಂದ 1650 ಡಿಗ್ರಿ ಸೆಲ್ಸಿಯಸ್ ಉಷ್ಣತೆಯಲ್ಲಿ ತಯರಿಸುವರು. ಇದಕ್ಕೆ ಸುಟ್ಟ ಇಟ್ಟಿಗೆಗಳ ಉತ್ತಮವದ ಉದಾಹರಣೆಗಳಾಗಿವೆ.[7]

ಟೆರ್ರಾಕೊಟಾ ಕೂಡಾ ಕುಂಭಕಲೆಯ ಒಂದು ಪ್ರಭೇದ. ಇವುಗಳನ್ನು ಮಡಕೆ, ಕುಡಿಕೆಗಳನ್ನು ಸುಡುವಂತೆ ಹೆಚ್ಚಿನ ಉಷ್ಣತೆಯಲ್ಲಿ ಸುಟ್ಟ ಕಾರಣ ಇವು ನಸುಗೆಂಪು ಇಲ್ಲದೆ ಕಿತ್ತಳೆ ಬಣ್ಣಗಳಿಂದ ಕೂಡಿರುತ್ತವೆ. ಇದರಿಂದ ಸಾಮಾನ್ಯವಾಗಿ ಅಲಂಕಾರಿಕ ವಸ್ತಗಳನ್ನು ತಯಾರಿಸುತ್ತಾರೆ. ಉಳಿದ ಭಾರತದಲ್ಲಿ ಹರಿಯುವ ಸಿಂಧೂ ಮತ್ತು ಗಂಗಾ ನದಿಯ ಮುಖಗಳಲ್ಲಿ ಹೆಚ್ಚು ಸಿಗುವ ಜೇಡಿ ಮಣ್ಣಿನಿಂದ ಅಲ್ಲಿ ಇದು ಹೆಚ್ಚಾಗಿ ಬೆಳೆಯಲು ಕಾರಣವಾಯಿತು. ಬಂಗಾಳದಲ್ಲಿ ಉತ್ತಮವದ ಜೇಡಿ ಮಣ್ಣು ದೊರೆಯುವುದರಿಂದ ಟೆರ್ರಾಕೊಟಾ ಕಲೆಗೆ ಬಂಗಾಲವು ತವರು ಮನೆಯಾಯಿತು. ಇತ್ತ ದಕ್ಷಿಣದಲ್ಲಿ ಶಾತವಾಹನ ಅರಸರು ಇದನ್ನು ಬಹಳಷ್ಟು ಪೋಷಿಸಿದರು. ಅವರೊಂದಿಗೆ ಮೌರ್ಯರು, ಕುಶಾನರು, ಗುಪ್ತರು ಇದನ್ನು ಇನ್ನಷ್ಟು ಪೋಷಿಸಿ ಬೆಳೆಸಿದರು. ಇಲ್ಲಿ ದೈವ ಮೂರ್ತಿಗಳನ್ನು ಅಚ್ಚಿನಿಂದ ತಯಾರಿಸುತ್ತಿದ್ದರು. ಸುವರ್ಣಯುಗವೆಂದು ಕರೆಯಲ್ಪಡುವ ಗುಪ್ತರ ಕಾಲದಲ್ಲಿ ಟೆರ್ರಾಕೊಟಾ ಕಲೆ ಮತ್ತು ಕುಂಭಕಲೆ ಸಂಸ್ಕೃತಿಯು ಸುವರ್ಣ ಯುಗದಲ್ಲಿತ್ತು. ಇವರ ಕಾಲದಲ್ಲಿ ತಯಾರಾದ ದೆಹಲಿಯ ರಾಷ್ಟ್ರೀಯ ವಸ್ತು ಸಂಗ್ರಹಾಲಯದಲ್ಲಿರುವ ಗಂಗಾ ಎನ್ನುವ ಶಿಲ್ಪವು ಮತ್ತು ಉಂಗುರ ಕೂದಲಿನ, ಹಣೆಮೇಲೆ ಕಣ್ಣುಳ್ಳ ಪಾರ್ವತಿಯ ಮುಖ ಶಿಲ್ಪವು ಅತ್ಯಂತ ಅದ್ಭುತ ಮುಖ ಶಿಲ್ಪವೆಂದು ಹೊಗಳಲ್ಪಟ್ಟಿದೆ. ಟೆರ್ರಾಕೊಟಾ ತಯಾರಿಕೆಯಲ್ಲಿ ಲೇಪ್ಯಕರ್ಮವೆನ್ನುವ ಹೊಸ ಕಲ್ಪನೆಯುಳ್ಳ ಶಬ್ದವು ಆಗ ಆವಿಷ್ಕಾರಗೊಂಡಿತು. ರಾಜಸ್ಥಾನದ ರಂಗಮಹಲು, ಬಂಗಾಳದ ಮಹಾಸ್ಥಾನ, ಬಂಗಳಾದ ಫರಹಪುರಗಳು ಅಂದು ಟೆರ್ರಾಕೊಟಾ ಕಲೆಯ ಹೆಸರಾಂತ ಕೇಂದ್ರಗಳಾಗಿದ್ದವು.

ಭಾರತದ ಭೂಪಟದ ತುದಿಯಲ್ಲಿರುವ ಜಮ್ಮುವಿನಿಂದ ಅನತಿ ದೂರದಲ್ಲಿರುವ ಅಖನೂರ ಟೆರ್ರಾಕೊಟಾ ಶಿಲ್ಪಕ್ಕೆ ತನ್ನದೇ ಆದ ವಿಶೇಷತೆ ಇದೆ. ಇಲ್ಲಿನ ಕೆಂಪು ಹೊಲವೊಂದರಲ್ಲಿ ಸುಮಾರು ಕ್ರಿ.ಪೂ 3ನೆಯ ಶತಮಾನದ ಗಾಂಧಾರ ಕಲೆಯ ನೆರಳಿನ ಸುಮಾರು 90 ಟೆರ್ರಾಕೊಟಾ ಸುಂದರ ಶಿಲ್ಪಗಳು ದೊರೆತಿವೆ. ಆ ಕಾಲವನ್ನು ಕಾಶ್ಮೀರದ ಸುವರ್ಣ ಯಗವೆಂದೂ ಹೆಸರಿಸಲಾಗುತ್ತದೆ. ಇಲ್ಲಿನ ಕೆಲವು ಪ್ರದೇಶಗಳಲ್ಲಿ ಅಂದಿನ ಬೌದ್ಧ ಕೇಂದ್ರಗಳಾದ ಬರಾಮುಲ್ಲಾ ಹಾರವನ್, ವುಷಕ ಎಂದು ಕರೆಯಲಾಗುತ್ತಿರುವ ಹೂವಿಷ್ಕಾಪುರದಲ್ಲಿ ಟೆರ್ರಾಕೊಟಾ ಶಿಲ್ಪದ ವಿವಿಧ ಬಗೆಯ ಆಭರಣಗಳು ದೊರೆತಿವೆ.[8] 'ಕಾಯಕವೇ ಕೈಲಾಸ' ಎಂದಿದ್ದಾರೆ ಬಸವಣ್ಣನವರು, ಯಾವುದೇ ಕೆಲಸವಾಗಿರಲಿ ಶ್ರದ್ಧೆ ಆಸಕ್ತಿ ಮುಖ್ಯ, ವ್ಯಕ್ತಿಯ ಅರ್ಹತೆ ಅಥವಾ ಯೋಗ್ಯತೆಯನ್ನು ಅಳೆಯುವುದು ಆತನ ಉದ್ಯೋಗದಿಂದಲ್ಲ, ಆತನ ನಿರ್ವಹಣಾ ಸಾಮರ್ಥ್ಯದಿಂದ ತನ್ನ ಕೈಚಳಕದಿಂದ ಸುಂದರ ಹಾಗೂ ಕಲಾತ್ಮಕ ಮಣ್ಣಿನ ಕುಂಭಗಳನ್ನು

ಸೃಷ್ಟಿಸಬಹುದು. ಮನುಷ್ಯನ 'ಸುಲಭ ಜೀವನ ಪ್ರವೃತ್ತಿ' ಹೊಸ ಹೊಸ ಅವಿಷ್ಕಾರಗಳನ್ನು ಹುಡುಕುತ್ತಾ ಕಂಡುಕೊಳ್ಳುತ್ತಾ ಬಂದಿದೆ. ಇದರಿಂದಾಗಿ ಅನೇಕ ಹಳೆಯ ರೀತಿಗಳು ಬದಲಾಗಿದೆ. ಕೆಲವು ಜನ ತಮ್ಮ ಬುದ್ಧಿವಂತಿಕೆ ಹಾಗೂ ಕುಶಲತೆಯಿಂದ ಇದನ್ನೊಂದು ಕಲಾತ್ಮಕ ವೃತ್ತಿಯಾಗಿಸಿಕೊಂಡಿದ್ದಾರೆ.

ಕುಂಭಕಲೆ ಕುಂಬಾರನ ಕೈಯಿಂದಲೇ ಜಾರಿ ಹೋಗಿರುವುದು ಈಗ ಕಹಿ ಇತಿಹಾಸ. ಆದರೆ ಕುಂಬಾರಿಕೆ ಅಳಿದಿಲ್ಲ. ಕಲಾ ಮಾಧ್ಯಮವಾಗಿ ಬೆಳೆದಿದೆ. ಕುಂಭಕಲೆಯನ್ನು ಕಲಾ ಮಾಧ್ಯಮವನ್ನಾಗಿಸಿಕೊಂಡು ದೇಶ, ವಿದೇಶಗಳಲ್ಲಿ ಬಹಳಷ್ಟು ನುರಿತ ಹೆಸರಾಂತ ಕಲಾವಿದರಿದ್ದಾರೆ. ಸ್ವಿಟ್ಸರ್ಲೆಂಡಿನ ಜಾನ್ ಪಾಟರ್, ಇಂಗ್ಲೆಂಡ್‌ನ ಥಾಮಸ್ ವ್ಹೆಲ್ಡನ್, ಬರ್ನಾಡ್ ಲೀಚ್, ಜೋಷ್ಯೆ ವೆಡ್ಗವುಡ್ ಮತ್ತು ಗುಜರಾತಿನ ಅಮರೀಶ್ ಬಾಯಿ, ಮೋತಿ ಬಾಯಿ ಬೊದಲಾದವರು ಹೆಸರಾಂತ ಕುಂಭ ಕಲಾಕಾರರಾಗಿ ಹೆಸರನ್ನು ಪಡೆದಿದ್ದಾರೆ.[9]

**ಕೊನೆಟಿಪ್ಪಣಿಗಳು**

1. *ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ 2– ಕರಕುಶಲ ಕಲೆಗಳು.* (2001). ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ. ಪುಟ.4
2. ಅದೇ. ಪು.297
3. ಬಸವರಾಜ ಕಂಚೂರ. (2003). ಕುಂಬಾರ ಜನಾಂಗ. ಪುಟ.109–112
4. ಜ್ಞಾನ ಗಂಗೋತ್ರಿ, ಸಂ.4 (ಪು 178)
5. ಬಸವರಾಜ ಕಂಚೂರ. (2003). *ಪೂರ್ವೋಕ್ತ.* ಪುಟ.145–150
6. *ಜಾನಪದ ದರ್ಶನ–7.* ಪುಟ. 204
7. ಬಸವರಾಜ ಕಂಚೂರ. (2003). *ಪೂರ್ವೋಕ್ತ.* ಪುಟ.145–150
8. ಅದೇ. ಪುಟ.151–155.

**ಪರಾಮರ್ಶನ ಗ್ರಂಥಗಳು**


- ಅಂಗಡಿ, ಎಸ್.ಎಸ್. (1998). ಕುಂಬಾರ ವೃತ್ತಿ ಪದಕೋಶ, ಲಿಂಗಾಯತ ಅಧ್ಯಯನ ಸಂಸ್ಥೆ.
- ಬಸವರಾಜ ಕುಂಚೂರು. (2003). *ಕುಂಬಾರ ಜನಾಂಗ.* ಚಕ್ರ ಪ್ರಕಾಶನ.
- *ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ 2– ಕರಕುಶಲ ಕಲೆಗಳು.* (2001). ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- *ಗ್ರಾಮೀಣ ವೃತ್ತಿಗಳು–ಗ್ರಾಮ ಸಂಸ್ಕೃತಿ ಮಾಲೆ–1.* ಕನ್ನಡ ಮಸ್ತಕ ಪ್ರಾಧಿಕಾರ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 12-18
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಬುಡಕಟ್ಟು ಸಂಸ್ಕೃತಿ ಮತ್ತು ಸಾಹಿತ್ಯ

**ಅನಿಲ್ ಕುಮಾರ್ ಎಂ.ಕೆ**

ಸಂಶೋಧನಾ ವಿದ್ಯಾರ್ಥಿ, ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

***Abstract:***

*ಮನುಷ್ಯನ ಜೀವನ ಭೂತ ಮತ್ತು ವರ್ತಮಾನಗಳೊಂದಿಗೆ ಬೆಸೆಯುತ್ತಾ ಇಲ್ಲಿಯವರೆಗೆ ಹಲವು ಅವಸ್ಥೆಗಳನ್ನು ಹೊಂದಿದೆ. ಈ ದೃಷ್ಟಿಯಿಂದ ಸಂಸ್ಕೃತಿಯೆಂಬುದು ಸ್ಥಿರತೆಯನ್ನು ಕಾಯ್ದಿರಿಸುವುದರ ಬದಲಾಗಿ ಚಲನಶೀಲವುಳ್ಳದ್ದಾಗಿದೆ. ಪ್ರಕೃತಿ ಮತ್ತು ಮನಷ್ಯನ ನಡುವೆ ಅನ್ಯೂನ್ಯತೆ ಇರುವಂತೆಯೇ ಸಮಾಜ ಮತ್ತು ಸಂಸ್ಕೃತಿಗಳು ಒಂದಕ್ಕೊಂದು ಪೂರಕವಾಗಿವೆ. ಇವರೆಡು ಒಂದೇ ವಿಧವಾದವು, ಒಂದರೊಳಗೊಂದು ಸರಿಬೆರತು ಮಾನವನ ಬೌದ್ಧಿಕತೆಯನ್ನು ವಿಕಸಿತಗೊಳಿಸಿವೆ. ಹಾಗಾಗಿ ಕ್ರೋಬರ್ ಎನ್ನುವ ಸಂಸ್ಕೃತಿ ಚಿಂತಕರು "ನಾವು ಕಲಿತ ಹಾಗೂ ಪ್ರಸಾರ ಮಾಡುವ ಸ್ವಭಾವ, ತಂತ್ರ ವಿಧಾನ, ಚಿಂತನೆ ಮತ್ತು ಮೌಲ್ಯಗಳ ಮೊತ್ತವಾಗಿದೆ" ಎಂದು ಅಭಿಪ್ರಾಯ ಪಟ್ಟಿದ್ದಾರೆ. ಇದರಿಂದ ಸಂಸ್ಕೃತಿ ಎಂದರೆ ಮನುಷ್ಯನ ಬದುಕಿನ ಅವಸ್ಥೆ ಎಂದು ತಿಳಿಯುತ್ತದೆ. ಆದರೆ ಭಾಷಿಕ ಅರ್ಥದಲ್ಲಿ ಸಂಸ್ಕೃತಿ ಎಂಬುದರಲ್ಲಿ ವಿಶಿಷ್ಟ್ಯತೆಯಿದೆ. ಪ್ರಸ್ತುತ ಲೇಖನದಲ್ಲಿ ಬುಡಕಟ್ಟು ಸಂಸ್ಕೃತಿ ಮತ್ತು ಸಾಹಿತ್ಯ ಕುರಿತು ಬೆಳಕು ಚೆಲ್ಲಲಾಗಿದೆ.*

***Keywords:*** *ಬುಡಕಟ್ಟು ಸಮುದಾಯ, ಸಾಹಿತ್ಯ, ಸಾಂಸ್ಕೃತಿಕ ಅನನ್ಯತೆ.*

## ಪೀಠಿಕೆ

ಸಂಸ್ಕೃತಿ ಎಂಬ ಪದವು ಮೂಲತಃ ಲ್ಯಾಟಿನ್ ಭಾಷೆಯ 'ಕಲ್ಚರ್' ಶಬ್ದದಿಂದ ಬಂದಿದೆ. ಈ 'ಕಲ್ಚರ್' ಎಂಬ ಪದಕ್ಕೆ ಕನ್ನಡದಲ್ಲಿ ಪರ್ಯಾಯ ಪದವಾಗಿ 'ಸಂಸ್ಕೃತಿ' ಎಂಬ ಅರ್ಥವು ರೂಢಿಯಲ್ಲಿದೆ. ಡಿ.ವಿ.ಗುಂಡಪ್ಪನವರು ಮ್ಯಾಥ್ಯೂ ಅರ್ನಾಲ್ಡ್ ಅವರ ವ್ಯಾಖ್ಯಾನವನ್ನು ಸಮರ್ಥಿಸುತ್ತಾರೆ. ಅದು "ಸಂಸ್ಕಾರದಿಂದ ಸಂಸ್ಕೃತಿ ಬೆಳೆಯುತ್ತದೆ. ಸಂಸ್ಕಾರ ಅಥವಾ ಸಂಸ್ಕರಣ ಅಂದರೆ ಸಮ್ಯಕ್–ಕರಣ, ಸಮ್ಯಕ್– ಕೃತಿ ಸಂಸ್ಕೃತಿ" ಎಂದು ವಿವರಿಸಿದ್ದಾರೆ. ಮತ್ತೊಬ್ಬ ವಿದ್ವಾಂಸ ಇ.ಬಿ. ಟೇಲರ್ ಕೂಡಾ ಸಂಸ್ಕೃತಿ ಕುರಿತಾಗಿ "ಸಮಾಜದ ಒಬ್ಬ ಸದಸ್ಯನಾಗಿ ಮನುಷ್ಯನು ಗಳಿಸಿಕೊಂಡ ಜ್ಞಾನ, ನಂಬಿಕೆ, ಕಲೆ, ನೀತಿ–ನಿಯಮ, ಆಚರಣೆ, ಸ್ವಭಾವ ಯಾವುದೇ ಶಕ್ತಿ ಸ್ಥಿತಿಯನ್ನು ಒಳಗೊಳ್ಳುವ ಒಂದು ಸಂಕೀರ್ಣವೇ ಸಂಸ್ಕೃತಿ" ಎಂಬುದಾಗಿ ಅಭಿಪ್ರಾಯ ಪಡುತ್ತಾರೆ. ಇದು ಮನುಷ್ಯನ ಇಡೀ ಬದುಕಿನ ಪರಂಪರೆಯನ್ನು ಸಂಸ್ಕೃತಿಯೆಂದು ಕರೆಯಲಾಗುತ್ತದೆ. ಈ ಸ್ವರೂಪದ ಸಂಸ್ಕೃತಿ ಸಾಮಾಜಿಕ ರಚನೆಯಿಂದಾದ ಈ ರಚನಾ ವಿನ್ಯಾಸ ನಿತ್ಯವೂ ಸುಧಾರಣೆಗೊಳ್ಳುತ್ತದೆ. ಸಮಾಜದಲ್ಲಿ ಹೊಸ ಹೊಸ ವಿದ್ಯಮಾನಗಳು ಜರುಗುವುದರಿಂದ ಮನುಷ್ಯನ ಬದುಕಿನ ಮೇಲೆ ನೇರವಾಗಿ ಪರಿಣಾಮ ಬೀರುತ್ತವೆ. ಇದರಿಂದ ವ್ಯಕ್ತಿ ಅಥವಾ ಸಮುದಾಯಗಳಲ್ಲಿ ಪಲ್ಲಟಗಳಾಗುತ್ತವೆ.

***Please cite this article as:*** ಅನಿಲ್ ಕುಮಾರ್ ಎಂ. ಕೆ. (2024). ಬುಡಕಟ್ಟು ಸಂಸ್ಕೃತಿ ಮತ್ತು ಸಾಹಿತ್ಯ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(3), 12–18

**ಬುಡಕಟ್ಟು ಸಮುದಾಯಗಳ ಸಾಂಸ್ಕೃತಿಕ ಅನನ್ಯತೆ**

ಭಾರತೀಯ ಸಂಸ್ಕೃತಿಯಲ್ಲಿ ವಿಶಿಷ್ಟ ರೀತಿಯ ಬುಡಕಟ್ಟು ಸಮುದಾಯಗಳು ಕಂಡುಬರುತ್ತವೆ. ಪ್ರತಿಯೊಂದು ಬುಡಕಟ್ಟು ಸಮುದಾಯಕ್ಕೂ ಕೂಡ ಒಂದು ಪರಂಪರೆ ಇದ್ದು ಜಾನಪದೀಯವಾಗಿ ತಮ್ಮದೇ ಆದ ಅಸ್ತಿತ್ವವನ್ನು ಉಳಿಸಿಕೊಂಡಿರುತ್ತದೆ. ಕುಲ–ಗೋತ್ರ, ಜೀವನ ವಿಧಾನ, ಆಚಾರ–ವಿಚಾರ, ವೇಷ–ಭೂಷಣ, ಆಹಾರ ಪದ್ಧತಿ, ಆಚರಣೆಗಳು, ಸಂಪ್ರದಾಯಗಳು–ನಂಬಿಕೆಗಳು, ಕಲೆ–ಸಾಹಿತ್ಯ ಒಟ್ಟಾರೆ ಈ ಬುಡಕಟ್ಟು ಸಮುದಾಯಗಳಲ್ಲಿ ವೈವಿಧ್ಯವೆನ್ನುವ ಹಾಗೆ ಕಂಡುಬರುತ್ತವೆ. ಈ ಬುಡಕಟ್ಟು ಸಮುದಾಯಗಳು ಬಹುಮುಖ್ಯವಾಗಿ ಪಾರಂಪರಿಕ ವೃತ್ತಿಕಸುಬು ಮತ್ತು ಕಲೆಯನ್ನು ತುಂಬಾ ವಿಶಿಷ್ಟವಾಗಿ ಹೊಂದಿರುತ್ತವೆ.

ಕನ್ನಡ ನಾಡಿನ ಸಾಂಸ್ಕೃತಿಕ ಪರಂಪರೆಯೊಳಗೆ ಬುಡಕಟ್ಟು ಸಮುದಾಯಗಳಿಗೆ ವಿಶೇಷ ಸ್ಥಾನವಿದೆ. ಸೋಲಿಗ, ಜೇನುಕುರುಬ, ಬೆಟ್ಟಕುರುಬ, ಹಕ್ಕಿಪಿಕ್ಕಿ, ಯೆರವ ಸಿದ್ಧಿ, ಮುಂತಾದ ಐವತ್ತು ಪರಿಶಿಷ್ಟ ಬುಡಕಟ್ಟು ಸಮುದಾಯಗಳು ಕರ್ನಾಟಕದಲ್ಲಿದ್ದು, ಪ್ರತಿಯೊಂದು ಸಮುದಾಯಗಳು ತಮ್ಮದೇಯಾದ ಸಾಮಾಜಿಕ ಪದ್ಧತಿ ಮತ್ತು ಸಂಸ್ಕೃತಿಯನ್ನು ಅಳವಡಿಸಿಕೊಂಡು ಜೀವಿಸುತ್ತಿದ್ದಾರೆ. ಈ ಐವತ್ತು ಪರಿಶಿಷ್ಟ ಬುಡಕಟ್ಟು ಸಮುದಾಯಗಳಲ್ಲದೆ ಇನ್ನೂ ಅನೇಕ ಬುಡಕಟ್ಟು ಸಮುದಾಯಗಳು ಪರಿಶಿಷ್ಟ ಬುಡಕಟ್ಟು ಪಟ್ಟಿಯಿಂದ ಹೊರಗಿದ್ದು ವಿವಿಧ ಸಮುದಾಯಗಳ ಪ್ರಮಾಣ ಪತ್ರವನ್ನು ಪಡೆದುಕೊಳ್ಳುತ್ತಿವೆ. ಅಂತಹ ಅನೇಕ ಸಮುದಾಯಗಳಲ್ಲಿ ಪ್ರಸ್ತುತ ಅಧ್ಯಯನಕ್ಕೆ ಲಂಬಾಣಿ, ಕಾಡುಗೊಲ್ಲ ಮತ್ತು ಮ್ಯಾಸಬೇಡ ಬುಡಕಟ್ಟು ಸಮುದಾಯಗಳನ್ನು ಆಯ್ಕೆ ಮಾಡಿಕೊಳ್ಳಲಾಗಿದೆ.

ಮೂಲತಃ ಈ ಮೂರು ಬುಡಕಟ್ಟುಗಳು ಬೇರೆ ಬೇರೆ ಪ್ರದೇಶಗಳಿಂದ ವಲಸೆ ಬಂದ ಸಮುದಾಯಗಳಾಗಿವೆ. ಮಧ್ಯ ಕರ್ನಾಟಕದ ಚಿತ್ರದುರ್ಗ, ಬಳ್ಳಾರಿ, ತುಮಕೂರು ಮತ್ತು ನೆರೆ ರಾಜ್ಯ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯಲ್ಲಿ ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳು ಅಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ. ಲಂಬಾಣಿ ಸಮುದಾಯವು ಬಹುಮುಖ್ಯವಾಗಿ ಬೆಳಗಾವಿ, ಧಾರವಾಡ, ಹಾವೇರಿ, ದಾವಣಗೆರೆ, ಬಳ್ಳಾರಿ, ಚಿತ್ರದುರ್ಗ ಭಾಗದಲ್ಲಿ ಕಂಡುಬರುತ್ತದೆ.

ಲಂಬಾಣಿ, ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟುಗಳು ಬಹುಮುಖ್ಯವಾಗಿ ಪಶುಪಾಲಕರು. ಪಶುಗಳಿಗೆ ಹುಲ್ಲು ನೀರು ಸಿಗುವಂತಹ ಪ್ರದೇಶವನ್ನು ಹುಡುಕಿಕೊಂಡು ಅಡವಿಗಳಲ್ಲಿ ಹಟ್ಟಿಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದರು.

**ಬುಡಕಟ್ಟು ಸಮುದಾಯಗಳ ಸಾಮಾಜಿಕ ವ್ಯವಸ್ಥೆ**

ಲಂಬಾಣಿ, ಮ್ಯಾಸಬೇಡ ಮತ್ತು ಕಾಡುಗೊಲ್ಲ ಸಮುದಾಯಗಳು ತಮ್ಮದೇ ಆದ ಸಂಪ್ರದಾಯ, ಆಚರಣೆ, ನಂಬಿಕೆ, ವಿಧಿ–ನಿಷೇಧ ಹಾಗೂ ಸಾಮಾಜಿಕ ನಿಯಂತ್ರಣವನ್ನೊಳಗೊಂಡ ಕ್ರಮಬದ್ಧವಾದ ಜೀವನ ವಿಧಾನ ಮತ್ತು ಸಾಮಾಜಿಕ ವ್ಯವಸ್ಥೆಯನ್ನು ಹೊಂದಿವೆ. ಇದರಲ್ಲಿ ಅನೇಕ ಉಪವ್ಯವಸ್ಥೆಗಳಿವೆ. ಪ್ರಸ್ತುತ ಲೇಖನದಲ್ಲಿ ಸಾಮಾಜಿಕ ವ್ಯವಸ್ಥೆಯಲ್ಲಿ ಮೂರು ಸಮುದಾಯಗಳ ಕುಟುಂಬ ವ್ಯವಸ್ಥೆ, ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳನ್ನು ಕುರಿತು ಅಧ್ಯಯನ ಮಾಡಲಾಗಿದೆ. ಸಾಮಾಜಿಕ ವ್ಯವಸ್ಥೆ ಎಂದರೆ ಸಾಮಾಜಿಕ ಅಂತಃಕ್ರಿಯೆಗಳನ್ನು ಕುರಿತು ಅಧ್ಯಯನ ಮಾಡುವುದಾಗಿದೆ. ಸಮಾಜ ಜೀವಿಯಾಗಿ ಮಾನವರು ಆಚರಿಸುವ, ರೂಢಿಸಿಕೊಂಡು ಬಂದಿರುವ ಎಲ್ಲಾ ಸಂಪ್ರದಾಯಗಳನ್ನು ಸಾಮಾಜಿಕ ವ್ಯವಸ್ಥೆಯಲ್ಲಿ ಕಾಣಬಹುದಾಗಿದೆ.

**ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳು**

ಆರ್.ಎಸ್.ಬಾಗ್ಸ್ ಅವರು "ನಂಬಿಕೆಗಳು ಪುನರಾವೃತವಾಗುವ ಸಾಮೂಹಿಕ ವೀಕ್ಷಣೆಯ ಫಲವಾಗಿ ಮೂಡುವ ಕಾರ್ಯಕಾರಣ ಸಂಬಂಧವುಳ್ಳದಾಗಿರುವ ಸಾಂಪ್ರದಾಯಿಕ ಭಾವನೆ, ನಂಬಿಕೆ ಮಾನಸಿಕ ಸ್ಥಿತಿಯ ಒಂದು ಪದ" ಎಂದು

ಅಭಿಪ್ರಾಯ ಪಟ್ಟಿದ್ದಾರೆ. ಬುಡಕಟ್ಟು ಸಮುದಾಯಗಳಲ್ಲಿ ಪ್ರಮುಖವಾಗಿ ನಂಬಿಕೆ–ನಿಷೇಧಗಳನ್ನು ಕಾಣಬಹುದು. ಅನೇಕ ನಂಬಿಕೆ, ಸಂಪ್ರದಾಯ, ಆಚರಣೆಗಳನ್ನು ಒಳಗೊಂಡು ಇವರ ಬದುಕು ರೂಪಿತವಾಗುತ್ತದೆ. ಬುಡಕಟ್ಟು ಜನರ ನಡೆ ನುಡಿಗಳೆಲ್ಲವು ನಂಬಿಕೆ ಸಂಪ್ರದಾಯದಂತೆಯೇ ಇರುತ್ತದೆ. ಪ್ರತಿಯೊಂದು ಸಮುದಾಯಗಳಲ್ಲಿ ನಂಬಿಕೆ ಸಂಪ್ರದಾಯ ಆಚರಣೆಗಳಿವೆ. ನಂಬಿಕೆ ಕುರಿತು ವೈಜ್ಞಾನಿಕ ವಿಶ್ಲೇಷಣೆ ಕೊಡುವುದಾದರೆ ಮುಂದಾಗುವ ಕೆಡುಕುಗಳಿಗೆ ಉತ್ತರ ಕಂಡುಕೊಳ್ಳುವ ಮನುಷ್ಯನ ಜ್ಞಾನ, ಲಂಬಾಣಿ, ಮ್ಯಾಸಬೇಡ ಮತ್ತು ಕಾಡುಗೊಲ್ಲ ಬುಡಕಟ್ಟಿನಲ್ಲಿರುವ ಸಂಬಂಧಿಸಿದಂತೆ ಇವೆ.

**ಲಂಬಾಣಿ ಸಮುದಾಯದ ನಂಬಿಕೆ ಮತ್ತು ನಿಷೇಧಗಳು**

ಲಂಬಾಣಿ ಸಮುದಾಯದವು ನಂಬಿಕೆ–ನಿಷೇಧಗಳು ಮನಸ್ಸಿಗೆ ಶಾಂತಿ ತಂದುಕೊಡುತ್ತವೆಂದು ನಂಬಿ ಬದುಕುತ್ತಿದ್ದಾರೆ. ಎದುರಿಗೆ ಬೆಕ್ಕು, ಹಾವು ಅಡ್ಡಬಂದರೆ ಆಶುಭ, ವಿಧವೆ ಎದರುಗೆ ಬಂದರೆ ಅಶುಭ, ಕಟ್ಟಿಗೆ ಹೊರೆ ಹೊತ್ತ ಮಹಿಳೆ ಬಂದರೆ ಅಶುಭ, ಮಹಿಳೆ ಕೈಯಿಂದ ಅರಿಶಿನ–ಕುಂಕುಮ ಜಾರಿಬಿದ್ದರೆ ಅಶುಭ ಎಂದು ನಂಬುತ್ತಾರೆ. ಹೆಣ್ಣಿಗೆ ಎಡಗಣ್ಣು ಅದಿರಿದರೆ, ತುಂಬಿದ ಕೊಡ ಹೊತ್ತ ಮುತ್ತೈದೆ ಎದುರಿಗೆ ಬಂದರೆ ಶುಭ ಎಂದು ಭಾವಿಸುತ್ತಾರೆ. ಲಂಬಾಣಿಗಳಲ್ಲಿ ಹೆಣ್ಣು ಮಕ್ಕಳಿಗೆ ಮೆಳ್ಳಗಣ್ಣಿದ್ದರೆ ಗಂಡನ ಮನೆಗೆ ಶುಭವಾಗುತ್ತೆ. ಹೆಣ್ಣಿಗೆ ಎಡಗಡೆ ಗಂಡಿಗೆ ಬಲಗಡೆ ಮಚ್ಚೆ ಇದ್ದರೆ ಶುಭ ಎಂದು ನಂಬುತ್ತಾರೆ. ನಾಲಿಗೆ ಮೇಲೆ ಕಪ್ಪು ಮಚ್ಚೆ ಇದ್ದರೆ ಅವರು ನುಡಿದಂತೆ ಆಗುತ್ತದೆ. ಹೆಣ್ಣಿನ ಎಡಗಾಲು, ಎಡಗೈಯಲ್ಲಿ ಆರು ಬೆರಳಿದ್ದರೆ ಶುಭ ಎಂದು ನಂಬುತ್ತಾರೆ.

**ಮ್ಯಾಸಬೇಡ ಸಮುದಾಯದ ನಂಬಿಕೆ–ನಿಷೇಧಗಳು**

ಮ್ಯಾಸಬೇಡರಲ್ಲಿ ನಂಬಿಕೆಗಳು ಶುಭ ಮತ್ತು ಅಶುಭ ಸಂಕೇತಗಳನ್ನು ಸಂಕೇತಿಸುವ ಮೂಲಕ ಅಸ್ತಿತ್ವದಲ್ಲಿವೆ. ಇವು ಭವಿಷ್ಯದ ಕಾರ್ಯದ ಮುನ್ಸೂಚಕಗಳಾಗಿವೆ. ಮಹತ್ವದ ಕಾರ್ಯಕ್ಕೆ ಹೊರಗಡೆ ಹೋಗುವಾಗ ಇರುವ ನಂಬಿಕೆಗಳು. ಮ್ಯಾಸಬೇಡರಲ್ಲಿ ದೂರದ ಊರಿಗೆ ಹೋಗುವಾಗ ತುಂಬಿದ ಕೊಡ ಹೊತ್ತು ಸುಮಂಗಲಿಯರು ಎದುರುಬಂದರೆ ಶುಭ ಶಕುನ ಎಂದು ನಂಬುತ್ತಾರೆ. ನರಿ ಮುಖ ನೋಡಿದರೆ, ಮುಂಗುಸಿ ಅಡ್ಡ ಬಂದರೆ ಶುಭವಾಗುತ್ತದೆ. ಕಣ್ಣು ರೆಪ್ಪೆ ಅದರುವುದು–ಹೆಣ್ಣಿಗೆ ಎಡಗಣ್ಣು, ಗಂಡಿಗೆ ಬಲಗಣ್ಣು ಅದಿರಿದರೆ ಶುಭವಾಗುತ್ತದೆ ಎಂದು ನಂಬುತ್ತಾರೆ. ವಿಧವೆ ಎದುರಿಗೆ ಬಂದರೆ ಆಶುಭ, ವಿಧವೆ ಯಾವುದೇ ಶುಭ ಕಾರ್ಯಕ್ಕೆ ಹೋದರೂ ಕೆಟ್ಟದಾಗುತ್ತದೆ ಎಂಬ ನಂಬಿಕೆ, ಬೆಕ್ಕು ಅಡ್ಡ ಬಂದರೆ ಕೆಟ್ಟದಾಗುತ್ತೆ ಎಂಬ ನಂಬಿಕೆ, ಕಟ್ಟಿಗೆ ಹೊರೆಹೊತ್ತ ಮಹಿಳೆ ಎದುರು ಬಂದರೆ ಅಶುಭ ಎಂದು ಭಾವಿಸುತ್ತಾರೆ.

**ಕಾಡುಗೊಲ್ಲ ಸಮುದಾಯದ ನಂಬಿಕೆ–ನಿಷೇಧಗಳು**

ಇತರೆ ಬುಡಕಟ್ಟುಗಳಲ್ಲಿ ಇದ್ದ ನಂಬಿಕೆ ಆಚರಣೆಗಳಂತೆ ಕಾಡುಗೊಲ್ಲರಲ್ಲೂ ಕೆಲವು ನಂಬಿಕೆಗಳಿರುವುದನ್ನು ನಾವು ಗುರುತಿಸಬಹುದು. ಮನುಷ್ಯ ಜೀವನದ ಒಂದು ಭಾಗವಾಗಿ ನಾವು ನಂಬಿಕೆಯನ್ನು ನೋಡುತ್ತೇವೆ. ನಂಬಿಕೆ, ಸಂಪ್ರದಾಯಗಳೆಲ್ಲವು ಹೇರಲ್ಪಟ್ಟಿರುವುದು ಮಹಿಳೆಯ ಮೇಲೆಯೇ ಎಂಬುದನ್ನು ನಾವು ಇಲ್ಲಿ ಗಮನಿಸಬೇಕಾಗುತ್ತದೆ. ಕಾಡುಗೊಲ್ಲರಲ್ಲಿ ಮುಟ್ಟಾದ ಹೆಂಗಸರು ವಾಸದ ಮನೆಯಿಂದ ಹೊರಗೆ ಇರಬೇಕು. ಮನೆಯಲ್ಲಿ ಏನಾದರು ಚೇಳು ಕಾಣಿಸಿಕೊಂಡರೆ, ಯಾರಿಗಾದರೂ ಹುಷಾರಿಲ್ಲದಿದ್ದರೆ ವಾರ ಮಾಡುವಾಗ ಏನು ತಪ್ಪು ಮಾಡಿದ್ದೀಯ ಅದಕ್ಕೆ ಚೇಳು ಕಾಣಿಸಿಕೊಂಡಿದೆ. ದೇವರ ಮುಂದೆ ತಪ್ಪು ಕಾಣಿಕೆ ಹಾಕು ಎಂದು ಮನೆಯಲ್ಲಿನ ಹೆಣ್ಣು ಮಕ್ಕಳಿಗೆ ಒತ್ತಾಯಿಸುತ್ತಾರೆ. ಕಾಡುಗೊಲ್ಲರಿಗೂ ಊರು ಗೊಲ್ಲರಿಗೂ ಯಾವುದೇ ಸಾಮ್ಯತೆಗಳಿಲ್ಲ ಎಂಬುದಕ್ಕೆ ಪುರಾಣ ಕಾವ್ಯಗಳಲ್ಲಿ ಉಲ್ಲೇಖವಿದೆ.

ಚಿತ್ತಯ್ಯ ಮತ್ತು ಕಾಟಮುಲಿಂಗರ ಹುಟ್ಟಿನ ಸಂದಿನಲ್ಲಿ ಈ ರೀತಿ ಹೇಳಲಾಗಿದೆ.

*"ಕಾಡುಗೊಲ್ಲರು ನಾವು*
*ಊರು ಜನಗಳು ನೀವು*
*ನಿಮ್ಮಿಗು ನಮ್ಮಿಗು*
*ನೆರಳಾಯಿಸಬಾರದಯ್ಯ*
*.............................ಕಾರಣ*
*ನೀವು ಊರ ಜನ*
*ಈಚೆ ಆದ್ರೆ (ಮುಟ್ಟಾದಾಗ) ಒಳಗಡೆ ಇರ್ತಾರೆ*
*ನಿಮ್ಮ ಮನೆಯೊಳಗೆ ಹೆಂಗ್ಸುರು ಹೆರಿಗೆ ಆದ್ರೆ.*
*ಒಳಗೆ ಇರ್ತರಯ್ಯಾ*
*ನಮಗೆ ಸೂತ ಆಗಕಿಲ್ಲ".*[1]

ಮೇಲಿನ ಕಾವ್ಯದಲ್ಲಿ ಹೆಣ್ಣಿಗೆ ಈ ಸಮುದಾಯದಲ್ಲಿ ಹೇರಿರುವ ಸಂಪ್ರದಾಯಗಳ ಬಗ್ಗೆ ತಿಳಿಯುತ್ತದೆ. ಒಂದು ವೇಳೆ ಊರುಗೊಲ್ಲರೊಂದಿಗೆ ನಾವು ಬೆರೆತರೆ ತಮ್ಮ ವ್ರತ ಕೆಡುತ್ತದೆ ಎಂದು ಹಿರಿಯರು ದೂರ ಇರುತ್ತಾರೆ.

**ಬುಡಕಟ್ಟುಗಳ ಧಾರ್ಮಿಕ ಆಚರಣೆಗಳು**

ಬುಡಕಟ್ಟು ಸಮುದಾಯಗಳು ತಾವು ವಾಸಿಸುವ ಆಯಾ ಪ್ರಾದೇಶಿಕ ಧರ್ಮ ಹಾಗೂ ದೇವರು–ದೇವತೆಗಳನ್ನು ಮತ್ತು ಹಬ್ಬ–ಹರಿದಿನಗಳನ್ನು ತಮ್ಮದಾಗಿ ಮಾಡಿಕೊಂಡು ಆಚರಿಸುತ್ತಾ ಬಂದಿದ್ದಾರೆ. ಬುಡಕಟ್ಟು ಸಮುದಾಯದ ಜನ ಜೀವನದಲ್ಲಿ ಬರುವ ಕಷ್ಟ–ಸುಖಗಳಿಗೂ, ಒಳಿತು– ಕೆಡಕುಗಳಿಗೂ ಮೂಲಭೂತವಾದ ಅಗೋಚರ ಶಕ್ತಿಯೊಂದಿದೆ ಎಂದು ನಂಬುತ್ತಾರೆ. ಆ ಮೂಲಭೂತ ಶಕ್ತಿಯ ಇಚ್ಛೆಯಂತೆ ಎಲ್ಲವೂ ನಡೆಯುತ್ತದೆ. ಹಾಗಾಗಿ ಆ ಶಕ್ತಿಯ ವಿರುದ್ಧ ಹೋಗುವುದು ಅಸಾಧ್ಯ ಮತ್ತು ಅಪಾಯ ಎಂದು ನಂಬಿದ್ದಾರೆ. ಜನಪದರು ಹಬ್ಬ–ಹರಿದಿನ ಹಾಗೂ ಜಾತ್ರೆ–ಉತ್ಸವಗಳು ಸಾಮಾಜಿಕವಾಗಿ ಭಿನ್ನ–ಭಿನ್ನವಾಗಿದ್ದರೂ ಇವುಗಳಲ್ಲಿ ವ್ಯತ್ಯಾಸ ಕಾಣುವುದಿಲ್ಲ. ಸಾಮೂಹಿಕವಾಗಿ ಇವುಗಳನ್ನು ಆಚರಿಸುತ್ತಾರೆ.

ಸಾಮಾನ್ಯವಾಗಿ ಬುಡಕಟ್ಟು ಜನರು ದೇವರನ್ನು ಅವರ ವ್ಯಾಪ್ತಿಗನುಗುಣವಾಗಿ ವಿಂಗಡಿಸಿ ಆರಾಧಿಸುತ್ತಾರೆ. ಅಂದರೆ ಮನೆ ದೇವರು, ಕುಲದೇವರು, ಗ್ರಾಮದೇವರು, ನಾಡದೇವರು, ಶಕ್ತಿದೇವತೆ, ವೀರರು, ಪವಾಡ ಪುರುಷರು ಹೀಗೆ ವಿಂಗಡಿಸಿ ಆರಾಧಿಸುತ್ತಾರೆ. ಈ ಹಿನ್ನೆಲೆಯಲ್ಲಿ ಆಯಾ ದೇವರುಗಳ ಹೆಸರಿನಲ್ಲಿ ಹಬ್ಬ, ಜಾತ್ರೆ, ಉತ್ಸವ ಮಾಡಿ ಭಕ್ತಿ ತೋರಿಸುತ್ತಾರೆ. "ಒಂದು ಗುಂಪು ಅಥವಾ ಸಮುದಾಯದ ದೇವರುಗಳಾದವರು ಬಹುಶಃ ಆಯಾ ಗುಂಪಿನವರ ಯಾವುದೋ ಕಾಲದ ಮುಖಂಡರಾಗಿರುವ ಸಾಧ್ಯತೆ ಇದೆ".[2] ಹೀಗೆ ಪ್ರತಿಯೊಂದು ಸಮುದಾಯದವರು ತಮ್ಮದೇ ಆದ ದೇವರನ್ನು ಸೃಷ್ಟಿಸಿಕೊಂಡು ಕುಲ ದೇವರೆಂದು ಆರಾಧಿಸುತ್ತಿರುವುದು ಸ್ಪಷ್ಟವಾಗಿದೆ. ಸಾಮಾನ್ಯವಾಗಿ ಬುಡಕಟ್ಟು ಸಮುದಾಯಗಳು ಪ್ರಕೃತಿ ಆರಾಧಕರೇ ಆಗಿದ್ದರು. ಬರಬರುತ್ತಾ ಪಂಚಭೂತಗಳಿಗೆ ಒಂದು ರೂಪ, ಹೆಸರನ್ನು ಕೊಡುತ್ತಾ ಆರಾಧಿಸತೊಡಗಿದರು.

**ಬುಡಕಟ್ಟುಗಳ ಆರ್ಥಿಕ ವ್ಯವಸ್ಥೆ–ಕಸುಬುಗಳು**

ಭಾರತೀಯ ಪರಂಪರೆಯಲ್ಲಿ ಜಾತಿ ಪ್ರಾಬಲ್ಯವಿದ್ದಂತೆ ವರ್ಗ ಪ್ರಾಬಲ್ಯವೂ ಕೂಡ ಪ್ರತ್ಯೇಕವೆಂಬಂತಿಲ್ಲ. ಅದು ಶ್ರೇಣಿವ್ಯವಸ್ಥೆಯೊಂದಿಗೆ ಗುರುತಿಸಿಕೊಂಡಿದೆ. ಈ ಶ್ರೇಣಿ ವ್ಯವಸ್ಥೆಯಲ್ಲಿ ಉಚ್ಚ ಜಾತಿಯೆನಿಸಿಕೊಂಡವರೇ ಶ್ರೀಮಂತರಾಗಿದ್ದಾರೆ. ಸಮಾಜದ ಬದಲಾವಣೆಯ ಹಿಂದೆ ಆರ್ಥಿಕ ಪ್ರಗತಿಯು ಬಹುಮುಖ್ಯ ಪಾತ್ರವಹಿಸಿರುತ್ತದೆ. ಶ್ರೇಣೀಕೃತ ಸಮಾಜದಲ್ಲಿ ಶ್ರೀಮಂತರು ಎಲ್ಲಾ ವಲಯದಲ್ಲೂ ಹಿಡಿತ ಸಾಧಿಸಿಕೊಂಡು. ಕೆಳವರ್ಗಗಳನ್ನು ಶ್ರಮಿಕವರ್ಗಳಾಗಿಯೇ ಕಾಣಲಾಗುತ್ತದೆ. ಇವರ ಅಧೀನವಾಗಿರುವ ಕೆಳವರ್ಗದವರು ಎನಿಸಿಕೊಂಡಿರುವ ಶೂದ್ರರು, ಶೂದ್ರಾತಿ ಶೂದ್ರರು ಮತ್ತಷ್ಟು ಆರ್ಥಿಕ ಶೋಷಿತರಾಗಿ ಕಂಡು ಬಂದಿದ್ದಾರೆ",[3] ಮೇಲ್ವರ್ಗದ ಪ್ರಾಬಲ್ಯಕ್ಕೆ ಒಳಗಾಗಿರುವ ಇವರು ಆರ್ಥಿಕ ಗುಲಾಮರಾಗಿಯೇ

ಇರಬೇಕು ಎನ್ನುವುದು ಮೇಲ್ವರ್ಗದ ಪ್ರತಿಪಾದನೆಯಾಗಿದೆ.

ಆರ್ಥಿಕ ವ್ಯವಸ್ಥೆಯು ಸಮಾಜದಲ್ಲಿರುವ ಎಲ್ಲಾ ಜನ ಸಮುದಾಯಗಳಲ್ಲಿ ಸಮನಾಗಿರಲು ಸಾಧ್ಯವಿಲ್ಲ. ಏಕೆಂದರೆ ಆರ್ಥಿಕ ವಲಯವು ಅಸಮಾನತೆಯಿಂದ ಕೂಡಿದೆ. ಅದರಲ್ಲೂ ವಿಶೇಷವಾಗಿ ಭಾರತೀಯ ಸಮಾಜದ ದೃಷ್ಟಿಯಲ್ಲಿ ಹೇಳುವುದಾದರೆ ಆರ್ಥಿಕ ಅಸಮಾನತೆಯನ್ನು ಇಲ್ಲಿ ಗುರುತಿಸಬಹುದು. ಕೆಲವು ಪಟ್ಟಭದ್ರ (ಹಿತಾಸಕ್ತಿ) ಸಮುದಾಯಗಳು ಇಡೀ ಆರ್ಥಿಕ ವ್ಯವಸ್ಥೆಯನ್ನು ತಮ್ಮ ವಶಕ್ಕೆ ತೆಗೆದುಕೊಂಡು ಸವಾರಿ ಮಾಡಲು ಮುಂದಾಗಿದ್ದಾರೆ. ಅಂದರೆ ಬಹು ಆದಾಯ ಮೂಲಗಳನ್ನು ತಮ್ಮ ಕೈವಶ ಮಾಡಿಕೊಂಡು ಆರ್ಥಿಕವಾಗಿ, ಶೈಕ್ಷಣಿಕವಾಗಿ ಹಾಗೂ ರಾಜಕೀಯವಾಗಿ ಪ್ರಬಲವಾಗಿರುವುದಲ್ಲದೇ ಕೆಲವು ಸಮುದಾಯಗಳು ಗೌರವ ಕೊಡದ ಹಾಗೂ ಆದಾಯ ತರದ ವೃತ್ತಿಗಳಲ್ಲಿ ತೊಡಗುವಂತಹ ಸ್ಥಿತಿ ಸಂದರ್ಭ ನಿರ್ಮಿಸಿದ್ದಾರೆ. ಧಾರ್ಮಿಕ ಲೇಪನ ನೀಡಿ ಅನಿಷ್ಟ ವೃತ್ತಿ ಕೈಗೊಳ್ಳುವವರ ವಿರುದ್ಧ ನಿಷೇದ ಹೇರಿದರು. ಅದನ್ನೇ ಚಾಚೂ ತಪ್ಪದೇ ಪಾಲಿಸಿಕೊಂಡು ಬಂದ ಸಮುದಾಯಗಳು ಒಂದೊತ್ತಿನ ಊಟಕ್ಕಾಗಿ ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಅಲೆಯುತ್ತಾ ಹಾಗೂ ಬೆಟ್ಟಗುಡ್ಡಗಳಲ್ಲಿ ಕ್ರೂರ ಮೃಗಗಳೊಂದಿಗೆ, ವಿಷ ಜಂತುಗಳೊಂದಿಗೆ ಹೋರಾಟ ಮಾಡುತ್ತಾ ಬದುಕುತ್ತಿದ್ದಾರೆ. ಇವರ ಬದುಕಿನ ಪ್ರತಿ ಗಳಿಗೆಯು ಹೋರಾಟದ ಬದುಕಾಗಿದೆ.

ಬುಡಕಟ್ಟು ಸಮುದಾಯಗಳು ಮೊದಲಿಗೆ ಬೆಟ್ಟಗುಡ್ಡ ಕಾಡುಗಳಲ್ಲಿ ಸಿಗುತ್ತಿದ್ದಂತಹ ಗೆಡ್ಡೆ ಗೆಣಸು, ಹಣ್ಣು ಹಂಪಲು, ನಾರು ಬೇರುಗಳು, ಸೊಪ್ಪು ಸೆದೆಗಳನ್ನು ತಿಂದು ಜೀವನ ನಡೆಸುತ್ತಿದ್ದರು. ಆದರೆ ಇವುಗಳೆಲ್ಲವೂ ಎಲ್ಲಾ ಋತುಮಾನಗಳಲ್ಲೂ ಸಿಗುತ್ತಿರಲಿಲ್ಲ. ಕೇವಲ ನಿರ್ದಿಷ್ಟ ಕಾಲಮಾನಗಳಲ್ಲಿ ಮಾತ್ರ ಸಿಗುವಂತಹುದಾಗಿರುತ್ತಿದ್ದವು. ಇವುಗಳನ್ನೇ ಸಂಗ್ರಹಿಸಿ ತಿಂದು ತಮ್ಮ ಹಸಿವನ್ನು ನೀಗಿಸಿಕೊಳ್ಳುತ್ತಿದ್ದರು. ಕಾಲಾನಂತರದಲ್ಲಿ ಪ್ರಾಣಿ ಪಕ್ಷಿಗಳನ್ನು, ಜಲಚರಗಳನ್ನು ಬೇಟೆಯಾಡುವ ಪ್ರವೃತ್ತಿ ಬೆಳೆಸಿಕೊಂಡರು. ಮತ್ತೆ ಇವರು ಬದುಕುಳಿಯಲು ಆಹಾರದ ಸಂಗ್ರಹಣೆ ಅನಿವಾರ್ಯವಾಯಿತು. ಜೊತೆಗೆ ಇವರು ಬೆಟ್ಟಗುಡ್ಡ, ಕಾಡುಮೇಡುಗಳಲ್ಲಿ ವಾಸಿಸುತ್ತಿದ್ದರಿಂದ ಅಲ್ಲಿನ ಕ್ರೂರ ಪ್ರಾಣಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಬೇಟೆಯಾಡುವುದು ಕೂಡ ಅನಿವಾರ್ಯವಾಯಿತು. ಈ ಬುಡಕಟ್ಟು ಜನರಲ್ಲಿ ಕುಲಕಸುಬು ಎಂಬುದು ಅವನ ಹಸಿವು ಹೆಚ್ಚಾದಂತೆ ಅದನ್ನು ನೀಗಿಸಿಕೊಳ್ಳುವುದಕ್ಕಾಗಿ ಆಹಾರದ ಹುಡುಕಾಟ ಪ್ರಾರಂಭವಾಯಿತು. ಈ ಹುಡುಕಾಟದಲ್ಲಿ ಕಸುಬು ಮತ್ತು ವೃತ್ತಿಯ ಕವಲು ಅಡಗಿತ್ತು. ಅಂದರೆ ಬುಡಕಟ್ಟು ಜನರು ಆಹಾರದ ಹುಡುಕಾಟದಲ್ಲಿ ಕಸುಬನ್ನು ಕಂಡುಕೊಂಡರು. ಮೊದಲಿಗೆ ಬೇಟೆಯನ್ನು ಆರಂಭಿಸಿ ಅದನ್ನೇ ಕಸುಬನ್ನಾಗಿ ಸ್ವೀಕರಿಸಿ ನಂತರದಲ್ಲಿ ಪಶುಪಾಲನೆ, ಹೈನು ಸಾಕಾಣಿಕೆ, ವ್ಯವಸಾಯ ಇನ್ನೂ ಹಲವಾರು ಕಸುಬುಗಳನ್ನು ಅವಲಂಬಿಸಿದರು. ಹೀಗೆ ವೃತ್ತಿಗಳನ್ನು ಅವಲಂಬಿಸಿ ಬೆಟ್ಟಗುಡ್ಡ ಪ್ರದೇಶಗಳನ್ನು ತಮ್ಮ ವಾಸದ ನೆಲೆಯಾಗಿ ಆಯ್ದುಕೊಂಡು ಅಲ್ಲಿ ದೊರೆಯುವಂತಹ ಬಿದಿರು ಕಟ್ಟಿಗೆ, ಜೇನು ಹೀಗೆ ವಿವಿಧ ರೀತಿಯ ವಸ್ತುಗಳನ್ನು ಅವಲಂಬಿಸಿ ಜೀವಿಸುತ್ತಿದರು.

**ಸಾಹಿತ್ಯದಲ್ಲಿ ಬುಡಕಟ್ಟು**

ಜನಪದ ಸಾಹಿತ್ಯದಲ್ಲಿ ಜನಪದ ಹಾಡುಗಳು ಪ್ರಮುಖವಾಗಿವೆ. ಜನರ ಅನುಭವದ ತಿರುಳೇ ಜನಪದ ಸಾಹಿತ್ಯ ಇಂತಹ ಸಂಸ್ಕೃತಿ ಮತ್ತು ಪರಂಪರೆಯನ್ನು ಹೊಂದಿರುವ ಬುಡಕಟ್ಟು ಜನರು ತಮ್ಮ ಅನುಭವಗಳಿಗೆ ಅಭಿವ್ಯಕ್ತಿಯನ್ನು ನೀಡುವ ಸಹಜ ಹೃದಯವನ್ನು ಹೊಂದಿದವರಾಗಿದ್ದಾರೆ. ತಮಗಾದ ನೋವು–ನಲಿವುಗಳನ್ನು, ಬೇಸರವನ್ನು ಕಷ್ಟಗಳನ್ನು, ಸುಖ–ದುಃಖಗಳನ್ನು ಹಾಡುಗಳ ಮೂಲಕ ಹೊರ ಹಾಕುತ್ತಾ ಬಂದಿದ್ದಾರೆ. ಜನಪದ ಸಾಹಿತ್ಯ ಆಯಾ ಜನಾಂಗಗಳ ಕಂಠಸ್ಥ ಸಂಪ್ರದಾಯದಲ್ಲೇ ಉಳಿದು ಬಂದಿದೆ. "ಇದು

ಸಾಮಾನ್ಯ ಜನತೆಯ ವೇದ, ಗ್ರಾಮ ಸಂಸ್ಕೃತಿಯ ದರ್ಪಣ, ಹಳ್ಳಿಯ ಸರಳ ಜೀವನದ ವಿವಿಧ ಮುಖಗಳು ಅದರಲ್ಲಿ ಮಾರ್ಪೊಳೆಯುತ್ತವೆ. ಸಂಸಾರದ ಕಷ್ಟ–ಕ್ಲೇಶಗಳು, ಸುಖ– ಸಂತೋಷಗಳು, ಬಂಧು–ಮಿತ್ರರ ವಿವಿಧ ಸಂಬಂಧಗಳು, ಜಾತಿಮತ, ಹಬ್ಬ–ಹರಿದಿನ, ರೂಢಿ, ಸಂಪ್ರದಾಯಗಳು, ಒಟ್ಟಿನಲ್ಲಿ ಅವರ ಜೀವನವನ್ನು ರೂಪಿಸುವ ಸ್ಫೂರ್ತಿ ವಿಶೇಷಗಳು: ಜಾನಪದ ವಾಙ್ಞಯದಲ್ಲಿ ವಿಪುಲವಾಗಿ ದೊರಕುತ್ತವೆ."[4] ಎಂದು ಹೇಳಿದ್ದಾರೆ. ಜನಪದ ಸಾಹಿತ್ಯ ಆಯಾ ಸಮುದಾಯದ ಆಯಾ ಸಮಾಜದ ಚೈತನ್ಯದ ಪ್ರತಿಬಿಂಬಗಳು ಯಾವುದೇ ಒಂದು ಸಮುದಾಯದ ಸಂಸ್ಕೃತಿಯನ್ನು ಅರಿಯಬೇಕಾದರೆ ಆ ಸಮುದಾಯದ ಜನಪದ ಸಂಪತ್ತನ್ನು ವಿವರವಾಗಿ ಅಭ್ಯಸಿಸಬೇಕಾಗುತ್ತದೆ. ಕಾರಣ ಅದು ಆ ಜನಾಂಗದ ಮಾನಸಿಕ ಚೈತನ್ಯದ ಪ್ರತಿರೂಪವಾಗಿರುತ್ತದೆ. ಜನರ ನೋವು–ನಲಿವು, ಸುಖ–ದುಃಖ, ದೈನಂದಿನ ಬದುಕಿನ ಆಗು–ಹೋಗುಗಳೆಲ್ಲ ಅವರ ಜನಪದ ಸಾಹಿತ್ಯದ ಮುಖೇನ ಹೊರಬರುತ್ತದೆ. ಪ್ರತಿಯೊಂದು ಬುಡಕಟ್ಟು ನಿಸರ್ಗದಲ್ಲಿನ ಅಗೋಚರ ಶಕ್ತಿಗಳಲ್ಲಿ ನಂಬಿಕೆ ಇಟ್ಟು ಅವುಗಳನ್ನು ಒಲಿಸಿಕೊಳ್ಳಲು ಪ್ರಾರ್ಥನೆಗಳನ್ನು ರೂಢಿಸಿಕೊಂಡಿತು. ಬಲಿ ಹೆಸರಿನಲ್ಲಿ ಪ್ರಾಣಿಗಳನ್ನು ಬಲಿಕೊಟ್ಟು ದೇವರನ್ನು ಒಲಿಸಿಕೊಳ್ಳುವ ಪ್ರಯತ್ನ ಮಾಡುತ್ತಾ ಬಂದಿತು. ಪ್ರಾರ್ಥನೆಯ ಹೆಸರಿನಲ್ಲಿ ಸಾಹಿತ್ಯ ಹುಟ್ಟಿಕೊಂಡಿತು. ದೇವರ ಪದಗಳು ಹುಟ್ಟಿಕೊಂಡವು. ಬರಬರುತ್ತ ದಿನವಿಡೀ ದುಡಿದ ದೇಹಕ್ಕೆ, ಮನಸ್ಸಿಗೆ ಉಲ್ಲಾಸವಾಗುವಂತೆ ಹಾಡುಗಳನ್ನು ಹಾಡತೊಡಗಿದರು. ತಮಗಾದ ನೋವು, ಕಷ್ಟಗಳನ್ನು ಮರೆಯಲು, ತಮಗಾದ ಸಂತೋಷವನ್ನು ಹೊರಹಾಕಲು ಜನಪದ ಸಾಹಿತ್ಯ ಹುಟ್ಟಿಕೊಂಡಿತು. ಇದು ಜನಪದರ ದೈನಂದಿನ ಜೀವನದ ಅನುಭವದ ಕೈಗನ್ನಡಿಯಾಯಿತು.

**ಉಪಸಂಹಾರ**

ಜಾಗತೀಕರಣದ ದಟ್ಟ ಛಾಯೆ ಎಲ್ಲಾ ಕಡೆ ತನ್ನ ಪ್ರಭಾವ ಬೀರುತ್ತಿದೆ. ಈ ಮಾತು ಬುಡಕಟ್ಟುಗಳಿಗೂ ಹೊರತಾಗಿಲ್ಲ. ಸಮುದಾಯವೊಂದು ತನ್ನ ಸಾಂಸ್ಕೃತಿಕ ಕೋಶದ ಒಳಗೆ ಕಾಲದ ಅನಿವಾರ್ಯತೆಯ ಫಲವಾಗಿ ಆಗುವ ಬದಲಾವಣೆಗಳನ್ನು ಸಮಾಧಾನದಿಂದ ಗಮನಿಸುತ್ತ ಇರುತ್ತದೆ. ಬದಲಾವಣೆಯ ಲಯಕ್ಕೆ ತನ್ನನ್ನು, ತನ್ನ ಸಂವೇದನೆಗಳನ್ನು ಹೊಂದಿಸಿಕೊಳ್ಳುವ ಪ್ರಯತ್ನ ಸಮುದಾಯವನ್ನು ಜೀವಂತವಾಗಿರಿಸುತ್ತದೆ. ಅಂದರೆ ಸಮುದಾಯ ಎಲ್ಲಾ ಬದಲಾವಣೆಗಳನ್ನು, ಏರುಪೇರುಗಳನ್ನು ಒಪ್ಪಿಕೊಳ್ಳುತ್ತದೆ ಎಂದರ್ಥವಲ್ಲ, ಬದಲಾಗಿ ಅನಿವಾರ್ಯತೆಯಿಂದಾಗಿ, ಪರಿಸ್ಥಿತಿಗೆ ಅನುಗುಣವಾಗಿ ಬದಲಾಗುತ್ತದೆ. ಆದರೆ ತನ್ನ ಸಂಸ್ಕೃತಿಯ ವೈವಿಧ್ಯತೆ, ಅನನ್ಯತೆಯನ್ನು ಉಳಿಸಿಕೊಂಡೆ ಬದಲಾಗುತ್ತದೆ ಎಂಬುದು ಗಮನಾರ್ಹ ಅಂಶವಾಗಿದೆ. ಬುಡಕಟ್ಟು ಸಮುದಾಯಗಳಲ್ಲಿ ಪ್ರಧಾನವಾಗಿ ಕಂಡುಬರುವ ಲಂಬಾಣಿ, ಕಾಡುಗೊಲ್ಲ ಮತ್ತು ಮ್ಯಾಸಬೇಡ ಬುಡಕಟ್ಟುಗಳು ತಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಹೆಣಗಾಡುತ್ತಿವೆ. ಬುಡಕಟ್ಟು ಸಮುದಾಯಗಳು ಸಂಪ್ರದಾಯ, ಮೂಢನಂಬಿಕೆಗಳನ್ನು ತೊರೆದು ಬದಲಾವಣೆಗೆ ಹೊಂದಿಕೊಳ್ಳುವುದು ಪ್ರಸ್ತುತ ಸಂದರ್ಭಕ್ಕೆ ಅನಿವಾರ್ಯವಾಗಿದೆ. ‘ಎಲ್ಲಿ ಹುಲ್ಲು ನೀರು ಇದೆಯೋ ಅಲ್ಲಿ ನಮ್ಮ ಮನಿಮಾರು’ ಎಂಬ ಸಿದ್ಧಾಂತವನ್ನು ಹೊಂದಿದ್ದ ಈ ಮೂರು ಬುಡಕಟ್ಟುಗಳು ಇಂದು ಬಯಲು ಸೀಮೆಯಾಗಿರುವ ಪ್ರದೇಶದಲ್ಲಿ ನೆಲೆನಿಂತಿದ್ದಾರೆ. ನಾಗರಿಕತೆಗೆ ಹೊಂದಿಕೊಳ್ಳುತ್ತಿರುವ ಸಮುದಾಯಗಳ ಜೀವನ ಕ್ರಮದಲ್ಲಿ ಸಾಕಷ್ಟು ಬದಲಾವಣೆಗಳಾಗುತ್ತಿರುವುದನ್ನು ನೋಡಬಹುದಾಗಿದೆ. ಸಾಮಾಜಿಕ, ಶೈಕ್ಷಣಿಕ, ಆರ್ಥಿಕ ಹಾಗೂ ರಾಜಕೀಯ ಸ್ಥಿತಿಗತಿಗಳಲ್ಲಿ ಬುಡಕಟ್ಟು ಸಮುದಾಯಗಳ ಸ್ಥಾನಮಾನ ಇಂದು ಸಾಕಷ್ಟು ಬದಲಾಗುತ್ತಿದೆ ಎಂಬುದನ್ನು ಗಮನಿಸಬಹುದಾಗಿದೆ.

**ಕೊನೆಟಿಪ್ಪಣಿಗಳು**


1. ಚೆಲುವಾರಾಜು. (1997). *ಜುಂಜಪ್ಪ.* ಅಂಕಿತ ಪುಸ್ತಕ. ಪು.ಸಂ.14
2. ವೃಷಬೇಂದ್ರಸ್ವಾಮಿ.ಎಸ್.ಎಂ. (ಸಂ.) (1998). *ಜನಪದ ಸಾಹಿತ್ಯ ದರ್ಶನ ಭಾಗ–9.* ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಪುಟ. 16.
3. ಶಂಕರನಾರಾಯಣ ತೀ.ನಂ. (1982). *ಕಾಡಗೊಲ್ಲ ಸಂಪ್ರದಾಯ ಮತ್ತು ನಂಬಿಕೆಗಳು.* ಪುಟ. 174.
4. ಮಲ್ಲಿಕಾರ್ಜುನ ಕುಂಬಾರ. (2014). *ನಮ್ಮ ಪರಿಸರದ ಲಂಬಣಿಗರು.* ಕರ್ನಾಟಕ ಜಾನಪದ ವಿಶ್ವವಿದ್ಯಾಲಯ, ಪುಟ. 17

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 19-24
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಎಮ್.ಎಸ್. ಸಿಂಧೂರ ಅವರ ಸಣ್ಣಕಥೆಗಳ ಅವಲೋಕನ

ಮಹಾಂತೇಶ ಸೀತಾರಾಮ ಕಾಂಬಳೆ[1] ಮತ್ತು ಡಾ. ಭೀಮಾಶಂಕರ ಜೋಷಿ[2]
ಸಂಶೋಧನಾ ವಿದ್ಯಾರ್ಥಿ[1], ಸಹಾಯಕ ಪ್ರಾಧ್ಯಾಪಕರು[2]
ಕನ್ನಡ ಅಧ್ಯಯನ ವಿಭಾಗ, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ.

***Abstract:***

*ಹತ್ತನೇ ಶತಮಾನದ ಆರಂಭದಲ್ಲಿ ಸಣ್ಣಕಥೆಗಳು ಕನ್ನಡದಲ್ಲಿ ಹುಟ್ಟಿಕೊಂಡಿವೆ. ಕನ್ನಡ ಕಥಾ ಸಂಪ್ರದಾಯ ಬೆಳೆದು ಬಂದಿದ್ದು ಮೊದಲು ಜನಪದರಲ್ಲಿ. ಜನಪದರು ತಮ್ಮ ಕಥೆಗಳನ್ನು ಮೌಖಿಕವಾಗಿ ಉಳಿಸಿಕೊಂಡ ಬಂದಿದ್ದರು. ಕಥೆಗಳು ಮುಂದೆ ಬರಹ ರೂಪಕ್ಕೆ ಇಳಿದದ್ದು ಮಾತ್ರ ಕ್ರಿ.ಶ. 920ರಲ್ಲಿ. ಶಿವಕೋಟಾಚಾರ್ಯರು ಕ್ರಿ.ಶ.920 ರಲ್ಲಿ ಬರೆದ 19 ಕಥೆಗಳ ಸಂಕಲನ ವಡ್ಡಾರಾಧನೆ, ನಂತರ ದುರ್ಗಸಿಂಹನ ಪಂಚತಂತ್ರ, ನಯಸೇನನ ಧರ್ಮಾಮೃತ, ಲಕ್ಷ್ಮೀಶನ ಜೈಮಿನಿ ಭಾರತ ಹಾಗೂ ಹೆಳವನಕಟ್ಟೆ ಗಿರಿಯಮ್ಮನ ಕಥೆಗಳವರೆಗೆ ಕಥಾ ಸಾಹಿತ್ಯ ಪರಂಪರೆ ಬೆಳೆದು ಬಂದಿದೆ. ಪ್ರಸ್ತುತ ಲೇಖನದಲ್ಲಿ ಎಮ್.ಎಸ್.ಸಿಂಧೂರ ಅವರ ಸಣ್ಣಕಥೆಗಳನ್ನು ಅವಲೋಕನ ಮಾಡಲಾಗಿದೆ.*

***Keywords:*** *ಕನ್ನಡ ಸಾಹಿತ್ಯ, ಎಮ್.ಎಸ್.ಸಿಂಧೂರ, ಸಣ್ಣ ಕಥೆಗಳು, ಉರುಳುವ ಕಲ್ಲು, ಕಥೆ ಹೇಳುವೆ ಎನ್ನ, ನಾ ರಾಧೇಯ.*

**ಪೀಠಿಕೆ**

ಪಾಶ್ಚಾತ್ಯ ಸಾಹಿತ್ಯದ ಪ್ರಭಾವದಿಂದ 20ನೇ ಶತಮಾನದ ಆರಂಭದಲ್ಲಿ ಕನ್ನಡದ ಸಣ್ಣಕಥೆಗಳು ರಚಿತಗೊಂಡವು. ಪ್ರಾಚೀನ ಹಾಗೂ ಮೌಖಿಕ ಪರಂಪರೆಯ ಕೃತಿಗಳಲ್ಲಿ ಹರಿದು ಬರುತ್ತಿರುವ ಕಥನ ನಿರೂಪಣೆ ಆಧುನಿಕ ಕನ್ನಡ ಕಥಾ ಸಾಹಿತ್ಯಕ್ಕೆ ಸಹಜವಾಗಿ ಹೊಸ ಸೃಷ್ಟಿಗೆ ಕಾರಣವಾದವು. ನವೋದಯ ಕಾಲಘಟ್ಟದಲ್ಲಿ "ಪಂಜೇ ಮಂಗೇಶರಾಯರ ಸಣ್ಣಕಥೆಗಳ ಮೂಲಕ ಕಥಾ ಪರಂಪರೆ ಆರಂಭವಾಯಿತು. ಮೊದಲು ಪತ್ರಿಕೆಗಳಲ್ಲಿ ಪ್ರಕಟಗೊಂಡ ನಂತರ ಸಂಕಲನ ರೂಪದಲ್ಲಿ ಹೊರ ತಂದರು. 1900ರಲ್ಲಿ ಪ್ರಕಟವಾದ 'ನನ್ನ ಚಿಕ್ಕತಾಯಿ' ಕನ್ನಡದ ಮೊದಲ ಸಣ್ಣಕಥೆ ಎಂದು ಕರೆಯಲಾಗಿದೆ. ತದನಂತರದಲ್ಲಿ 'ನನ್ನ ಚಿಕ್ಕತಂದೆ', 'ಭಾರತ ಶ್ರವಣ', ಕಮಲಾಪುರದ ಹೋಟ್ಲಿನಲ್ಲಿ"[1] ಪ್ರಮುಖವಾಗಿವೆ. ನವೋದಯ ಸಾಹಿತ್ಯದಲ್ಲಿ ಶ್ರೀನಿವಾಸರರಿಂದಲೇ ಸಣ್ಣಕಥೆ ಒಂದು ಸಾಹಿತ್ಯ ಪ್ರಕಾರವಾಗಿ ಕನ್ನಡದಲ್ಲಿ ಬಳಕೆಗೆ ಬಂದಿತು. ನಂತರ ಕೆರೂರು ವಾಸುದೇವಾಚಾರ್ಯರು, ಎಂ.ಎನ್.ಕಾಮತರು, ಆನಂದ, ಮ.ತಿ.ನ, ಗೋರೂರು ರಾಮಸ್ವಾಮಿ ಅಯ್ಯಂಗಾರ, ಎಂ.ವೀ.ಸೀತಾರಾಮಯ್ಯ, ಎ.ಆರ್.ಕೃಷ್ಣಶಾಸ್ತ್ರಿ, ಕುವೆಂಪು, ಜೀಶಂಪ, ಮುಂತಾದವರು ಸಣ್ಣಕಥೆ ಸಾಹಿತ್ಯದಲ್ಲಿ ಕೇಳಿಬರುವ ಸಾಹಿತಿಗಳಾಗಿದ್ದಾರೆ. ಪ್ರಗತಿಶೀಲ ಕಾಲಘಟ್ಟದಲ್ಲಿ ಅ.ನ.ಕೃ, ಬಸವರಾಜ ಕಟ್ಟಿಮನಿ, ನಿರಂಜನ,

***Please cite this article as:*** ಮಹಾಂತೇಶ ಸೀತಾರಾಮ ಕಾಂಬಳೆ ಮತ್ತು ಭೀಮಾಶಂಕರ ಜೋಷಿ. (2024). ಎಮ್.ಎಸ್.ಸಿಂಧೂರ ಅವರ ಸಣ್ಣಕಥೆಗಳ ಅವಲೋಕನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 19–24

ಚದುರಂಗರು ಪ್ರಮುಖರು. ನವ್ಯ ಕಾಲಘಟ್ಟದಲ್ಲಿ ರಾಮಚಂದ್ರ ಶರ್ಮ, ಚಿತ್ತಾಲರು, ಶಾಂತಿನಾಥ ದೇಸಾಯಿ, ಅನಂತಮೂರ್ತಿ, ಲಂಕೇಶ, ಸದಾಶಿವ, ರಾಘವೇಂದ್ರ ಖಾಸನೀಸ, ಶ್ರೀಕೃಷ್ಣ ಆಲನಹಳ್ಳಿ, ಪೂರ್ಣಚಂದ್ರ ತೇಜಸ್ವಿ, ವೀಣಾ ಶಾಂತೇಶ್ವರ ಪ್ರಮುಖರು. ದಲಿತ–ಬಂಡಾಯ ಕಾಲಘಟ್ಟದಲ್ಲಿ ದೇವನೂರ ಮಹಾದೇವ, ಕಾಳೇಗೌಡ ನಾಗವಾರ, ಚೆನ್ನಣ್ಣ ವಾಲೀಕಾರ, ಚಂದ್ರಶೇಖರ ಪಾಟೀಲರು ಪ್ರಮುಖರು.

ಹೊಸ ತಲೆಮಾರಿನ ಲೇಖಕರು ಇತ್ತೀಚಿನ ಜನ ಜೀವನ, ಮನೋಧರ್ಮ, ಕತೆಗಾರರ ಆಶಯ, ಕಲ್ಪನೆ, ಪ್ರತಿಭೆಗಳು ವೈವಿಧ್ಯಮಯ ಕಥೆಗಳು ಸೃಷ್ಟಿಗೆ ಕಾರಣವಾಗಿವೆ. ಇಂತಹ ವಿಷಯಗಳು ಇಟ್ಟುಕೊಂಡು ಪೀರ್‌ಭಾಷಾ, ವಿಕ್ರಮ ವಿಸಾಜಿ, ತಾರಿಣಿ ಶುಭದಾಯಿನಿ, ಅರವಿಂದ ಚೊಕ್ಕಾಡಿ, ವಿನಯಾ ಒಕ್ಕುಂದ, ರಮೇಶ ಅರೋಲಿ, ಸುನಂದಾ ಕಡೆಮನಿ ಪ್ರಮುಖರು. ಪ್ರಾಚೀನದಿಂದ ಹೊಸ ತಲೆಮಾರಿನವರಗೆ ಲೇಖಕರು ಕಥಾ ಪರಂಪರೆ ಮುಂದುವರಿಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ನವ್ಯ ಮತ್ತು ದಲಿತ–ಬಂಡಾಯ ಕಾಲಘಟ್ಟದಲ್ಲಿ ಬರುವ ಎಮ್.ಎಸ್.ಸಿಂಧೂರ ಅವರು ನಾಲ್ಕು ಕಥಾ ಸಂಕಲನಗಳನ್ನು ಹೊರ ತಂದಿದ್ದಾರೆ. ಇವರ ಮೊದಲ ಕಥಾ ಸಂಕಲನ 'ಹುಚ್ಚರ ರಾಜ್ಯ' ನಂತರದಲ್ಲಿ 1963ರಲ್ಲಿ 'ಉರುಳುವ ಕಲ್ಲು', 2007ರಲ್ಲಿ 'ನಾ ರಾಧೇಯ', 2017ರಲ್ಲಿ 'ಕಥೆ ಹೇಳುವೆ ಎನ್ನ' ಎಂಬ ಕಥೆಗಳು ಪ್ರಕಟಗೊಂಡವು. ಈ ಮೂರು ಕಥೆಗಳಲ್ಲಿ ಸಾಮಾಜಿಕ, ವೈಚಾರಿಕ, ನೈತಿಕ ಮೌಲ್ಯಗಳು ತುಂಬಿಕೊಂಡಿವೆ.

ಸಿಂಧೂರ ಅವರು ತಮ್ಮ ಕಥೆಗಳ ಆರಂಭದಲ್ಲಿ ಪ್ರಕೃತಿ ವರ್ಣನೆ ಹೆಚ್ಚಾಗಿದೆ. ಕೆಲವು ಕಥೆಗಳಲ್ಲಿ ನಿಸರ್ಗದ ವರ್ಣನೆ ದೀರ್ಘವಾದರೂ ಕಥೆಗೆ ಯಾವುದೇ ಬಾಧಕವಾಗದಂತೆ ಪೂರಕವಾಗಿವೆ. 'ಉರುಳುವ ಕಲ್ಲು' ಎಂಬ ಕಥಾ ಸಂಕಲನವೂ ಪ್ರಕೃತಿ ವರ್ಣನೆ ಮೂಲಕ ಕಥೆ ನಿರೂಪಣೆ ಸಾಗುತ್ತದೆ. ಕಥೆಯ ಮುನ್ನೋಟದ ಮೂಲಕ ಕಥೆಯ ಆಶಯವನ್ನು ವ್ಯಕ್ತಪಡಿಸುತ್ತಾರೆ. ಬದುಕಿನ ಹಾದಿ, ಮಾನವನ ಜೀವಾನುಭವ ಕುರಿತಾದ ಬರಹವು ಸಾಹಿತ್ಯದ ರಸಗಟ್ಟಿಯಂತ್ತಿದ್ದು, ಕಥೆಗಳು ಮಾರ್ಮಿಕವಾಗಿವೆ. ಪಂಚತಂತ್ರ ಕಥೆಗಳು ಹಾಗೂ ಈ ಸೋಪನ ನೀತಿಕಥೆಗಳನ್ನು ನೆನಪಿಗೆ ಬರುವಂತೆ ಲೇಖಕರು ಕಥೆಯನ್ನು ಕಟ್ಟುವರು. 'ಉರುಳುವ ಕಲ್ಲು' ಕಥಾ ಸಂಕಲನದಲ್ಲಿ ಮೂರು ಭಾಗವನ್ನು ಮಾಡಿಕೊಂಡಿದ್ದಾರೆ. 'ಉರುಳುವ ಕಲ್ಲು,' 'ಗುಂಡುಕಲ್ಲು,' 'ಘರಸಿಕಲ್ಲು' ಎಂಬ ಭಾಗದಲ್ಲಿ ಹಲವು ಕಥೆಗಳನ್ನು ಒಳಗೊಂಡಿವೆ. ಎಲ್ಲ ಕಥೆಗಳಲ್ಲಿ ಒಂದು ಕಥೆಯ ವಸ್ತುವಿನ ಮೂಲಕ ಇನ್ನೊಂದು ಕಥಾ ವಸ್ತು ನಿರ್ಮಾಣವಾಗುತ್ತದೆ. ಹಿಂದಿನ ಕಥೆಗೆ ಮುಂದಿನ ಕಥೆ ಪೂರಕವಾಗಿರುತ್ತದೆ. ಉರುಳುವ ಕಲ್ಲು ಕಥೆಗಳು ಜನಪದಕಾರರು ಹೇಳುವ ಕಟ್ಟು ಕಥೆಗಳಂತೆ ಕೂಡುತ್ತದೆ. ಕಥಾ ನಿರೂಪಣೆ ಸಾಗುತ್ತದೆ. ಹಾಗೂ ಕಥೆಯ ಕೊನೆಗೆ ಸಮಾಜಕ್ಕೆ ಒಳಿತಾಗುವ ಸಂದೇಶವನ್ನು ಕೊಡುತ್ತವೆ.

ಉರುಳುವ ಕಲ್ಲು ವಿಭಾಗದಲ್ಲಿ ವ್ಯಕ್ತಿಯ ವಿಷಯ ವಾಸನೆ, ದೈಹಿಕ ಹಾಗೂ ಮಾನಸಿಕ ದೌರ್ಬಲ್ಯ ಮತ್ತು ಬಡತನ ಹೀನಾಯ ಸ್ಥಿತಿಯನ್ನು ಕುರಿತು ಮಾತನಾಡುತ್ತದೆ. ಬಲಿಷ್ಠರ ಶೋಷಣೆ ಹಾಗೂ ಅವಕಾಶವಾದಿಗಳ ದ್ವಂದ್ವ ಬುದ್ಧಿ, ಜನರು ವಂಚನೆಗೆ ಹೇಗೆ ಬಲಿಯಾಗುತ್ತಾರೆ ಎಂಬುದನ್ನು ಚಿತ್ರಿಸುತ್ತದೆ. ಬಹುತೇಕ ಕಥೆಗಳು ಲುಪ್ತಶ್ಲೇಷಾಲಂಕಾರದಲ್ಲಿ ರಚಿತವಾಗಿವೆ. ಕೆಲವು ಕಥೆಗಳು ಸುಂದರ ಪ್ರತೀಕಗಳಿಂದ ಕೂಡಿವೆ. 'ಜ್ಯೋತಿ' ಎಂಬ ಕಥೆಯು ಅನುಭವದ ಮೂಲಕ ಹೆಣ್ಣಿನ ಮಹತ್ವ ತಿಳಿಸುತ್ತದೆ. ಸಂಸಾರವೆಂಬ ಸಾಗರದಲ್ಲಿ ಗಂಡು ಹೆಣ್ಣು ಎಂಬುವರು ಒಂದೇ ನ್ಯಾಣದ ಎರಡು ಮುಖಗಳು. ಇಬ್ಬರೂ ಕೂಡಿಕೊಂಡು ಜೀವನವನ್ನು ಸಾಗಿಸಬೇಕು ಇಲ್ಲವಾದರೆ ಸಂಸಾರವು ಸೂತ್ರವಿರದ ಗಾಳಿಪಟವಾಗುತ್ತದೆ. ಹೆಣ್ಣು ಒಂದು ಜ್ಯೋತಿಯಿದ್ದ ಹಾಗೆ ಅದು ಬೆಳಗಿದರೆ ಬೆಳಕು, ಉರಿದರೆ ಹೊಗೆ,

ಆರಿದರೆ ಕತ್ತಲೆ ಜೀವನದಲ್ಲಿ ತುಂಬಿಕೊಳ್ಳುವುದು. ಈ ಕಥೆಯಲ್ಲಿ ನಿರೂಪಕರ ಹಾಗೂ ಮುದಕನ ಪ್ರಾತವಿದೆ. ಶಿವಪುರ ಎಂಬ ಊರಿನ ಹಳ್ಳದ ಪಕ್ಕದಲ್ಲಿ ಒಂದು ಗುಡಿಸಲು ಆ ಗುಡಿಸಲ ಕಿಡಿಯಲ್ಲಿ ದೀಪವು ಲೇಖಕರಿಗೆ ಕಾಣುವುದು ಮತ್ತೊಂದು ದಿನ ಗುಡಿಸನಲ್ಲಿ ದೀಪ ನಂದಿ ಹೋಗುವುದು ಆ ಮುದಕನ ಹತ್ತಿರ ಬಂದು ನಿರೂಪಕ ಕೇಳಿದ್ದರೆ ಗುಡಿಸಲಲ್ಲಿನ ಬೆಳಕನ್ನು ಹೆಣ್ಣಿಗೆ ಹೋಲಿಕೆ ಮಾಡಿ ಕಥೆ ಮುಂದೆ ಸಾಗುವುದು.

'ಸಾಕಿದ ಕ್ರೌಂಚಗಳು' ಎಂಬ ಕಥೆಯಲ್ಲಿ ಬೇಟೆಗಾರ ಒಂದು ಕ್ರೌಂಚ ಪಕ್ಷಿಯನ್ನು ಸಾಕಿರುತ್ತಾನೆ ಇದರಿಂದ ಬೇಟೆಯಾಡುವಾಗ ಇದರ ಸುತ್ತ ಬಲೆ ನಿರ್ಮಿಸುತ್ತಾನೆ. ಇದರ ಧ್ವನಿ ಕೇಳಿ ಉಳಿದ ಕ್ರೌಂಚ ಪಕ್ಷಿಗಳು ಬಲೆಗೆ ಬೀಳುತ್ತವೆ ಈ ಕಥೆಯಲ್ಲಿ ಬೇಟೆಗಾರ ಸಾಕಿದ ಕ್ರೌಂಚ ಪಕ್ಷಿ ತನ್ನ ಕೃತಜ್ಞತೆಗಾಗಿ ಇಡೀ ಕುಲಕ್ಕೆ ಕಂಟಕವಾಗುವುದನ್ನು ವಿವರಿಸುತ್ತದೆ. ಸಾಕಿದವರ ಉಪಕಾರ ತೀರಿಸುವುದು ಅದರ ಕರ್ತವ್ಯ ಆದರೆ ತನ್ನ ಕುಲವನ್ನು ಸಮಾಜ ಘಾತುಕರ ಕಡೆ ನೀಡಬಾರದು. 'ಕೊಡಲಿ ಕಾವು ಕುಲಕ್ಕೆ ಮೂಲ' ಎಂಬ ಗಾದೆ ಮಾತಿನಂತೆ ತನ್ನ ಕುಲಕ್ಕೆ ತಾನೇ ಶತ್ರುವಾಗುವ, ಸಮಾಜದಲ್ಲಿ ಒಳಿತನ್ನು ಮಾಡದ ವ್ಯಕ್ತಿಯ ಮಾತನು ಕೇಳಿ ಇಡೀ ಸಮಾಜವನ್ನು ನಾಶಮಾಡಬಾರದೆಂದು ಈ ಕಥೆಯ ವಸ್ತುವಾಗಿದೆ. ಈ ಕಥೆಯಲ್ಲಿ ನಿರೂಪಕರು ಹಾಗೂ ಬೇಟೆಗಾರನ ನಡುವೆ ಕಥೆ ಸಾಗುವುದು.

'ಸುಮನ ವಿಹಾರಿ' ಕಥೆಯಲ್ಲಿ ಕಾಮಕ್ಕಾಗಿ ಹಪಿಹಪಿಸುವದು, ಜಾತಿ ವ್ಯವಸ್ಥೆ, ಗಂಡಿನಿಂದ ಹೆಣ್ಣಿಗೆ ಆಗುವ ಮೋಸ, ಸಿರಿವಂತರ ಹಣದ ಮದದಿಂದ ಬಡ ಹೆಣ್ಣುಗಳನ್ನು ಬಳಿಸಿಕೊಳ್ಳುವ ಪರಿಯನ್ನು ವಿವರಿಸುತ್ತದೆ. ಈ ಕಥೆಯು ನಿಸರ್ಗದಲ್ಲಿ ಬರುವ ಹೂಗಳಾದ ಮಲ್ಲಿಗೆ, ಸಂಪಿಗೆ, ಲಕ್ಕಿಯ ಹೂಗಳ ಪಾತ್ರ ಪ್ರಮುಖವಾಗಿವೆ. ಈ ಪಾತ್ರದ ಮೂಲಕ ಲಕ್ಕಿ ಹೂವನ್ನು ಇಂದಿನ ಸಮಾಜದಲ್ಲಿ ಕನಿಷ್ಠವಾಗಿ ಕೆಳವರ್ಗದ ಪ್ರತಿನಿಧಿಯಾಗಿ ನೋಡುತ್ತೇವೆ ಆದರೆ ಮಲ್ಲಿಗೆ, ಸಂಪಿಗೆ ಹೂಗಳು ಮೇಲ್ವಗದ ಪ್ರತಿನಿಧಿಯಾಗಿ ಕಾಣುತ್ತೇವೆ. ಪುರುಷನ ಪ್ರತಿನಿಧಿಯಾಗಿ ಜೇನು ನೊಣವು ಮಲ್ಲಿಗೆ, ಸಂಪಿಗೆ ಜೊತೆಗೆ ಮಿಲನ ಹೊಂದಿ ನಂತರ ಅವುಗಳನ್ನು ಬಿಟ್ಟು ಲಕ್ಕಿಯ ಹೂವಿನ ಮಿಲನಕ್ಕಾಗಿ ಬಂದಾಗ ಲಕ್ಕಿಹೂ ತನ್ನ ಅಸ್ಮಿತೆಯನ್ನು ಹೊರಹಾಕುತ್ತದೆ. ಸಂಪಿಗೆ ಹಾಗೂ ಮಲ್ಲಿಗೆ ಎರಡು ಹೂಗಳು ಪುರುಷ ಆಮಿಷಕ್ಕೆ ಬೇಗ ಒಳಗಾದರೆ ಲಕ್ಕಿ ಹೂ ಈ ಆಮಿಷಕ್ಕೆ ಬೇಗನೆ ಒಳಗಾವುದಿಲ್ಲ. ಹಲವಾರು ಪ್ರಶ್ನೆಯನ್ನು ಹಾಕುತ್ತದೆ. "ಏನ ರಾಯರು ಸವಾರಿ ಇತ್ತ ಆಗಮಿಸಿತು? ನಾನು ಅಂತ್ಯಜಳೆಂದೂ, ಹೇಸಿಯ ಮಗಳೆಂದೂ ಹೀಯಾಳಿಸುವ ನಿಮ್ಮ ಸಮಾಜ ನಿಮ್ಮನ್ನು ಹೇಗೆ ಬರಗೊಟ್ಟಿತು?"[2] ಎಂದು ಇಡೀ ಸಮಾಜವನ್ನೇ ಪ್ರಶ್ನೆ ಮಾಡುತ್ತದೆ. ಜೇನು ನೊಣವು ಇಂದಿನ ಸಮಾಜದಲ್ಲಿನ "ಕ್ರೂರಿಗಳು, ಲಾಭಬಡಕರು ಇದ್ದಾರೆ. ದೇವರ ದೃಷ್ಟಿಯಲ್ಲಿ ಅಂತ್ಯಜರು ಉತ್ತಮರು ಎಂಬ ಭೇದವೇಲ್ಲಿ? ನಾವೆಲ್ಲರೂ ಸಮಾನರು, ಸಮಾಜದ ಕಟ್ಟನ್ನು ಒಡೆದು ಬದುಕಬೇಗು"[3] ಎಂಬ ಮಾತು ಕೇಳಿದ ಲಕ್ಕಿ ಹೂ ನಾನು ನಿಮ್ಮ ಮಾತನ್ನು ನಂಬಬಹುದೇ ಎಂದು ಪ್ರಶ್ನೆ ಮಾಡಿ, ಕೊನೆಗೆ ಬಣ್ಣದ ಮಾತಿಗೆ ಒಳಗಾಗಿ ಜೇನು ನೊಣದೊಂದಿಗೆ ಮಿಲನ ಹೊಂದುತ್ತದೆ. ಇಲ್ಲಿ ಕಾಮಕ್ಕಾಗಿ ಮಾನವ ಹೆಣ್ಣನ್ನು ಬಳಿಸಿಕೊಂಡ ಪರಿ, ಸ್ತ್ರೀ ಶೋಷಣೆ, ಹಣ ದರ್ಪದಿಂದ ಸಮಾಜದಲ್ಲಿ ಮಾಡುವ ಹೇಯ ಕೃತ್ಯದ ವಿವಿಧ ಮಜಲನ್ನು ಲೇಖಕರು ಈ ಕಥೆಯ ಮೂಲಕ ತಿಳಿಸುತ್ತಾರೆ. ಈ ಕಥೆಯಲ್ಲಿ ದಲಿತ–ಬಂಡಾಯದ ಸಂವೇದನೆಯನ್ನು ಗುರತಿಸಬಹದು.

ಸಿಂಧೂರ ಅವರ ಮೂರನೇ ಕಥೆ 'ನಾ ರಾಧೇಯ' ಈ ಒಂದು ಕಥೆಯೂ ಮಹರ್ಷಿ ವ್ಯಾಸರ ಮಹಾಭಾರತದಲ್ಲಿ ಕರ್ಣನ ಪಾತ್ರವನ್ನು ಇಟ್ಟುಕೊಂಡು ಕಥೆಯನ್ನು ರಚಿಸಲಾಗಿದೆ. ಕರ್ಣನ ಜೀವನ ವೃತ್ತಾಂತದಲ್ಲಿ ನಡೆದ ಘಟನೆಗಳನ್ನು ಕಥೆಗಳಾಗಿ ಮುಂದೆ ಸಾಗುತ್ತವೆ. ಕರ್ಣ ತನ್ನ ಬಾಲ್ಯ ಜೀವನ, ಅಂಗ ದೇಶದ ರಾಜನಾಗಿದ್ದು, ತಾಯಿ

ಮಗನಿಗೆ ತೋರುವ ಪ್ರೀತಿಯ ಕುರಿತು ತನ್ನಲ್ಲಿ ಮಾತಾಡುವ ಜೊತೆಗೆ ರಾಧೇಯ, ಕೃಷ್ಣ, ಕುಂತಿ, ದ್ರೋಣ, ಹಾಗೂ ಪರಶುರಾಮನನ್ನು ಪ್ರಶ್ನಿಸುವ ಮೂಲಕ ಕಥೆ ಸಂಭಾಷಣೆ ಮುಂದುವರಿಯುತ್ತದೆ. ಕೆಲವು ಪ್ರಶ್ನೆಗಳಿಗೆ ಉತ್ತರವನ್ನು ಕಂಡುಕೊಂಡರೆ ಅನೇಕ ಪ್ರಶ್ನೆಗಳಿಗೆ ಉತ್ತರವೇ ಸಿಗುವುದಿಲ್ಲ. ಒಟ್ಟಾರೆ ಈ ಕಥೆಯೂ ನಾಟಕೀಯ ರೂಪದಲ್ಲಿ ಮುಂದೆ ಸಾಗುತ್ತದೆ.

'ನಾ ರಾಧೇಯ' ಎಂಬ ಕಥೆಯಲ್ಲಿ ಕರ್ಣ ಜೀವನ ವೃತ್ತಾಂತದಲ್ಲಿ ಸಂಭವಿಸಿರುವ ದುರಂತಗಳನ್ನು ಲೇಖಕರು ಕರ್ಣನಾಗಿ ಒಂದೊಂದು ಪ್ರಶ್ನೆ ಮಾಡುತ್ತಾ ಸಾಗುತ್ತಾರೆ. ಕಾನೀನ ಶಿಶುವಿಗೆ ಔರಸ ಪುತ್ರನಷ್ಟೇ ಮರ್ಯಾದೆ ಇದ್ದಾಗಲೂ ಕುಂತಿದೇವಿ ಮಗುವನ್ನು ನದಿಯಲ್ಲಿ ಏಕೆ ಬಿಟ್ಟಳು? ಭಯ ಭೀತಳಾಗಿಯೋ, ಮರ್ಯಾದೆಗೆ ಅಂಜಿಯೊ, ಇಲ್ಲ ಕುಟುಂಬದ ಗೌರವ ಕಾಪಾಡಿಕೊಳ್ಳುವ ಉದ್ದೇಶದಿಂದಲ್ಲೋ ಎಂಬ ಪ್ರಶ್ನೆ ಎದುರಾಗುತ್ತದೆ. ಮುಂದುವರಿದು ಭೋಜರಾಜನ ರಾಜ್ಯದಲ್ಲಿ ಅತಿರಥ ಇರುವರು ಕುರುರಾಜ್ಯದಲ್ಲಿ ಗಂಗಾನದಿಯಿದೆ, ಆ ಶಿಶು ತೇಲಿ ಬಂದು ಅತಿರಥನಿಗೆ ದೊರೆತದ್ದು ಹೇಗೆ? ಕೃಷ್ಣ ಮತ್ತು ಕರ್ಣನ ಜೀವನದಲ್ಲಿ ಕೆಲವು ಸಾಮ್ಯತೆಗಳು ಕಂಡು ಬರುತ್ತವೆ. ಕೃಷ್ಣ ಹುಟ್ಟಿದ್ದು ಕ್ಷತ್ರಿಯರಲ್ಲಿ ಬೆಳೆದದ್ದು ಗೌಳಿಯರ ಮನೆಯಲ್ಲಿ, ಅವನಿಗೇಕೆ ಜಾತಿ ಸೂತಕ ಅಂಟಲಿಲ್ಲ. ಕರ್ಣನ ತಾಯಿ ಕೃಷ್ಣನ ಸೋದರತ್ತೆ ಅವಳು ಕರ್ಣನನ್ನು ಹೆತ್ತದ್ದು ದೇವ ಪುರುಷ ಸೂರ್ಯನಿಂದ, ಅವನು ಬೆಳೆದದ್ದು ಅಂಬಿಗರ ಮನೆಯಲ್ಲಿ ಇವಗೇಕೆ ಸೂತಪುತ್ರ ಇಂತಹ ಜಾತಿ, ಧರ್ಮ, ನೀತಿ ನೆಲೆಯಿಂದಾಗಿ ಕರ್ಣನನ್ನು ಮರಣಕ್ಕೆ ನೂಕೂತ್ತವೆ. ಆತನ ವ್ಯಕ್ತಿತ್ವ, ಆತನ ದಾನ ಗುಣ ಆತನನ್ನು ಎತ್ತರದ ಸ್ಥಾನಕ್ಕೆ ನಿಲ್ಲಿಸುತ್ತವೆ. ಯಾವ ಆಸೆ ಆಮಿಷಗಳಿಗೆ ಒಳಗಾಗದೆ ತನ್ನ ನಂಬಿದವರಿಗಾಗಿ ಕೊನೆಯವರೆಗೆ ನಿಷ್ಠನಾಗಿ ಉಳಿದ ಪ್ರಸಂಗವನ್ನು ವಿವರಿಸುತ್ತಾರೆ. ಕರ್ಣ ತನ್ನನ್ನು ತಾನು ಕಂಡಾಗ, ಅವನ ಸುತ್ತಲಿನ ಜಗತ್ತು ಹೇಗೆ ತೋರುತ್ತದೆ ಎಂಬ ವಿಷಯವನ್ನು ನಾ ರಾಧೇಯ ಕಥೆ ತಿಳಿಸುತ್ತದೆ. ಇಲ್ಲಿ ಕರ್ಣ ತನ್ನನ್ನು ತಾನು ಹಲವು ಮುಖಗಳಿಂದ ಪ್ರಶ್ನಿಸಿಕೊಳುತ್ತಾನೆ ಹಾಗೂ ಹಲವರನ್ನು ಪ್ರಶ್ನಿಸುತ್ತಾನೆ. ಈ ಕಥೆಯಲ್ಲಿ ಕರ್ಣನೆ ಕಥೆಯ ನಾಯಕ. ಕಥೆಯ ಅನುಗುಣವಾಗಿ ರಾಧೇಯ, ಅತಿರಥ, ಕೃಷ್ಣ, ಕುಂತಿ, ದ್ರೋಣಚಾರ್ಯರ, ಪರುಶುರಾಮ, ಅರ್ಜುನ, ಭೀಮ, ಶಲ್ಯ ಪಾತ್ರಗಳನ್ನು ಒಳಗೊಂಡಿದೆ.

ಕಥೆ ಹೇಳುವೆ ಎನ್ನ ಕಥೆಗಳಲ್ಲಿ ಐತಿಹಾಸಿಕ ಸ್ಥಳಗಳನ್ನು ಅರ್ಥೈಸಲು ಅನೂಕೂಲವಾಗಿವೆ. ಗ್ರಾಮೀಣ ಸೊಗಡಿನ ಕಥಾ ಶೈಲಿ, ಪದಗಳ ಬಳಕೆ ಹಾಗೂ ಕಥೆಯನ್ನು ಸಾಗಿಸಿಕೊಂಡು ಹೋಗುವ ಚಾಕಚಕ್ಯತೆ ಕೂತೂಹಲ ಮೂಢಿಸುತ್ತದೆ. ಈ ಕೃತಿಯು ಎಂಟು ಕಥೆಗಳನ್ನು ಒಳಗೊಂಡಿದೆ ಈ ಕಥೆಗಳಲ್ಲಿ ಇತಿಹಾಸ ಕುರುಹುಗಳನ್ನು ನೋಡಿಕೊಂಡು ಚರಿತ್ರೆ ಬರೆಯುವುದು ಒಂದು ಬಗೆಯಾದರೆ, ಇತಿಹಾಸದ ನೈಜತೆಗಳನ್ನು ಸ್ಪಷ್ಟವಾಗಿ ಅರಿತು ವಾಸ್ತವಿಕತೆಗೆ ತಕ್ಕಂತೆ ಕಥಾ ರೂಪದಲ್ಲಿ ನೀಡಿದ್ದಾರೆ. ಈ ಎಂಟು ಕಥೆಗಳು ಸೌಹಾರ್ದತೆ, ದೇಶಾಭಿಮಾನ ಹಾಗೂ ವಿವಿಧ ಮೌಲ್ಯಗಳನ್ನು ತಿಳಿಸುತ್ತವೆ.

ಲೇಖಕರು ಕಿತ್ತೂರು ಪ್ರವಾಸ ಕೈಗೊಂಡಾಗ ಕೋಟೆಯಲ್ಲಿ ವಿಶ್ರಾಂತಿ ಪಡೆಯುವಾಗ ಕಥೆಯು ಆರಂಭವಾಗುತ್ತದೆ. ಒಂದು ಕಾಲದಲ್ಲಿ ಭವ್ಯವಾದ ಚರಿತ್ರೆಯನ್ನು ಹೊಂದಿದ ಕಿತ್ತೂರು, ಈಗ ಅನಾಥವಾಗಿರುವು ಕಂಡು ಲೇಖಕರು ಇತಿಹಾಸದ ಘಟನೆಗಳನ್ನು ಮನದಲ್ಲಿ ನೆನೆಯುತ್ತಾರೆ. 1585ರಲ್ಲಿ ಕಿತ್ತೂರು ದೇಸಗತಿಯ ಚರಿತ್ರೆ ಆರಂಭವಾಗುತ್ತದೆ. ಅಲ್ಲಪ್ಪ ಗೌಡರಿಂದ ಸ್ಥಾಪನೆಯಾದ ಕಿತ್ತೂರು ಅನೇಕ ರಾಜರು ತಮ್ಮ ಪ್ರಭುತ್ವವನ್ನು ಸಾಧಿಸಲು ನಿರಂತರ ಪ್ರಯತ್ನ ಮಾಡುತ್ತಿದರು. ಪೂರ್ವಕ್ಕೆ ಮೊಘಲರು, ದಕ್ಷಿಣಕ್ಕೆ ಟಿಪ್ಪು, ಉತ್ತರಕ್ಕೆ ಮರಾಠರು, ಹೊಂಚ ಹಾಕಿ ಸಂಚಿನಲ್ಲಿದರು. ಇದಕ್ಕೆ ಕಾರಣ ಕಿತ್ತೂರು

ಸಂಪದ್ಭರಿತ ನಾಡಾಗಿತ್ತು ಎಂಬ ಕಾರಣಕ್ಕಾಗಿ. ದೇಸಾಯವರಿಂದ ರಾಣಿ ಚನ್ನಮ್ಮನಿಗೆ ಅಧಿಕಾರವು ಬಳುವಳಿಯಾಗಿ ಬಂದ ನಂತರ 23 ಅಕ್ಟೋಬರ್ 1824ರಲ್ಲಿ ಬ್ರಿಟಿಷ ಅಧಿಕಾರಿ ಥ್ಯಾಕರೆ ಕಿತ್ತೂರು ಕೋಟೆಗೆ ಮುತ್ತಿಗೆ ಹಾಕಿದ ಸಂದರ್ಭದಲ್ಲಿ ಚನ್ನಮ್ಮಾಜಿ ಯುದ್ಧ ಮಾಡುವ ಮೂಲಕ ಸಾಹಸದ ಘಟನೆಗಳು ಚನ್ನಮ್ಮನ ಧೈರ್ಯವನ್ನು ಈ ಕಥೆ ತಿಳಿಸುತ್ತದೆ. ಮಲ್ಲಪ್ಪ ಶೆಟ್ಟಿಯ ದೇಶದ್ರೋಹಿ ಕೆಲಸವು ಅವನತಿಯನ್ನು ವಿವರವಾಗಿ ಪರಿಚಯಿಸಿದ್ದಾರೆ. ಮೂರನೇ ಕಥೆಯೂ 'ಶನಿವಾರ ವಾಡೆ' ಒಂದನೇ ಬಾಜಿರಾಯನ ಮನೋಭಿಲಾಷೆ, ಒಮ್ಮೆಯಾದರೂ ದಿಲ್ಲಿಯನ್ನು ಜಯಸಬೇಕೆಂಬ ಹಠ. ದಿಲ್ಲಿ ಸಿಂಹಾಸನವು ಮರಾಠರ ವ್ಯಾಪ್ತಿಗೆ ಒಳಪಡಿಸಬೇಕೆಂಬ ಹಂಬಲ ಮತ್ತು ಶನಿವಾರ ವಾಡೆ ಹೆಸರು ಕೇಳಿದರೆ ದಿಲ್ಲಿಯ ಮೊಗಲರ ಸಿಂಹಾಸನವು ಕಂಪಣದ ಬಗ್ಗೆ ಬೆಳಕು ಚೆಲ್ಲುತ್ತದೆ.

'ಕಥೆ ಹೇಳುವೆ ಎನ್ನ' ಕಥಾ ಸಾಹಿತ್ಯದಲ್ಲಿ ಮಾಸ್ತಿಯಂಥವರ ಕಥೆಗಳು ಹಳೆಯ ಅಂಶಗಳನ್ನು ಒಳಗೊಂಡ ಕಲಾತ್ಮಕತೆಯನ್ನು ಹೊಂದಿ ಜೀವಂತವಾದವು ಸದಾಶಿವ, ರಾಘವರು ಹಿಂದೆಯೆ ಕಥೆಗಳನ್ನು ಬರೆದರು. ಅವರ ಕಥೆಗಳ ಜೀವಂತಿಕೆಯನ್ನು ಪಡೆದದ್ದು ನವ್ಯದ ಮಾರ್ಗದಿಂದ ಈ ಎರಡು ಮಾರ್ಗದಿಂದ ಭಿನ್ನವಾಗಿದೆ ಕಥೆ ಹೇಳುವೆ ಎನ್ನ ಕಥಾ ಸಂಕಲನವು ಕಥೆಗಳ ವಸ್ತು ಹಳೆಯದೆನಿಸಿದರೂ ಶೈಲಿ, ಮಧ್ಯ ಮಾರ್ಗದ್ದು, ವಿಚಾರವು ಪ್ರಗತಿಯು ನವ್ಯ ಕಾಲಘಟ್ಟಕ್ಕೆ ಸಮೀಪವಾಗಿದೆ. ಎಂಟು ಕಥೆಗಳು ಬೇರೆಯವರ ಕೈಯಲ್ಲಿ ಕಥೆಯಾಗಿ, ಕವಿತೆಯಾಗಿ, ಕಾದಂಬರಿಯಾಗಿ, ಲಾವಣಿಯಾಗಿ, ಚಾರಿತ್ರಿಕ ಗ್ರಂಥಗಳಾಗಿ ನಾನಾ ವಿಧದಲ್ಲಿ ಮೂಢಿ ಬಂದಿವೆ. ಆದರೆ ಇಲ್ಲಿ ಹೇಳುವ ಕಥೆಯ ರೀತಿ ಪದ ಪ್ರಯೋಗ, ಕಥೆ ಸಾಗಿಕೊಂಡು ಹೋಗುವ ಶೈಲಿ ಭಿನ್ನವಾಗಿದೆ. ಲೇಖಕರು ತಾವೂ ಪ್ರವಾಸಿ ಸ್ಥಳಕ್ಕೆ ಭೇಟಿ ನೀಡಿದಾಗ ಅಲ್ಲಿಯ ಅನುಭವಗಳನ್ನು ಹಾಗೂ ಕಥೆಯ ವಸ್ತುವನ್ನು ಇರಿಸಿಕೊಂಡು ಭಿನ್ನವಾಗಿ ಹೇಳುತ್ತಾರೆ. ಎಲ್ಲ ಕಥೆಗಳು ಲೇಖಕರು ಕೋಟೆ ನೋಡಲು ಹೋದಾಗ, ನಿರೂಪಕರು ಅಲ್ಲಿಗೆ ತಲುಪಿದಾಗ ಎಂಬ ನುಡಿಯೊಂದಿಗೆ ಕಥೆ ಆರಂಭವಾಗುವುದು. ಕೊನೆಗೆ ಕಥಾ ನಾಯಕ ಅಥವಾ ನಾಯಕಿ ಮರಣದೊಂದಿಗೆ ಕಥೆ ಕೊನೆಗೊಳುವುದು.

ಹೀಗೆ ಮನುಷ್ಯನ ಭಾವನೆಗಳನ್ನು ವ್ಯಕ್ತಪಡಿಸುವುದೆ ಭಾಷೆಯಾಗಿದೆ. ಸಿಂಧೂರರ ಕಥೆಗಳಲ್ಲಿ ಭಾಷೆಯ ಸ್ವರೂಪವನ್ನು ಅವಲೋಕಿಸಿದಾಗ ಸಿಂಧೂರರು ಜಮಖಂಡಿ ಹಾಗೂ ಅಥಣಿ ಪ್ರದೇಶದ ಭಾಷೆಯನ್ನು ಬಳಸಿಕೊಂಡಿದ್ದಾರೆ. ಓದುಗರಿಗೆ ತಿಳಿಯುವ ಹಾಗೆ ಆ ಪ್ರದೇಶ ಸರಳ ಭಾಷೆಯನ್ನು, ಭಾಷಿಕ ಸ್ವರೂಪವು ಕಂಡು ಬರುತ್ತದೆ. ಬಳಕೆಯಾದ ಭಾಷೆಯಲ್ಲಿ ರೂಪಕಗಳಿಂದ ಗ್ರಾಮ್ಯ ಹಾಗೂ ಮರಾಠಿ ಭಾಷೆಯನ್ನು ಹೆಚ್ಚಾಗಿ ಬಳಸಿರುವುದನ್ನು ಕಾಣಬಹುದು. ಹಾಗೆಯೇ ಭಾಷಿಕ ಅಂಶಗಳನ್ನು ಕಥೆಗಳ ಸಂದರ್ಭಕ್ಕೆ ಅನುಸಾರವಾಗಿ, ವಸ್ತುವಿಷಯಗಳಿಗೆ ಪೂರಕವಾಗಿ ಕಥೆಗಳಲ್ಲಿ ಬಳಸಿರುವುದನ್ನು ಕಾಣಬಹುದು

**ಕೊನೆಟಿಪ್ಪಣಿಗಳು**

1. ಲಕ್ಷ್ಮೀನಾರಾಯಣ ಭಟ್ಟ, ಎನ್.ಎಸ್. (2019). *ಕನ್ನಡ ಸಾಹಿತ್ಯ ಚರಿತ್ರೆ ಪ್ರಾಚೀನ–ಆಧುನಿಕ.* ಪುಟ. 313.
2. ಸಿಂಧೂರ, ಎಮ್.ಎಸ್. (2009). ಉರುಳುವ ಕಲ್ಲು, ಪುಟ. 9
3. ಅದೇ. ಪುಟ.9

**ಪರಾಮರ್ಶನ ಗ್ರಂಥಗಳು**


- ಅಮೂರ ಜಿ.ಎಸ್. (2001). *ಕನ್ನಡ ಕಥನ ಸಾಹಿತ್ಯ.* ಸಪ್ನ ಬುಕ್‌ಹೌಸ್.
- ಅಮೂರ ಜಿ.ಎಸ್. (2016). *ಕನ್ನಡ ಕಥನ ಸಾಹಿತ್ಯ: ಕಾಂದಬರಿ.* ಸಪ್ನ ಬುಕ್‌ಹೌಸ್.

- ಕೋದಂಡರಾಮ. ಎನ್.ಕೆ. (1996). *ಕನ್ನಡ ಕಥಾ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ.* ರೂಪ ಪ್ರಕಾಶನ.
- ಲಕ್ಷ್ಮೀನಾರಾಯಣ ಭಟ್ಟ ಎನ್.ಎಸ್. (2019). *ಕನ್ನಡ ಸಾಹಿತ್ಯ ಚರಿತ್ರೆ ಪ್ರಾಚೀನ – ಆಧುನಿಕ.* ಅಂಕಿತ ಪುಸ್ತುಕ.
- ಶೇಷಗಿರಿ ರಾವ್, ಎಲ್.ಎಸ್. (2015). *ಹೊಸಗನ್ನಡ ಸಾಹಿತ್ಯ ಚರಿತ್ರೆ.* ಅಂಕಿತ ಪುಸ್ತಕ.
- ಸಿಂಧೂರ ಎಮ್.ಎಸ್. (2009). *ಉರುಳುವ ಕಲ್ಲು.* ಸಿಂಧೂರ ಪ್ರಕಾಶನ.
- ಸಿಂಧೂರ ಎಮ್.ಎಸ್. (2017). *ಕಥೆ ಹೇಳುವೆ ಎನ್ನ.* ಸಿಂಧೂರ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 25-29
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಹೆಚ್. ನಾಗವೇಣಿಯವರ ಕಸಬರಿಕೆ ಕಥೆ : ವರ್ಗ ಸಂಘರ್ಷದ ಪ್ರತಿರೋಧದ ನೆಲೆಗಳು

**ಮಧು ಟಿ**
ಸಂಶೋಧನಾ ವಿದ್ಯಾರ್ಥಿ, ಕುವೆಂಪು ವಿಶ್ವವಿದ್ಯಾಲಯ, ಜ್ಞಾನ ಸಹ್ಯಾದ್ರಿ, ಶಂಕರಘಟ್ಟ, ಶಿವಮೊಗ್ಗ.

***Abstract:***
*ಕನ್ನಡ ಸಾಹಿತ್ಯದ ಸಮಕಾಲೀನ ಮಹಿಳಾ ಬರಹಗಾರ್ತಿಯರಲ್ಲಿ ವಿಭಿನ್ನವಾದ ಕಥಾ ವಸ್ತು ಮತ್ತು ತಮ್ಮದೇ ಆದ ವಿಶಿಷ್ಟವಾದ ನಿರೂಪಣೆಯ ಮೂಲಕ ಕನ್ನಡ ಸಾಹಿತ್ಯದಲ್ಲಿ ಗುರುತಿಸಿಕೊಂಡ ಲೇಖಕಿ ಹೆಚ್. ನಾಗವೇಣಿ. ಇವರ ಕಾದಂಬರಿ– ಕಥೆಗಳಲ್ಲಿ ಕರಾವಳಿ ತೀರದ ಜನರ ಬದುಕು ಬವಣೆ, ಪರಿಸರ, ಸಂಸ್ಕೃತಿ ಮತ್ತು ಅಲ್ಲಿನ ಸಮಾಜದಲ್ಲಿನ ತಾರತಮ್ಯಗಳನ್ನು ಹಾಗೂ ವರ್ಗ ಸಂಘರ್ಷಗಳನ್ನು ಕಣ್ಣಿಗೆ ಕಟ್ಟುವಂತೆ ವಾಸ್ತವದ ಎಚ್ಚರಿಕೆಯೊಂದಿಗೆ ತಳಸಮುದಾಯದ ಧ್ವನಿಯಾಗಿದ್ದಾರೆ.*

**Keywords:** *ಕಸಬರಿಕೆ, ಕರಾವಳಿ ಪ್ರದೇಶ, ವರ್ಗ ಸಂಘರ್ಷ, ಪ್ರತಿರೋಧದ ನೆಲೆಗಳು, ಗಾಂಧಿ ಬಂದ.*

## ಪೀಠಿಕೆ

ಊಳಿಗಮಾನ್ಯ ಪದ್ಧತಿಯನ್ನು ವಿರೋಧಿಸುದರ ಜೊತೆಗೆ ಕರಾವಳಿ ಮಹಿಳೆಯರ ಹೋರಾಟದ ಬದುಕು ಮತ್ತು ಅಸ್ತಿತ್ವವನ್ನು ಹೆಚ್. ನಾಗವೇಣಿ ಅವರ ಬರಹದಲ್ಲಿ ಕಾಣಬಹುದಾಗಿದೆ. ಇವರ 'ಗಾಂಧಿ ಬಂದ' ಕಾದಂಬರಿ ಸಾಹಿತ್ಯವಲಯದಲ್ಲಿ ಕರಾವಳಿ ತೀರದ ಸಂಸ್ಕೃತಿಯನ್ನು ಹಾಗೂ ಅನೇಕ ಸಮುದಾಯಗಳ ನಡುವಿನ ವರ್ಗಸಂಘರ್ಷದ ಜೊತೆಗೆ ಕರಾವಳಿ ತೀರದ ಕೋಮುಗಲಭೆ, ಸಂಪ್ರಾದಾಯಗಳನ್ನು ಮೀರಿ ಬದಕನ್ನು ಆಯ್ಕೆ ಮಾಡಿಕೊಂಡ ದ್ರೌಪದಿಯ ಬದುಕು ಮತ್ತೆ ಸಂಕಷ್ಟಕ್ಕೆ ಸಿಲುಕಿ ಬದುಕು ಘೋರವಾದ ಸಂದರ್ಭದಲ್ಲಿ ಸ್ವತಃ ತಂದೆಯೇ ಮಗಳ ದುರಂತಕ್ಕೆ ಮರುಗದೆ ಜಾತಿಧರ್ಮವೇ ಮುಖ್ಯವಾಗುವ ಮಾನವೀಯತೆಯನ್ನು ಮರೆತು ಬದುಕುವ ಮನಸ್ಥಿತಿಯನ್ನು, ವಿಧವಾ ಪುನರ್ ವಿವಾಹವನ್ನು ಪ್ರೋತ್ಸಾಹಿಸುವ, ಮತ್ತು ಮನುಷ್ಯ ಸಂಬಂಧಗಳ ಬಗ್ಗೆ ಮತ್ತು ಧರ್ಮ ಜಾತಿ ಸಂಪ್ರದಾಯಗಳನ್ನು ಮೀರಿ ಮಾನವೀಯತೆ ನೆಲೆಯಲ್ಲಿ ಬದುಕು ಮನುಷ್ಯ ಸಂಬಂಧವನ್ನು, ತಳಸಮುದಾಯ ಶೋಷಣೆಯನ್ನು ಕಾದಂಬರಿಯಲ್ಲಿ ಮುಖ್ಯವಾಗಿ ಗುರುತಿಸಬಹುದು. ಇವರ ಕಥೆಗಳಲ್ಲಿ ಮುಖ್ಯವಾಗಿ ಸಾಹಿತ್ಯ ವಲಯದಲ್ಲಿ ಚರ್ಚೆಗೆ ಒಳಗಾದದ್ದು ಧಣಿಗಳ ಬೆಳ್ಳಿ ಲೋಟ, ಈ ಕತೆಯಲ್ಲಿ ಮುಖ್ಯವಾಗಿ ಊಳಿಗಮಾನ್ಯ ವ್ಯವಸ್ಥೆಯಿಂದ ಮೇಲ್ವರ್ಗದವರು ತಳಸಮುದಾಯದಗಳನ್ನು ಶೋಷಿಸುವ ಅಂಶ ಮುಖ್ಯವಾಗಿದೆ. ಆದರೆ ಕತೆಯ ಕೊನೆಯಲ್ಲಿ ಧಣಿಗಳ ದೌರ್ಜನ್ಯಕ್ಕೆ ಚೆನ್ನಮ್ಮ ತೋರುವ ಪ್ರತಿರೋಧ ಮೇಲ್ವರ್ಗದವರಿಗೆ ಎಚ್ಚರಿಕೆ. ತಳಸಮುದಾಯಗಳು ತಮ್ಮ ಬದುಕಿ ಅನಿವಾರ್ಯತೆಗಾಗಿ ಶೋಷಣೆಗಳನ್ನು ಸಹಿಸಿಕೊಂಡರು.

ಒಂದು ಹಂತದವರೆಗೆ ಮಾತ್ರ ಅವರ ಸ್ವಾಭಿಮಾನಕ್ಕೆ ಬಿಟ್ಟು ಬಿದ್ದ ಸಂದರ್ಭದಲ್ಲಿ ಅವರು

***Please cite this article as:*** ಮಧು ಟಿ. (2024). ಹೆಚ್. ನಾಗವೇಣಿಯವರ ಕಸಬರಿಕೆ ಕಥೆ: ವರ್ಗ ಸಂಘರ್ಷದ ಪ್ರತಿರೋಧದ ನೆಲೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 25–29

ತೋರುವ ಪತ್ರಿರೋಧ ಬಹಳ ದೊಡ್ಡದಾದ ಪರಿಣಾಮ ಸಮಾಜದಲ್ಲಿ ಉಂಟಾಗುತ್ತದೆ. ತಳಸಮುದಾಯದ ಮೇಲಿನ ದೌರ್ಜನ್ಯ, ಶೋಷಣೆ ಶತಮಾನದಿಂದಲೂ ಸಾಹಿತ್ಯದಲ್ಲಿ ದಾಖಲಾಗಿದೆ. ಅದಕ್ಕೆ ಅಲ್ಲಲ್ಲಿ ಪ್ರತಿರೋಧದ ನೆಲೆಗಳು ತೋರಿರುವುದನ್ನು ನೋಡಬಹುದು. ಅದರ ತೀವ್ರತೆ ದಲಿತ ಬಂಡಾಯ ಸಾಹಿತ್ಯದ ಕಾಲದಲ್ಲಿ ಸಂಚನ ಮೂಡಿಸಿದ "ಇಕ್ರಲಾ ವದಿರ್ಲಾ ಈ ನನ್ನ ಮಕ್ಕಳ ಚರ್ಮ ಎಬ್ರಲಾ.. ಕವಿತೆಯನ್ನು ಹೆಚ್ಚು. ಸಿದ್ಧಲಿಂಗಯ್ಯನವರ 1976ರಲ್ಲಿ ಶಿವಮೊಗ್ಗದಲ್ಲಿ ನಡೆದ ಅಖಿಲ ಭಾರತ ಕನ್ನಡ ಸಾಹಿತ್ಯದ ಕವಿ ಸಮ್ಮೇಳನದಲ್ಲಿ ಓದಿದ ಕವಿತೆಯು ತಳಸಮುದಾಯವು ಅನುಭವಿಸಿದ ಶೋಷಣೆ ದೌರ್ಜನ್ಯಕ್ಕೆ ನೀಡಿರುವ ಬಹುದೊಡ್ಡ ಪತ್ರಿರೋಧವನ್ನು ನೋಡಬಹುದು. ಮುಂದಿನ ಸಾಹಿತ್ಯ ಬರಹಗಳಲ್ಲಿ ಅಂತಹ ಪ್ರತಿರೋಧವನ್ನು ತೋರಿರುವ ಕೆಲವು ಕಥೆಗಳು, ಕಾದಂಬರಿಗಳು ಸಿಗುತ್ತದೆ. ಅಂತಹ ಕಥೆಗಳಲ್ಲಿ ಒಂದು ಕುಂ.ವೀರಭದ್ರಪ್ಪನವರ ದೇವರ ಹೆಣ, ಅರವಿಂದ ಮಾಲಗತ್ತಿ, ಬಿ.ಟಿ.ಲಲಿತಾನಾಯ್ಕ, ದೇವನೂರ ಮಹಾದೇವ, ಜಂಬಣ್ಣ ಅಮರಚಿಂತ, ವೈದೇಹಿ, ದು.ಸರಸ್ವತಿ ಮುಂತಾದವರು ಊಳಿಗಮಾನ್ಯ ವ್ಯವಸ್ಥೆಯ ವಿರುದ್ಧ ಪ್ರತಿರೋಧವನ್ನು ದಲಿತ ಬಂಡಾಯ ಸಾಹಿತ್ಯದ ಕಾಲದಿಂದ ಇಲ್ಲಿಯವರಗೆ ನಡೆಯುತ್ತಲೇ ಬಂದಿದೆ. ಅಂತಹ ಬರಹಗಳಲ್ಲಿ ಹೆಚ್.ನಾಗವೇಣಿ ಅವರ 'ಗಾಂಧಿ ಬಂದ' ಕಾದಂಬರಿ, ಧಣಿಗಳ ಬೆಳ್ಳಿಲೋಟ ಕತೆಗಳು ಊಳಿಗಮಾನ್ಯ ವ್ಯವಸ್ಥೆಯ ವಿರುದ್ಧ ತೋರಿರುವ ಪ್ರತಿರೋಧ ಸೌಮ್ಯ ನೆಲೆಯಲ್ಲಿ ಕಂಡು ಬಂದರೆ ಕಸಬರಿಕೆ ಕಥೆಯಲ್ಲಿ ಎಲ್ಲೆಯನ್ನು ಮೀರಿ ಕೈ ಕೈಮಿಲಾಹಿಸುವ ಹಂತದವರೆಗೆ ತಲುಪಿರುವುದನ್ನು ಕಾಣಬಹುದು.

'ಕಸಬರಿಕೆ' ಕತೆಯಲ್ಲಿ ಪ್ರಾರಂಭದಿಂದಲ್ಲೆ ಚಂದು ಧೂಪದ ಮರದಡಿ ಕುಳಿತು ಆ ದಿನ ಅಮ್ಮಣ್ಣಿಯಮ್ಮನ ಮನೆಯ ಅಂಗಳದಲ್ಲಿ ನಡೆದ ಘಟನೆಯ ಬೇಸರ ಕಳೆಯಲು ಆಕಾಶದಲ್ಲಿನ ನಕ್ಷತ್ರ ನೋಡಾವ ಹೊತ್ತಿಗೆ, ಅಮ್ಮಣ್ಣಿಯಮ್ಮನ ಹಿರಿಯ ಸೊಸೆಯ ಸೀರೆಯ ಅಂಚಿನಲ್ಲಿದ್ದ ನಕ್ಷತ್ರದ ನೆನಪಿನಿಂದ ಅಮ್ಮಣ್ಣಿಯನ್ನು ಮಾತುಗಳು ನೆನಪಿಗೆ ಬಂದು ಅವಳ ಮಾನಸಿಕ ಹಿಂಸೆಗೆ ಕಾರಣವಾಗಿತ್ತು. ಅಮ್ಮಣ್ಣಿಯಮ್ಮ ನಿಂದನೆಯ ಮಾತುಗಳಿಂದ ಚಂದು ದಿನ ದಿನ ಗಟ್ಟಿಯಾಗುತ್ತಿದ್ದಳು. ಈ ಗಟ್ಟಿತನ ಅವತ್ತು ಅವಳು ಅಮ್ಮಣ್ಣಿಯಮ್ಮನ ದೌರ್ಜನ್ಯಕ್ಕೆ ಮನಸ್ಸಿನಲ್ಲಿಯೇ ಹುಟ್ಟು ಪ್ರತಿರೋಧದ ಮಾತುಗಳನ್ನು ಹೀಗಿದೆ "ಇವತ್ತೊಂದು ರಾತ್ರಿ ಕಳೀಲಿ; ನಾಳೆ ಬೆಳ್ಳಿಗೆ ಆ ಬ್ರಾಹ್ಮಣ್ತಿಗೇರಿರುವ ನಾಕಿಂಚು ದಪ್ಪದ ಚರ್ಬಿಯನ್ನು ಒಂದೇ ಪೆಟ್ಟಿಗೆ ಕೆಳಗಿಳಿಸದಿದ್ದರೆ ನಾನ್ಯಾಕೆ ಈ ಮೈಯ್ಯರ ಪಾಡಿಯಲ್ಲಿರಬೇಕು? ಅವ್ವು ಬೊಗಳಿದ್ದನ್ನೆಲ್ಲಾ ತಲೆಬಗ್ಗಿಸಿ, ನುಂಗೀ ನುಂಗೀ ನಂಗೆ ಮೂಗಲ್ಲಿ ಬರುವುದೊಂದೇ ಬಾಕಿ; ಹೆಚ್ಚು ಸಲಿಗೆ ಬಿಟ್ಟರೆ ತಲೆಯಲ್ಲಿ ಕೂತು ಬಾಯಿಗೆ ಹೇಸಿಗೆ ಮಾಡಲು ಹೇಸದ ಬ್ರಾಹ್ಮಣ್ತಿಯದು"[1] ಇಲ್ಲಿ ಕೇವಲ ಚಂದುವಿನ ಮೇಲಿನ ದೌರ್ಜನ್ಯವಲ್ಲ ಅದು ಅವರ ಸಮುದಾಯದ ಮೇಲಿನ ನಿರಂತರ ಶೋಷಣೆಯ ಮಾತುಗಳು, ಕತೆ ಪ್ರಾರಂಭದಿಂದ ಕೊನೆಯವರಗೂ ಚಂದುವನ್ನು ಹೀಯಾಳಿಸುವ ನಿಂದಿಸುವ ಮಾನಸಿಕವಾಗಿ ದೌರ್ಜನ್ಯವನ್ನು ಅಮ್ಮಣ್ಣಿಯಮ್ಮ ನೀಡುತ್ತಾಳೆ ಬರುತ್ತಾಳೆ. ಚಂದು ತನ್ನ ತಂದೆಯ ಬರುವಿಕೆಯನ್ನೆ ಕಾದು ಬಂದ ನಂತರ ಕಡಲ ತೀರಕ್ಕೆ ಹೋಗಿ ಬರುವ ಎಂದಾಗ ರುಕ್ಕಮುಲ್ಯ ಅಮ್ಮಣ್ಣಿಯಮ್ಮನವರ ಮನೆ ಕೆಲಸಕ್ಕೆ ಹೋಗಬೇಕು ಇಲ್ಲದಿದ್ದರೆ ಅವಳ ಬೈಗಳ ಹೆದರಿ ಮನೆಗೆ ಹೋಗಲು ತಿಳಿಸಿದ ಅದಕ್ಕೆ ಪ್ರತಿಯಾಗಿ ಚಂದು "ಅವ್ವು ಸತ್ಲು! ಅವಳ ಹೆಣಾ! ಅವಳ ಬೊಜ್ಜು! ಬಿಕನಾಸಿ ಬ್ರಾಹ್ಮಣ್ತಿ! ಅವಳಿಗೆ ಹೆದ್ರಿ ಹೆದ್ರೀ ನೀನೂ ಸಾಯಿ... ನಾನು ಸಾಯ್ತೀನಿ.." (ನಾಕನೇ ನೀರು, ಹೆಚ್. ನಾಗವೇಣಿ,

[1] ಹೆಚ್. ನಾಗವೇಣಿ. ನಾಕನೇ ನೀರು. ಪುಟ.50

ಪು.ಸಂ.54) ಎಂದು ತಂದೆಯ ಎದುರಲ್ಲಿ ಮನಸ್ಸಿನಲ್ಲಿನ ಅಕ್ರೋಶವನ್ನು ವ್ಯಕ್ತ ಪಡಿಸುತ್ತಾ ಮೇಲ್ವರ್ಗದವರ ದೌರ್ಜನ್ಯ ಶೋಷಣೆ ದಬ್ಬಾಳಿಕೆಯ ಭಯದಲ್ಲೆ ಬದುಕುವ ತಳಸಮುದಾಯ ಆತಂಕವನ್ನು ರುಕ್ಕಮೂಲ್ಯನ ಮನಸ್ಸಿನ ಮಾತುಗಳು ಚಂದುವಿನ ಆಕ್ರೋಶದಲ್ಲಿ ವ್ಯಕ್ತವಾಗಿದೆ. ಇಷ್ಟೇ ಅಲ್ಲದೆ ತಳಸಮುದಾಯವರ ಬದುಕು ಕೂಡ ಮೇಲ್ವರ್ಗದರಿಂದ ನಿರ್ಧರಿತ ಅವರಿಗೆಅವರದೇ ಆದ ಸ್ವತಂತ್ರದ ಬದುಕು ಕೂಡ ಇಲ್ಲ ಎಂಬುದು ಈ ಮಾತಿನಲ್ಲಿ ವ್ಯಕ್ತವಾಗಿದೆ. ಆದರೆ ಮೇಲ್ವರ್ಗದವರನ್ನು ಬೈಯುವಂತೆಯು ಇಲ್ಲ ಅದು ಕೂಡ ಪಾಪದ ಕೆಲಸ ಅದರಿಂದ ಮುಂದಿನ ಜನ್ಮದಲ್ಲಿ ನಾಯಿಯಾಗಿ ಹುಟ್ಟುತ್ತೇವೆ ಎಂಬ ಮೂಢನಂಬಿಕೆಯನ್ನು ತಳಸಮುದಾಯವರಲ್ಲಿ ಭಿತ್ತಿರುವುದನ್ನು ರುಕ್ಕ ಮೂಲ್ಯ ತನ್ನ ಮಗಳಿಗೆ ಹೇಳುವ ಬುದ್ದಿ ಮಾತುಗಳನ್ನು ನೋಡಿದ್ದಾರೆ ಮೇಲ್ವರ್ಗದವರು ಭೌದ್ಧಿಕವಾಗಿ ತಳಸಮುದಾಯವನ್ನು ಎಷ್ಟರಮಟ್ಟಿಗೆ ತಮ್ಮ ಅಧಿನತೆಯಲ್ಲಿ ಇರಿಸಿರುವ ಹುನ್ನಾರವನ್ನು ಇಲ್ಲಿ ಲೇಖಕಿ ಸೂಕ್ಷ್ಮವಾಗಿ ತಿಳಿಸಿದ್ದಾರೆ. ಅದಕ್ಕೆ ಪ್ರತಿಕಿಯೆಯಾಗಿ ಚಂದು "ನಾನು ನಾಯಾಗೇ ಹುಟ್ಟೇನೆ, ಬೇಕಿದ್ರೆ ಹುಳವಾಗಿ ಹುಟ್ಟೇನೆ. ಆದ್ರೆ ಆ ಬೋಸುಡಿ ಹಡಬೆ ಅಮ್ಮಣ್ಣಿಯಮ್ಮನಾಗಿ ಮಾತ್ರ ಹುಟ್ಟಲ್ಲ"[2] ಎಂದುತನ್ನ ಪ್ರತಿರೋಧವನ್ನು ವ್ಯಕ್ತ ಪಡಿಸುವುದರ ಹಿಂದೆಮೇಲ್ವರ್ಗದವರ ಬದುಕಿಗಿಂತ ಮೇಗಿಲಾದ ಬದುಕು ಪ್ರಾಣಿಗಳಾಗಿ ಹುಟ್ಟಿದ್ರೆ ಯಾವುದೇ ರೀತಿಯ ಶೋಷಣೆ ದೌರ್ಜನ್ಯಕ್ಕೆ ಒಳಗಾಗದೆ ಒಂದಿಷ್ಟು ಸ್ವತಂತ್ರದ ಬದುಕನ್ನಾದರೂ ಬದುಕಬಹುದು. ಪ್ರಾಣಿಗಳಿಗಿರುವ ಸ್ವತಂತ್ರವೂ ತಳಸಮುದಾಯದ ಜನರಿಗೆ ಸಾಧ್ಯವಾಗದ ಸಮಾಜದಲ್ಲಿ ಬದುಕುತ್ತಿರುವ ಚಿತ್ರಣವನ್ನು ಹಾಗೂ ಶೋಷಣೆಯಿಂದ ಆಗದರೂ ಮುಕ್ತಿ ಪಡಿಯಬುದು ಎಂಬ ಆಶಯವುಚಂದುವಿನ ಈ ಮಾತಿನ ಆಕ್ರೋಶದ ಆಳದಲ್ಲಿ ನೋವು ವ್ಯಕ್ತವಾಗಿದೆ.

[2] ಅದೇ. ಪುಟ.55

ಚಂದು ಮಾರನೇ ದಿನ ಎಲ್ಲಾ ಮರೆತು ಎಂದಿನಂತೆ ಅಮ್ಮಣ್ಣಿಯಮ್ಮನ ಅಂಗಳ ಗೂಡಿಸಲು ಬರುವಾಗ ತನ್ನ ಪ್ರೀಯಕರ ಮಂಜಪ್ಪ ಶೆಟ್ರು ಎಂದೂ ಸಿಗದ ಮಂಜಪ್ಪ ಸಿಕ್ಕ ಓಡನೆಯೇ ಅಮ್ಮಣ್ಣಿಯಮ್ಮನ ಅಂಗಳ ಮರೆತು ಹೋಗಿ ಮಂಜಪ್ಪನೊಂದಿಗೆ ಮಾತಿಗಿಳಿದಳು ಅದು ಸಾಮಾನ್ಯ ಮಾತಲ್ಲ ಅದು ಅರಳು ಹುರಿದಂತೆ ಮಾತನಾಡುತ್ತಿದ್ದಳು. ಇವಳ ಈ ಮಾತಿನ ರಾಗಕ್ಕೆ ಕೋಗಿಲೆಯೂ ತನ್ನ ರಾಗ ಎಂಥದ್ದೂ ಅಲ್ಲ ಎಂದು ಹಾರಿಹೋಗಿತು. ಪ್ರೀತಿಯಲ್ಲಿ ಇದ್ದವರಿಗೆ ಸಮಯದ ಪರಿವೆ ಇಲ್ಲದಂತೆ ಹೊತ್ತು ಮೂಡಿ ಬಹಳ ಸಮಯವಾಗಿದ್ದು ನೆನಪಿಗೆ ಬಂದುಕ ಸಬರಿಕೆಯನ್ನು ಹಿಡಿಯನ್ನು ಅಮ್ಮಣ್ಣಿಯಮ್ಮನ ಅಂಗಳಕ್ಕೆ ಬರುವ ಹೊತ್ತಿಗೆ ಅಮ್ಮಣ್ಣಿಯಮ್ಮ ಅಂಗಳ ಗೂಡಿಸುವ ಕೆಲಸಕ್ಕೆ ಕೈಯಾಕಿದರು. ಅಷ್ಟರಲ್ಲಿ ಬಂದಚಂದುವನ್ನು ಗಮನಿಸಿ ದೂರುಗುಟ್ಟಿ ನೋಡಿ ಅವಳ ಕಡೆಗೆ ಕ್ಯಾಕರಿಸಿ ಉಗಿದು "ಏನೇ ತೋಕೂರುಗುತ್ತಿನ ಶೆಟ್ಟಿ ನನ್ನನೇ ನೋಡುತ್ತಿದ್ದಿ? ಏನು ನನ್ನನ್ನಕೆಲ್ಸ ಮಾಡಿಸ್ತಿದ್ದೀಯಾ ಹೇಗೆ..ಎಂದು"[3] ಅಮ್ಮಣ್ಣಿಯಮ್ಮನ ಮಾತಿನ ಬೈಗಳವನ್ನು ಗಮನಿಸಿದರೆ ಮೇಲ್ವರ್ಗದವರು ದೈಹಿಕ ಶ್ರಮದಾನ ಮಾಡುವಂತಿಲ್ಲ ಅದು ಎನಿದ್ದರೂ ತಳಸಮುದಾಯವರ ಕೆಲಸ ಎಂಬ ಮನೋಭಾವ ಅಮ್ಮಣ್ಣಿಯನ ಮಾತಿನಲ್ಲಿ ಸೂಕ್ಷ್ಮವಾಗಿ ವ್ಯಕ್ತವಾಗಿದೆ. ಅಷ್ಟೇ ಅಲ್ಲದೆ ಅಮ್ಮಣ್ಣಿಯಮ್ಮ ಚಂದುವಿನ ಖಾಸಗಿ ವಿಷಯವನ್ನು ಯಾವುದೇ ನಾಚಿಕೆದಯೆ ಮುಲಾಜಿಲ್ಲದೆ ಎಲ್ಲರ ಎದುರು ನಿರ್ದಾಕ್ಷಿಣ್ಯವಾಗಿ ಮಾತನಾಡಲು ಶುರು ಮಾಡಿದಳು ಅದೆಲ್ಲವನ್ನು ಸಹಿಸಿಕೊಂಡು ಚಂದು ಮೌನವಾಗಿಯೇ ಅವರ ಎಲ್ಲಾ ಮಾತುಗಳನ್ನು ಅವರನ್ನೇ ನುಂಗುವಂತೆ ದಿಟ್ಟಿಸ ತೊಡಗಿದ್ದಳು. ಅಲ್ಲಿಯವರೆಗೆ ಅಮ್ಮಣ್ಣಿಯಮ್ಮನ ಮೇಲಿದ್ದ ಗೌರವಎಲ್ಲಾ ಕಳೆದು ಹೋಯಿತು ಚಂದುವಿಗೆ ಅದಕ್ಕೆ ಪ್ರತಿಯಾಗಿತಿರಸ್ಕಾರ. ಅಸಹನೆ. ಸಿಡುಕಿನಿಂದ ಅಲ್ಲಿ

[3] ಅದೇ. ಪುಟ.57.

ಒಂದುಕ್ಷಣವೂ ಇರದೆ ಅಂಗಳದಿಂದ ನೇರವಾಗಿ ಓಣಿಗಿಳಿದಿದ್ದಳೂ. ಇಂತಹ ಪ್ರತಿರೋಧವನ್ನು ನಿರೀಕ್ಷಿಸದ ಅಮ್ಮಣ್ಣಿಯಮ್ಮ ಚಂದುವನ್ನೇ ಅವಳ ತಂದೆಯನ್ನು ಬೈಯ ತೊಡಗಿದಳು. ಇದೆಲ್ಲ ಹಗರಣವೂ ಮಂಜಪ್ಪನಿಗೂ ತಲುಪಿ ಆಕೆಯನ್ನು ಸಮಾಧಾನ ಪಡಿಸಲು ಅಮ್ಮಣ್ಣಿಯಮ್ಮ ನಿನಗೆ ಯಾವ ವಿವಿಧದಲ್ಲೂ ಸರಿಹೊಂದಲ್ಲ ಅವಳು ನಿನ್ನ ಕಾಲಿನ ಧೂಳಿಗೆ ಸಮಾನ ಎಂದು ಪ್ರೀತಿಯಿಂದ ಚಂದುವನ್ನು ಸಮಾಧಾನ ಪಡಿಸಿದ್ದ ಇದು ಅವಳಲ್ಲಿ ಆತ್ಮಸ್ಥೈರ್ಯವನ್ನು ತುಂಬುವಲ್ಲಿ ಯಶಸ್ವಿಯಾಗಿದ. ಅಷ್ಟೆ ಅಲ್ಲದೆ ಮಂಜಪ್ಪನೂ ಅಮ್ಮಣ್ಣಿಯನ್ನ ಮಾತುಗಳಿಂದ ಚಂದುವಿಗೆ ಆದ ನೋವಿಗೆ ತಾನು ಕೂಡ ಅವರ ಗದ್ದೆಗೆ ಕೋಣ ಉಳುಮೆ ಮಾಡಲು ಬಾಡಿಗೆ ಹೊಡಿಯಲ್ಲ ಎಂದು ಚಂದುವಿನ ಪರ ನಿಂತುತನ್ನ ಪ್ರತಿರೋಧವನ್ನು ತೋರುವುದರ ಜೊತೆಗೆ ಚಂದುವಿಗೆ ಬೆಂಬಲವಾಗಿ ಅಮ್ಮಣ್ಣಿಯಮ್ಮ ವಿರುದ್ಧ ಧೈರ್ಯವಾಗಿ ಹೋರಾಡಲು ಎನ್ನುವುದಕ್ಕಿಂತ ಮೇಲ್ವರ್ಗದವರ ವಿರುದ್ಧತೋರಿದ ಪ್ರತಿರೋದ ಎನ್ನಬಹುದು. ಇಷ್ಟಲ್ಲ ಘಟನೆ ನಡೆದ ಮಾರನೇ ದಿನ ಎಂದಿನಂತೆ ಚಂದು ಅಂಗಳ ಗೂಡಿಸುವ ಕಾರ್ಯಕ್ಕೆ ಮುಂದಾದ ಚಂದುವಿಗೆ ಅಮ್ಮಣ್ಣಿಯಮ್ಮ ತುಳಿಸಿ ಕಟ್ಟೆಯ ಬಳಿ ಬಿಡಿಸಿ ವಿಶೇಷವಾದ ರಂಗೋಲಿ ಚಂದುವನ್ನು ಸೆಳೆಯಿತು.ಆ ರಂಗೋಲಿಯಲ್ಲಿ ಇದ್ದ ಚಿತ್ರ ಸುತ್ತಲು ಹಾವು ಮಧ್ಯ ಹೂವಿನ ಚಿತ್ರದ ರಂಗೋಲಿ.ಈ ರಂಗೋಲಿಯಲ್ಲಿ ಚಿತ್ರದ ಪ್ರತಿಮೆಗಳನ್ನು ಗಮನಿಸಿದರೆ ಅಮ್ಮ ಣ್ಣಿಯಮ್ಮ ಹಾವು ಚಂದು ಹೂವು. ಹಾವಿನ ನೆರಳಿನಲ್ಲಿ ಹೂವು ಅರಳುವಂತೆ ಅಂದರೆ ಭಯದ ವಾತಾವರಣದಲ್ಲಿ ತಳಸಮುದಾಯ ಜನರ ಬದುಕುಯಾವಾಗ ಬೇಕಾದರು ಹಾವಿನ ದೋಷಕ್ಕೆ ಬಲಿಯಾಗು ಭಯದಲ್ಲೇ ಇಡಿ ಬದಕನ್ನು ಕಳೆಯುವಂತೆ ಎಂಬುದು ಅರ್ಥದಲ್ಲಿ ನಿರೂಪಿತವಾಗಿದೆ.

ನಿನ್ನೆ ನಡೆದ ಘಟನೆಯಲ್ಲಿ ಚಂದುವನ್ನು ಮನಬಂದಂತೆ ಬೈದಿದ ಅಮ್ಮಣ್ಣಿಯಮ್ಮನ ಯಾವ ಮಾತುಗಳಿಗೂ ಪ್ರತಿಕ್ರಿಯೆ ನೀಡದೆ ನಿರ್ಲಕ್ಷಿಸಿ ಹೋದ ಚಂದುವಿನ ಪ್ರತಿರೋಧಕ್ಕೆ ಅಮ್ಮಣ್ಣಿಯಮ್ಮ ಕೆಂಡಮಂಡಲವಾಗಿ ಹೋಗಿದಳು. ಆದರೆ ರಂಗೋಲಿಯನ್ನೆ ದಿಟ್ಟಿಸಿ ನೋಡುತ್ತಿದ ಚಂದುವಿಗೆ ಅಮ್ಮ ಣ್ಣಿಯಮ್ಮನ ಮೇಲಿನ ಕೋಪ ಭಯಎಲ್ಲಾ ಮಾಯವಾಗಿತ್ತು. ಎಲ್ಲಿ ಈ ರುಕ್ಕನ ಮಗಳು ಮುಂದೊಂದು ದಿನ ನನ್ನ ಮನೆಯ ತುಳಸಿಕಟ್ಟೆಯ ಬಳಿ ರಂಗೋಲಿ ಬಿಡಿಸಿಬಿಟ್ಟಾಳು ಎಂಬ ಆಂತಕದಿಂದ ಜಗಲಿಯಿಂದ ಇಳಿದು ಬಂದುತನ್ನ ಬಲಗಾಲಿನಿಂದ ಒಂದೇ ಉಸಿರಿಗೆ ಅಳಿಸಿ "ಎನೇ ಬೋಳಿಮುಂಡೆ, ನಿನ್ನ ಮಿಂಡ ಕಾಲನ್ನ ಬಗ್ಗಿ ಬಗ್ಗಿ ನೋಡುತ್ತಿದ್ದೀಯಾ"[4] ಎಂದಿದ ಮಾತುಗಳಿಂದ ಚಂದುವಿನಲ್ಲಿದ ಆಕ್ರೋಶಯವೆಲ್ಲಾ ಒಂದೇ ಸಮನೆ ಮೈ ಮೇಲೆ ಬಂದು ಇಷ್ಟು ದಿನದ ಶೋಷಣೆಗೆ ದೌರ್ಜನಕ್ಕೆ ಉತ್ತರ ಎಂತೆ ಚಂದು "ಏನೇ ಬ್ರಾಹ್ಮಣ್ತಿ? ನನ್ನ ಮಿಂಡಕಾಲು ಅನ್ತೀಯಾ ದರ್ವೇಸಿ ಮುಂಡೆ" (ನಾಕನೇ ನೀರು, ಹೆಚ್.ನಾಗವೇಣಿ, ಪು.ಸಂ.67) ಎಂದು ಅಮ್ಮಣ್ಣಿಯಮ್ಮನಿಗೆ ತನ್ನದೇ ಭಾಷೆಯ ಭೈಗುಳದ ಮುಖಾಂತರ ಪ್ರತಿರೋಧವನ್ನು ತೋರಿಸಿದಳು. ಅಷ್ಟಕ್ಕೆ ನಿಲ್ಲದ ಚಂದುವಿನ ಪ್ರತಿರೋಧ ತನ್ನ ಕೈಯಲ್ಲಿದ ಕಸಬರಿಕೆ ಇಂದ ಅಮ್ಮಣ್ಣಿಯಮ್ಮ ಜುಟ್ಟು ಬಗ್ಗಿಸಿ ತಿರುಗಿಸಿ ತಿರುಗಿಸಿ ಬಾರಿಸಿದ್ದಳು. ಇದು ಚಂದು ತನ್ನಲ್ಲೆ ಬದುಕಿನಲ್ಲಿ ಅನುಭವಿಸಿದ ಶೋಷಣೆ ದೌರ್ಜನ್ಯಕ್ಕೆ ತೋರಿದ ಬಹುದೊಡ್ಡ ಪ್ರತಿರೋಧವಾಗಿದೆ. ಅಲ್ಲದೆ ತಳಸಮುದಾಯದವರು ಮೇಲ್ವರ್ಗದವರಿಗೆ ಯಾರು ತೋರದ ಪ್ರತಿರೋಧವು ಹೌದು. ಆದರೆ ಇದು ವಾಸ್ತವದಲ್ಲಿ ಸಾಧ್ಯವೇ? ಎಂಬ ಪ್ರಶ್ನೆಯು ಹುಟ್ಟುತ್ತಾ. ಅದಕ್ಕೆ ಕಾರಣ ಇಲ್ಲಿವರೆಗೂ ಮೇಲ್ವರ್ಗದವರು ತಳಸಮುದಾಯವರನ್ನು ದೈಹಿಕವಾಗಿ ಹಲ್ಲೆ ನಡೆಸಿದರು ಸಾಯಿಸಿದರು ಅದು ಈ ಸಮಾಜದಲ್ಲಿ ದೊಡ್ಡ ಪ್ರಶ್ನೆಯಾಗಲಾರದು. ಆದರೆ ಅದೆ ತಳಸಮುದಾಯದವರು ಮೇಲ್ವರ್ಗದವರನ್ನು

[4] ಅದೇ. ಪುಟ.67.

ಏಕವಚನದಲ್ಲಿ ಸಂಭೋಧಿಸುವ ಹಕ್ಕು ಇಲ್ಲ ಅಂತಹ ಸಂದರ್ಭದಲ್ಲಿ ಲೇಖಕಿಯು ಬದಲಾಗುವ ಸಮಾಜದ ಆಶಯದೊಂದಿಗೆ ಮೇಲ್ವರ್ಗದವರಿಗೆ ಸಾಧ್ಯವಾಗುವ ಎಲ್ಲಾ ವಿಷಯಗಳು ತಳಸಮುದಾಯಗಳಿಗೆ ಏಕೆ ಸಾಧ್ಯವಿಲ್ಲ? ಪ್ರಶ್ನೆಯನ್ನು ನಮ್ಮ ಮುಂದೆ ಇಡುವ ಪ್ರಯತ್ನದ ಜೊತೆಗೆ ಸಂವಿಧಾನದ ಅಡಿಯಲ್ಲಿ ನಾವೆಲ್ಲರೂ ಸಮಾನರು ಎಂದು ಘೋಷವಾಕ್ಯವನ್ನು ಹೇಳುವ ನಾವು ಇನ್ನೂ ಎಂತಹ ಸಮಾಜದಲ್ಲಿ ಬದುಕುತ್ತಿದ್ದೇವೆ ಎಂಬ ಪ್ರಶ್ನೆಯನ್ನು ನಾವು ಕೇಳಿಕೊಳ್ಳುವಂತೆ ಮಾಡಿದರೆ.

ಇದಕ್ಕೆ ಪ್ರತಿಯಾಗಿ ಅಮ್ಮಣ್ಣಿಯಮ್ಮ "ನಂಗೆ ಬ್ರಾಹ್ಮಣ್ತಿಗೆ ಹಿಡಿಸೂಡಿಯಲ್ಲಿ ಹೊಡೆದ್ಯಲ್ಲಾ ನಿನ್ನತಲೆಕೂದಲು ಹಿಡಿಕಡ್ಡಿಯಾಗುತ್ತೆ ನೋಡ್ತಿರು"[5] ಎಂದು ಶಾಪವನ್ನು ಚಂದುವಿಗೆ ಅಮ್ಮಣ್ಣಿಯಮ್ಮ ಅಸಹಾಯಕ ಸ್ಥಿತಿಯಲ್ಲೂ ಅಳುಕಿನಿಂದ ಹೇಳಿದಳು ಇದಕ್ಕೆ ಉತ್ತರ ಎಂಬಂತೆ ಚಂದುವಿನ ಪ್ರತಿರೋಧದ ತೀವ್ರತೆ ಎಷ್ಟೆಂದರೆ "ಬಾಯ್ಮುಚ್ಚು ಬಿಕನಾಸಿ ಬ್ರಾಹ್ಮಣ್ತಿ: ಬಾಯೆತ್ತಿದ್ರೆ ಮತ್ತೆ ಕಾಲಮೆಟ್ಟಲ್ಲಿ ಹೊಡೆದು ಬಿಟ್ಟೇನು"[6] ಎಂದು ಬೈದು ತನ್ನ ಆಕ್ರೋಶವನ್ನು ವ್ಯಕ್ತಪಡಿಸಿದಳು. ಈ ಕತೆಯಲ್ಲಿ ಮುಖ್ಯವಾಗಿ ಸ್ತ್ರೀಯರನ್ನೇ ಏಕೆ? ಮುಖ್ಯ ಪಾತ್ರವಾಗಿಸಿಕೊಂಡು ಲೇಖಕಿ ಎರಡು ಸಮುದಾಯದ ನಡುವಿನ ಸಂಘರ್ಷವನ್ನು ನಿರೂಪಿಸಿರುವುದಾರೆ ಎಂದು ಪ್ರಶ್ನೆ ಹಾಕಿಕೊಂಡರೆ ಇಲ್ಲಿ ಮುಖ್ಯವಾದ ಅಂಶವೆನೆಂದರೆ ಪುರುಷ ಪ್ರಧಾನ ಸಮಾಜದಲ್ಲಿ ಸಂಸ್ಕೃತಿಯನ್ನು ಹುಟ್ಟು ಹಾಕಿ ಅದರ ಹಿನ್ನೆಲೆಯಲ್ಲಿ ಅನೇಕ ಆಚಾರಣೆ ಸಂಪ್ರದಾಯ, ಮೂಢನಂಬಿಕೆಗಳ ಹಿಂದಿನ ಹುನ್ನಾರ ಸ್ತ್ರೀಯರನ್ನು ಮತ್ತು ತಳಸಮುದಾಯಗಳನ್ನು ತನ್ನ ಅಧಿಪತ್ಯದಲ್ಲಿ ಉಳಿಸಿಕೊಂಡು ಅಧಿಕಾರ ಚಲಾಯಿಸುವುದು ಒಂದು ಅಂಶವಾದರೆ, ತಳಸಮುದಾಯದವರನ್ನು ತಮ್ಮ ಭಯದಲ್ಲೆ ಬದುಕುವಂತೆ ಅವರ ಅಭಿವೃದ್ಧಿಗಾಗಿ ಸದಾ ಶ್ರಮಿಸುವಂತೆ ಮಾಡುವುದು ಮತ್ತೊಂದು ಅಂಶ. ಅವರ ಮುಖಾಂತರವೆ ತಮ್ಮ ಅಧಿಕಾರವನ್ನು ಪರೋಕ್ಷವಾಗಿ ಮುಂದುವರಿಸುವ ನಿಟ್ಟಿನಲ್ಲಿಯೇ ಹೆಣ್ಣಿಗೆ ಹೆಣ್ಣೇ ಶತ್ರು ಎಂಬ ನಾಣ್ಣುಡಿಯು ಹುಟ್ಟಿಕೊಂಡಿದು. ಅದಕ್ಕೆ ಇಲ್ಲಿ ಲೇಖಕಿ ಸ್ತ್ರೀ ಪಾತ್ರಗಳನ್ನೆ ಮುಖ್ಯವಾಗಿಸಿ ಇಡಿ ಕಥೆಯಲ್ಲಿ ಎರಡು ಸಮುದಾಯಗಳ ನಡುವಿನ ಸಂಘರ್ಷದ ನೆಲೆಗಳನ್ನು ಮತ್ತು ಅದಕ್ಕೆ ಪತ್ರಿಯಾಗಿ ತಳಸಮುದಾಯದ ಪ್ರತಿರೋಧದ ನೆಲೆಗಳನ್ನು ಚಂದುವಿನ ಮೂಲಕ ನೀಡುವುದರ ಜೊತೆಗೆ ಸಮಾಜದಲ್ಲಿ ಬದಲಾಗಬೇಕಿರುವ ತಳಸಮುದಾಯಗಳ ಪರಿಸ್ಥಿತಿಯನ್ನ ಎಳೆ ಎಳೆಯಾಗಿ ಚಂದುವಿನ ಪಾತ್ರದ ಮೂಲಕ ನಿರೂಪಿಸಿರುವುದು ಗಮರ್ನಹ ವಿಷಯವಾಗಿದೆ.

**ಆಕರ ಗ್ರಂಥ**


- ನಾಗವೇಣಿ. ಎಚ್. (2019). *ನಾಕನೇ ನೀರು.* ಪಲ್ಲವ ಪ್ರಕಾಶನ.


**ಪರಾಮರ್ಶನ ಗ್ರಂಥಗಳು**


- ಚಂದ್ರಶೇಖರ ಪಾಟೀಲ. (2017). *ಕೃತಿಕೇಂದ್ರಿತ ವಿಮರ್ಶಾ ಬರಹಗಳ ಸಂಕಲನ.* ಸಪ್ನ ಬುಕ್‌ಹೌಸ್.
- ಚಂದ್ರಶೇಖರ್, ಟಿ.ಆರ್. (2016). *ಮಹಿಳಾ ಅಧ್ಯಯನ ಪರಿಭಾಷೆ.* ಕುವೆಂಪು ಭಾಷಾ ಭಾರತೀಯ ಪ್ರಾಧಿಕಾರಿ.
- ರಾಮಚಂದ್ರ ಶರ್ಮ. (ಸಂ.). (1999). *ಸಮಕಾಲೀನ ಕನ್ನಡ ಸಣ್ಣಕತೆಗಳು.* ನ್ಯಾಷನಲ್ ಬುಕ್‌ಟ್ರಸ್ಟ್.
- ಸುಮಿತ್ರಾ ಬಾಯಿ, ಬಿ.ಎನ್. (2010). *ಪಶ್ಚಿಮದ ಸ್ತ್ರೀವಾದಿ ವಿಮರ್ಶಾ ಪಂಥಗಳು.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.


[5] ಅದೇ. ಪುಟ.67.
[6] ಅದೇ. ಪುಟ.67.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 30-35
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ದಲಿತ–ಬಂಡಾಯ ಕಾದಂಬರಿಗಳು : ಪ್ರತಿಭಟನೆ ಮತ್ತು ಪ್ರತಿರೋಧದ ಭಾಷೆ

**ವೆಂಕೋಬ ತಳವಾರ**[1] **ಮತ್ತು ಪ್ರೊ. ಜೋಗಿನಕಟ್ಟೆ ಮಂಜುನಾಥ**[2]
ಸಂಶೋಧನಾ ವಿದ್ಯಾರ್ಥಿ[1], ಪ್ರಾಧ್ಯಾಪಕರು[2]
ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ.

**Abstract:**

*ಭಾಷೆ ಮಾನವನ ಭಾವನೆ, ಚಿಂತನೆ, ಆಸೆ ಆಕಾಂಕ್ಷೆಗಳನ್ನು ಅಭಿವ್ಯಕ್ತಗೊಳಿಸಲು ಬಳಸುವ ಒಂದು ಮಹತ್ ಸಾಧನವೆಂದು ಹೇಳಬಹುದು. ಭಾಷೆ ಸಮಾಜದಲ್ಲಿಯೇ ಹುಟ್ಟಿ ಸಮಾಜದಲ್ಲಿಯೇ ಬೆಳೆದು ಸಮಾಜದಲ್ಲಿ ಅಳಿದು ಹೋಗುವಂತಹದ್ದು. ಭಾಷೆಯೆಂಬುದು ನಾವು ತಿಳಿದುಕೊಂಡಷ್ಟು ಸರಳವಾದ, ತಟಸ್ಥವಾದ ಸಂರಚನೆಯಲ್ಲ. ಅದು ಆಳದಲ್ಲಿ ವರ್ಗ, ಲಿಂಗ, ಜಾತಿ, ಸಾಮಾಜಿಕ, ಆರ್ಥಿಕ, ರಾಜಕೀಯ ಹಲವಾರು ಸಿದ್ಧಾಂತಗಳಿಗೆ ಬದ್ಧವಾದ ಒಂದು ವ್ಯವಸ್ಥೆಯಿಂದ ರೂಪಿತವಾದ ರಚನೆಯಾಗಿದೆ. ಅಂದರೆ ಭಾಷೆ ಕೇವಲ ಒಂದು ಸಂವಹನದ ಮಾಧ್ಯಮವಲ್ಲ, ಇದನ್ನು ಮೀರಿದ ಸಾಮಾಜಿಕ ಸಹಸಂಬಂಧಗಳನ್ನು ರೂಪಿಸುವ, ನಿಯಂತ್ರಿಸುವ ಅಧಿಕಾರ ಶಕ್ತಿ ಅದರದ್ದಾಗಿರುತ್ತದೆ. ಸಮಾಜದ ಪ್ರಬಲ ಸಮುದಾಯಗಳು ಅಪ್ರಬಲ ಸಮುದಾಯಗಳ ಮೇಲೆ ನಿಯಂತ್ರಣ ಸಾಧಿಸುವ ಮತ್ತು ತಮ್ಮ ಅಧಿಕಾರವನ್ನು ಸ್ಥಾಪಿಸಲು ಬಳಸುವ ಒಂದು ಆಯುಧವಾಗಿ ಕೆಲಸ ಮಾಡುತ್ತದೆ. ಇದರ ಮೂಲಕ ಶೋಷಕ, ಶೋಷಿತ ಎಂಬ ಎರಡು ಧ್ರುವಗಳಲ್ಲಿ ವಿಭಜನೆಹೊಂದಿ ಭಿನ್ನ ವಿಚಾರ ಪ್ರಣಾಳಿಕೆಗಳ ಜಗತ್ತನ್ನು ರೂಪಿಸುತ್ತವೆ. ಪ್ರಸ್ತುತ ಲೇಖನದಲ್ಲಿ ದಲಿತ ಬಂಡಾಯದ ಕಾದಂಬರಿಗಳಲ್ಲಿ ಬಳಸಿರುವ ಪ್ರತಿಭಟನೆ ಮತ್ತು ಪ್ರತಿರೋಧದ ಭಾಷೆಯನ್ನು ವಿಶ್ಲೇಷಣೆ ಮಾಡಲಾಗಿದೆ. ದಲಿತ ಬಂಡಾಯದ ಅನೇಕ ಕಾದಂಬರಿಗಳಲ್ಲಿ ಹಿಂದುಳಿದ ವರ್ಗದ ಪಾತ್ರಗಳು ಶೋಷಿತ ಸಮಾಜದ ವಿರುದ್ಧ ಪ್ರತಿಭಟಿಸಿ ತಮ್ಮ ಸಿಟ್ಟನ್ನು, ನೋವನ್ನು ಹೊರಹಾಕುವಂತೆ ನಿರೂಪಿತಗೊಂಡಿವೆ.*

**Keywords:** *ದಲಿತ–ಬಂಡಾಯ ಸಾಹಿತ್ಯ, ಪ್ರತಿಭಟನೆ, ಪ್ರತಿರೋಧ, ಭಾಷೆ, ಶೋಷಿತ ಸಮಾಜ.*

## ಪೀಠಿಕೆ

ಭಾಷೆಯು ಸಾಮಾಜಿಕ ವಾಸ್ತವವನ್ನು ಪ್ರತಿಬಿಂಬಿಸುವ ಕನ್ನಡಿಯಾಗಿರುವಂತೆ ಆ ವಾಸ್ತವವನ್ನು ಹೊಡೆದು ಹಾಕುವ ಅಸ್ತ್ರವು ಆಗಿದೆ. ಭಾಷೆಯ ಈ ಭಿನ್ನ ಪ್ರಣಾಳಿಕೆಗಳನ್ನು ಅದರ ತಾರತಮ್ಯದ ಆಯಾಮಗಳನ್ನು ಪ್ರತಿಭಟನೆ ಮತ್ತು ಪ್ರತಿರೋಧದ ನೆಲೆಯಿಂದ ವಿವೇಚಿಸಿದಾಗಲಂತೂ ಇನ್ನಷ್ಟು ಕುತೂಹಲಕರವಾದ ಆಯಾಮಗಳು ಬೆಳಕಿಗೆ ಬರುತ್ತವೆ. ಅನೇಕ ತೊಂದರೆಗಳನ್ನು ಅನುಭವಿಸಿ, ಅನ್ಯಾಯಕ್ಕೆ ಒಳಗಾದ ವ್ಯಕ್ತಿಗಳು ಒಂದು ವ್ಯವಸ್ಥೆ ವಿರುದ್ಧ ಅಥವಾ ವ್ಯಕ್ತಿಗಳ ವಿರುದ್ಧ ನೇರವಾಗಿ ವಿರೋಧವನ್ನು ಅಭಿವ್ಯಕ್ತಪಡಿಸುವ ಭಾಷೆಯನ್ನು ಪ್ರತಿಭಟನೆಯ ಭಾಷೆ ಎಂದು ಕರೆಯಲಾಗಿದೆ. ಅದೇ ರೀತಿ ಅನ್ಯಾಯಕ್ಕೆ ಒಳಗಾದ ವ್ಯಕ್ತಿಗಳು ಒಂದು

**Please cite this article as:** ವೆಂಕೋಬ ತಳವಾರ ಮತ್ತು ಜೋಗಿನಕಟ್ಟೆ ಮಂಜುನಾಥ. (2024). ದಲಿತ–ಬಂಡಾಯ ಕಾದಂಬರಿಗಳು : ಪ್ರತಿಭಟನೆ ಮತ್ತು ಪ್ರತಿರೋಧದ ಭಾಷೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್*, 3(3), 30–35

ವ್ಯವಸ್ಥೆ ವಿರುದ್ಧ ಅಥವಾ ವ್ಯಕ್ತಿ ವಿರುದ್ಧ ಪರೋಕ್ಷವಾಗಿ ಮಾರ್ಮಿಕವಾಗಿ ವಿರೋಧವನ್ನು ಅಭಿವ್ಯಕ್ತಪಡಿಸುವ ಭಾಷೆಯು ಪ್ರತಿರೋಧದ ಭಾಷೆಯಾಗಿದೆ. ಪ್ರತಿಭಟನೆಯ ಭಾಷೆಯಲ್ಲಿ ಸಿಟ್ಟು, ಆಕ್ರೋಶ, ಅಭಿಪ್ರಾಯಗಳನ್ನು ನೇರವಾಗಿ ಹೊರಹಾಕಲಾಗುತ್ತದೆ. ಆದರೆ ಪ್ರತಿರೋಧನೆಯ ಭಾಷೆಯಲ್ಲಿ ಅಸಹಾಯಕತೆ, ಮಾನಸಿಕರೋಧನೆ ಕಂಡು ಬರುತ್ತದೆ. ಮಾರ್ಮಿಕವಾಗಿ ತಮ್ಮ ತುಮುಲುಗಳನ್ನುಹಂಚಿಕೊಳ್ಳುವುದು ಕಂಡುಬರುತ್ತದೆ.

ದಲಿತ ಬಂಡಾಯದ ಅನೇಕ ಕಾದಂಬರಿಗಳಲ್ಲಿ ಹಿಂದುಳಿದ ವರ್ಗದ ಪಾತ್ರಗಳು ತಮ್ಮನ್ನು ಶೋಷಣೆ ಮಾಡುವ ವ್ಯವಸ್ಥೆಯ ವಿರುದ್ಧ, ಮೇಲ್ವರ್ಗದವರ ವಿರುದ್ಧ, ಪ್ರತಿಭಟಿಸಿ ತಮ್ಮ ಸಿಟ್ಟನ್ನು, ನೋವುನ್ನು ಹೊರಹಾಕಿ ಮಾತನಾಡುವಂತೆ ನಿರೂಪಿತಗೊಂಡಿವೆ. ಇನ್ನೂ ಕೆಲವು ಕೆಳವರ್ಗದ ಪಾತ್ರಗಳು ನೇರವಾಗಿ ಮೇಲ್ವರ್ಗದವರನ್ನು ಎದುರಿಸಲಾರದೆ ಅವರ ಕೋಪ ಆಕ್ರೋಶ ಅಸಹಾಯಕತೆ ಎಲ್ಲವೂ ಕೂಡಿದಾಗ ಮಾತನಾಡುವುದು ಇಲ್ಲವೇ ಮಾರ್ಮಿಕವಾಗಿ ಪ್ರತಿರೋಧಿಸಿ ಅಭಿವ್ಯಕ್ತಪಡಿಸುವುದನ್ನು ಕಾಣಲಾಗಿದೆ.

ಬರಗೂರು ರಾಮಚಂದ್ರಪ್ಪ ಅವರ ಕಾದಂಬರಿಗಳಲ್ಲಿ ದಲಿತ ಮತ್ತು ಬಂಡಾಯ ಪಾತ್ರಗಳು ವ್ಯವಸ್ಥೆಯ ವಿರುದ್ಧ, ಮೇಲ್ವರ್ಗದವರ ವಿರುದ್ಧ, ಉಗ್ರರೂಪವನ್ನು ತಾಳಿ ಪ್ರತಿಭಟಿಸುವುದು ಕಂಡುಬರುತ್ತದೆ. ಪ್ರಸ್ತುತ ಬರಗೂರು ರಾಮಚಂದ್ರಪ್ಪನವರ 'ಶಬರಿ' ಕಾದಂಬರಿಯಲ್ಲಿ ಚಂದ್ರ ಮತ್ತು ಶಬರಿಯ ಮದುವೆಯ ದಿನ ಚಂದ್ರನು ನರಸಿಂಹರಾಯಪ್ಪ ಮತ್ತು ರಾಮಜೋಯಿಸರ ಕಾಲಿಗೆ ಬೀಳದೆ ಅವರನ್ನು ನಿಂದಿಸಿ ಪ್ರತಿಭಟಿಸಿದ ಸಂದರ್ಭವನ್ನು ಈ ಕೆಳಗಿನಂತೆ ನೋಡಬಹುದಾಗಿದೆ.

ನರಸಿಂಹರಾಯಪ್ಪ ಶಬರಿಗೆ ಸೀರೆ ಕೊಟ್ಟ ನಂತರ ಶಬರಿಯು ನರಸಿಂಹರಾಯಪ್ಪ ಮತ್ತು ರಾಮ ಜೋಯಿಸರ ಪಾದಗಳಿಗೆ ನಮಸ್ಕರಿಸಿದಳು. ಚಂದ್ರ ಮುಖ ತಿರುಗಿಸಿಕೊಂಡು ಕೂತ. ಪೂಜಾರಪ್ಪ ಇದನ್ನು ಗಮನಿಸಿ ಹೇಳಿದ. "ಚಂದ್ರ, ಒಡೇರ್ ಕಾಲ್ಗೆ ನೀನು ಬೀಳ್‌ಬೇಕು" ಆಗ ಚಂದ್ರ ಉರಿದು ಉಕ್ಕುವಂತೆ ನೋಡಿದ "ಏನ್ ಹಂಗ್ ನೋಡ್ತೀಯ? ಲಗಾಯ್ತಿಂದ ನಡ್ಕಂಡ್ ಬಂದಿರಾದ್ನ ಬಿಡಾಕಾಗಲ್ಲ, ಕಾಲಿಗೆ ಬೀಳು" ಪೂಜಾರಪ್ಪ ಒತ್ತಾಯಿಸಿದ. "ಬೀಳಲ್ಲ ಅಂದ್ರೆ ಏನ್ ಮಾಡ್ತೀಯಾ?" ಚಂದ್ರ ಸ್ಫೋಟಗೊಂಡು ಹೇಳಿದ ಆಗ ಎಲ್ಲರೂ ಒಂದು ಕ್ಷಣ ತಬ್ಬಿಬ್ಬರಾದರು. ಆದರೆ ಪೂಜಾರಪ್ಪ ಸುಮ್ಮನಿರದೆ ಸಿಡಿದು ಮಾತನಾಡಿದ "ನೀನ್ ಇಂಗೆಲ್ಲ ಮಾತಾಡಿದ್ರೆ ರಕ್ತ ಕಾರ್ಕಂಡು ಸತ್ತೋಗ್ತೀಯ" ಎಂದು ಹೇಳಿದ "ಕಟ್ಕೊಂಡ್ ಹೆಂಡ್ತೀನ ಕಂಡೋರ್ ಮಗ್ಗಲಾಗ್ ಮಲುಗ್ಸಾ ಬದ್ಲು ಒಟ್ಟೀಗೆ ಸಾಯೋದೆ ವಾಸಿ" ಚಂದ್ರ ಪ್ರತಿಭಟಿಸಿ ಮಾತನಾಡಿದ.

"ದ್ಯಾವ್ರನ್ನೇ, ಕಂಡೋರ್ ಗಿಂಡೋರು ಅಂಬ್ತ ಮಾತಾಡ್ತೀಯಲ್ಲ ನಿನ್ ನಾಲ್ಗೆ ಸೇದೋಗ" ಎಂದು ಪೂಜಾರಪ್ಪ ಪ್ರತಿಯಾಗಿ ಅಬ್ಬರಿಸಿದ. "ಕಂಡೋರ್ ಹೆಂಡ್ತೀರ ಜತೆ ಮಲ್ಗೋನು ಅದೆಂಥ ದೇವ್ರು? ಇದೆಲ್ಲ ಮೂಢನಂಬಿಕೆ ನನ್ ಹೆಂಡ್ತೀನ ನಾನು ದೇವಸ್ಥಾನಕ್ಕೆ ಕಳ್ಸಲ್ಲ". ಚಂದ್ರನ ಈ ಪ್ರತಿಭಟನೆಯ ಮಾತುಗಳಿಂದ ಎಲ್ಲರೂ ಗರಬಡಿದಂತೆ ನಿಂತರು.

ಈ ರೀತಿ ಶಬರಿ ಕಾದಂಬರಿಯಲ್ಲಿ ಕೆಳವರ್ಗದ ಪಾತ್ರಗಳು ಸಮಾಜದ ಮೂಢನಂಬಿಕೆ, ಪ್ರಾಚ್ಯಕಾಲದ ಅವ್ಯವಸ್ಥೆಯ ವಿರುದ್ಧ ಮತ್ತು ಮೇಲುವರ್ಗದವರ ಶೋಷಣೆಯ ವಿರುದ್ಧ ಪ್ರತಿಭಟಿಸಿ ಮಾತನಾಡಿರುವುದು ಕಂಡುಬರುತ್ತದೆ. 'ಶಬರಿ' ಕಾದಂಬರಿಯಲ್ಲಿ ಮದುವೆಯ ನಂತರ ಆ ಹೆಣ್ಣನ್ನು ಸಂಪ್ರದಾಯದಂತೆ ದೇವಸ್ಥಾನಕ್ಕೆ ಆಹ್ವಾನಿಸುವುದಕ್ಕೆ ರೇಷ್ಮೆಸೀರೆ, ಕುಪ್ಪಸದ ಬಟ್ಟೆ, ವೀಳ್ಯದೆಲೆ, ಅರಿಶಿನ ಕುಂಕುಮಗಳನ್ನು ತಟ್ಟೆಯಲ್ಲಿಟ್ಟು ಹೆಣ್ಣಿಗೆ ಒಪ್ಪಿಸಿ ದೇವಾಲಯಕ್ಕೆ ಬಂದು ಮೊದಲ ರಾತ್ರಿಯನ್ನು ದೇವರ ಜೊತೆ ಕಳೆಯಬೇಕೆಂಬುದು ಲಗಾಯ್ತಿಂದ ಬುಡಕಟ್ಟಿನವರು ನಡೆಸಿಕೊಂಡು ಬಂದ ಪದ್ಧತಿ. ಹಿಂದೆ ರಾಜರ ಕಾಲದಿಂದಲೂ ಈ ಪದ್ಧತಿ ಇದೆಯೆಂದು ಪ್ರತೀತಿ. ಈ ಪ್ರತೀತಿ ಎಂಬ ಮೂಡನಂಬಿಕೆಯ ವಿರುದ್ಧ ಚಂದ್ರ ಪ್ರತಿಭಟಿಸಿ

ಮಾತನಾಡಿರುವುದು ಈ ಕಾದಂಬರಿಯಲ್ಲಿ ಕಂಡು ಬರುತ್ತದೆ.

ಬಿ.ಟಿ. ಲಲಿತಾನಾಯಕ್ ಅವರ 'ಗತಿ' ಕಾದಂಬರಿಯು ಲಂಬಾಣಿ ಜನಾಂಗದ ಹಳ್ಳಿಯಲ್ಲಿನ ಚಿತ್ರಣವಾಗಿದೆ. ಆ ಹಳ್ಳಿಯಲ್ಲಿ ಲಚ್ಮಿ, ಸೋನಿ, ಹರಸಿಂಗ್, ಮಾನಸಿಂಗ್, ಪೂಜಾರಿಕಾಶಪ್ಪ ಮುಂತಾದ ಪಾತ್ರಗಳು ಕಂಡುಬರುತ್ತವೆ. ಹೆಣ್ಣು ಯಾವುದೇ ವರ್ಗಕ್ಕೆ ಸೇರಿರಲಿ, ವಿದ್ಯಾವಂತೆ ಇರಲಿ, ಅವಿದ್ಯಾವಂತೆಯಾಗಿರಲಿ, ಸಮಾಜ ಅವಳನ್ನು ಎರಡನೇ ದರ್ಜೆಯ ಪ್ರಜೆಯನ್ನಾಗಿ ಗುರುತಿಸುವುದು ಮಾತ್ರ ನಿಜವೆಂಬುದು ಇಲ್ಲಿ ತಿಳಿದು ಬರುತ್ತದೆ.

ಸೋನಿ ಬಡಕುಟುಂಬದಲ್ಲಿ ಬೆಳೆದ ಸಾಮಾನ್ಯ ಲಂಬಾಣಿ ಜನಾಂಗದ ಒಬ್ಬ ಹೆಣ್ಣುಮಗಳು. ಇವಳು ಮಾನಸಿಂಗ್ ಎಂಬುವವನೊಡನೆ ಮದುವೆಯಾಗುತ್ತಾಳೆ. ಒಂದು ದಿನ ಕುಟುಂಬದ ಗಂಡ ಹೆಂಡತಿ ನಡುವೆ ಜಗಳ ನಡೆದು ಬಲವಾದ ಪೆಟ್ಟು ಸೋನಿಯಾ ತಲೆಗೆ ಬೀಳುತ್ತದೆ. ಮಾನ್ಸಿಂಗ್ ತಲೆ ಕೆಡಿಸಿಕೊಳ್ಳದೆ ತನ್ನ ಪಾಡಿಗೆ ತಾನು ಹೊರಹೋಗುತ್ತಾನೆ. ಸೋನಿಯನ್ನು ಸೇರದ ಇವಳ ಮಾವ ಹರಸಿಂಗ್ ಅವಳನ್ನು ಆಸ್ಪತ್ರೆಗೆ ಸೇರಿಸುತ್ತಾನೆ. ಅವರ ಜೊತೆ ಲಚ್ಚಿಯು ಸಹ ಹೋಗುತ್ತಾಳೆ. ಆದರೆ ಅಲ್ಲಿ ಹರಸಿಂಗ್ ಆಸ್ಪತ್ರೆಯ ಬಿಲ್ಲನ್ನು ಕಟ್ಟದೇ ಸೋನಿ ಮತ್ತು ಲಚ್ಚಿಯನ್ನು ಬಿಟ್ಟು ಬರುವ ಪ್ರಯತ್ನ ಮಾಡುತ್ತಾನೆ. ಇದರಿಂದ ರೊಚ್ಚಿಗೆದ್ದ ಲಚ್ಚಿ ಹರಸಿಂಗ್‌ನನ್ನು ಬಲವಾಗಿ ಬಾರಿಸುತ್ತಾಳೆ ಆಗ ಹರಸಿಂಗ್ ಎಂಬ ಯಜಮಾನನ ವಿರುದ್ಧ ಕೈ ಮಾಡಿದ್ದು ತಪ್ಪು ಎಂದು ಪಂಚಾಯಿತಿ ಅವಳಿಗೆ ದಂಡ ಹಾಕುತ್ತದೆ.

"ಈಕಿ ಕಡಿಂದ ಭಯಂಕರ ತಪ್ಪಾಗೇತಿ!"

"ಅದರ ಸಲುವಾಗಿ ಈ ಹೆಣ್ಣುಮಗಳು ಪಂಚಾಯ್ತಿಗೆ ನೂರೊಂದು ರೂಪಾಯಿ ದಂಡ ತೆರಬೇಕಾಗ್ತದ! ಇದರಾಗ ದುಸರಾ ಮಾತಿಲ್ಲ!" ಎಂದು ಸಭೆ ಖಡಾ ಖಡಿಂತವಾಗಿ ಆಜ್ಞಾಪಿಸಿದಾಗ ಲಚ್ಮಿ ಸಿಟ್ಟಿನಿಂದ ಸಿಡಿದೆದ್ದಳು "ಇದೆಂಥ ಪಂಚಾಯ್ತಿ ನಡೇಸಿರಿ? ನಿಮ್ಮ ನ್ಯಾಯಕ್ಕೆ ಬೆಂಕಿ ಹಚ್ಲಿ! ಈ ನೀಚ ಮುದಿಯ ಬರೆ ಸುಳ್ಳಾಡೇ ಆಡ್ತಾನ ಅದಾನ ನೀವೆಲ್ಲ ಖರೆ ಅನ್ನಲಿಕೆ ಹತ್ತೀರಿ; ನನ್ನ ಮಾತನ್ನು ಕುಂಡಿಯಿಂದ ಒರೆಸಿ ಹಾಕಲಿಕ್ಕ ಹತ್ತೀರಿ!".

ಈ ರೀತಿ ಹೆಂಗಸೊಬ್ಬಳು ಪಂಚಾಯಿತರನ್ನು ಬಹಿರಂಗವಾಗಿ ತರಾಟೆಗೆ ತೆಗೆದುಕೊಂಡಿದ್ದು ಇದೇ ಮೊದಲ ಬಾರಿಯಾಗಿದ್ದರಿಂದ ಅವರ ಕಣ್ಣುಗಳು ಕೆಂಪಾದವು ಇದನ್ನು ಸಹಿಸದ ಅವರು "ಪಂಚರ ನ್ಯಾಯ ಅಂದ್ರ ದೇವರ ನ್ಯಾಯ! ಅದನ್ನ ಈಕೆ 'ಬೆಂಕಿ ಹಚ್ಲಿ' ಅಂತ ಹೇಳತ್ತಾಳ ಪೈಲಿ ಕಟ್ಟಬೇಕೆಂದಿದ್ದ ನೂರೊಂದು ರೂಪಾಯಿ ಅಲ್ಲ, ಅದರ ಮ್ಯಾಲೆ ಇಪ್ಪತ್ತೈದು ರೂಪಾಯಿ ದಂಡ ಕೊಟ್ಟು ನನ್ನ ತಪ್ಪಾತು ಅಂತ ಪಂಚಾಯಿತರ ಕಾಲು ಬೀಳಬೇಕು!" ಎಂದು ಹೇಳಿದರು.

ಪ್ರತ್ಯುತ್ತರವಾಗಿ ಲಚ್ಮಿ ಶಾಂತರೀತಿಯಿಂದ ಹೇಳಿದಳು. "ನೋಡ್ರಿ ನಿಮ್ಮ ಕಾಲು ಬೀಳಲಿಕ್ಕೆ, ದಂಡ ತೆರಲಿಕ್ಕೆ, ನಾಯೆನೂ ಮಂದಿ ಹೆಣ ಬೀಳ್ಸಿಲ್ಲ, ಯಾರದ್ದಾರ ಮನಿ ಮುರ್ದಿಲ್ಲ...... ನನ್ನದೇನೂ ತಪ್ಪಿಲ್ಲಂದ ಮ್ಯಾಲ ಒಂದ್ ಪೈಸಾನೂ ದಂಡ ಕೊಡುವಾಕಿಯಲ್ಲ ಅದೇನು ಮಾಡ್ಕೊಂತೀರೋ ಮಾಡ್ಕೋರಿ!" ಎನ್ನುತ್ತಾ ಆಕೆ ಹೊರನಡೆದಳು. ಪಂಚರ ಮತ್ತು ಹರಸಿಂಗ್‌ರ ಮಾತುಗಳಲ್ಲಿ ದರ್ಪದ ದೌರ್ಜನ್ಯದ ಭಾಷಾಸ್ವರೂಪ ಕಂಡುಬಂದರೆ, ಸಾಮಾಜಿಕ ವ್ಯವಸ್ಥೆ, ಹೆಣ್ಣಿನ ಮೇಲೆ ಆಗುವ ದೌರ್ಜನ್ಯ, ಪ್ರಭುತ್ವವನ್ನು ಪ್ರಶ್ನೆ ಮಾಡುವಂತಹ ಪ್ರತಿಭಟನೆಯ ಭಾಷಾರೂಪಗಳು ಲಚ್ಚಿ ಮತ್ತು ಸೋನಿ ಅವರ ಪ್ರತಿಕ್ರಿಯೆಯ ಮಾತುಗಳಲ್ಲಿ ಕಾಣಲಾಗಿದೆ.

ಸಮಾಜದಲ್ಲಿ ಒಂಟಿ ಹೆಣ್ಣನ್ನು ಯಾವ ದೃಷ್ಟಿಯಲ್ಲಿ ನೋಡುತ್ತಾರೆ. ಎಂಬುದನ್ನು ಈ 'ಗತಿ' ಕಾದಂಬರಿಯಲ್ಲಿ ಕಾಣಬಹುದಾಗಿದೆ. ಅದಕ್ಕೆ ಪ್ರತ್ಯುತ್ತರವಾಗಿ ಪ್ರತಿಭಟಿಸಿರುವ ಸೋನಿಯ ಮಾತುಗಳು ಈ ಕೆಳಗಿನಂತಿವೆ. ಸೋನಿ ಒಬ್ಬಳೇ

ಇರುವುದನ್ನು ಗಮನಿಸಿದ ಪೂಜಾರ ಕಾಶಪ್ಪ 'ಸೋನಿ ನಿನಗೊಂದ್ ಮಾತು ತಿಳಿಸಬೇಕಾಗೈತಿ!" ಎಂದು ಹೇಳಿದ "ಏನ್ ಕಾಶಣ್ಣ ಅದು?" ಎಂದು ಕೇಳಿದಳು.

"ಮೊನ್ನೆ ನೀ ಕಾರೇಕಾಯಿ ಮಾರಲಿಕ್ಕಂತ ಊರೊಳಗ ಹೋಗಿದ್ಯಂತಲ್ಲ?"

"ಹೌದು ಮಂದಿ ವಲ್ಲೆ ವಲ್ಲೆ ಅಂದು ಬಿಟ್ರು ಹಗಲೆಲ್ಲ ಸುತ್ತಾಡಿದ್ರೂ ಮೂರು ರೂಪೈಸುದ್ದ ಜಮಾಯಿಸಲಿಲ್ಲ...."

"ನೀ ಪುಟ್ಟಿ ಹೊತಗೊಂಡು ಖಾಲಿ 2–3 ರೂಪೈಗೆ ಈಟೊಂದು ತ್ರಾಸು ಪಡೋದು ಯದಕ್ಕ ಸೋನಿಬಾಯಿ? ಸುಮ್ನ ನಾ ಹೇಳಿದ್ದಂಗ ಕೇಳು ಕುಂತ ಜಾಗದಾಗ 20–30 ರೂಪೈ ಸಿಗತಾವ!.

"ಅದ್ ಹ್ಯಾಂಗ್" ಸೋನಿ ಅಚ್ಚರಿಯಿಂದ ಕೇಳಿದಳು

"ಊರ್ ಚೇರ್ಮನ ದೊಣ್ಣೆಯವರು ನಿನಗ್ಗೊತ್ತಲ್ಲ?.....

ಆತ ಕೇಳಿದ "ನಾನೆಂದು ಕಂಡೀನೋಯಿಪ್ಪ?"

"ನೀ ಆತನ್ನ ಕಂಡಿಲ್ಲ, ಆದ್ರ ಆತ ನಿನ್ನನ್ನು ಕಂಡು ಬಾಳ ಮೆಚ್ಚಿಕೊಂಡಾನ ಆಕಿ ಬೇಡಿದಷ್ಟು ರೊಕ್ಕ ಕೊಡಲಿಕ್ಕಾ ತಯಾರದೀನಿ ಅನ್ನಾಕ್ಹತ್ತಾನ ?...." ಕಾಶಪ್ಪ ಹಲ್ಲುಗಿಂಡಿ ಪಿಸುಗಟ್ಟಿದಾಗ ಸೋನಿಗೆ ಅವನ ಇರಾದೆ ಏನೆಂಬುದು ಸ್ಪಷ್ಟವಾಯಿತು.

"ಗುಡಿ ಪೂಜಾರ್ಕಿ ಮಾಡೋ ಮನ್ಸ ಆಗಿ ಇಂಥ ಲುಚ್ಚಾದಂದಿಗ ಇಳಿದೀಯಲ್ಲಣ್ಣಾ! ನಾಚ್ಗಿ ಬರಂಗಿಲ್ಲೇನು ನಿನ್ಗ ? ಎಂದು ಪ್ರತಿಭಟಿಸಿ ಮಾತನಾಡಿದಳು.

"ಹಿಂಗೆಲ್ಲಾ ನಾಚಿಗಿ ಪಟ್ಟುಕೊಂಡು ಕುಂತ್ವಂದ್ರ ನಮ್ಮಂಥ ಬಡವರ ಹೊಟ್ಟೆ ಹ್ಯಾಂಗ ತುಂಬೇಕ್ ಹೇಳು?"

"ಬಡವ್ರು ಹೊಟ್ಟೆಗಿಲ್ಲಂತ ಯಾರರ ಹೇಲು ತಿಂತಾರೇನೂ?... ಹಂಗಾದ್ರ ನಿನ್ನ ಹೆಂಡ್ತಿನ ಕಳ್ಸು ಆತನ ಬಲ್ಲಿ....? ಎಂದು ವಿರೋಧಿಸಿ ಪ್ರತಿಭಟಿಸುವುದು ಕಂಡು ಬರುತ್ತದೆ.

ಇದೇ ರೀತಿ ಅನ್ಯಾಯಕ್ಕೆ, ತುಳಿತಕ್ಕೆ ಒಳಗಾದ ವ್ಯಕ್ತಿಗಳು ಒಂದು ವ್ಯವಸ್ಥೆ ವಿರುದ್ಧ, ವ್ಯಕ್ತಿಗಳ ವಿರುದ್ಧ ಮಾರ್ಮಿಕವಾಗಿ ಅಥವಾ ಪರೋಕ್ಷವಾಗಿ ತಮ್ಮ ವಿರೋಧವನ್ನು ಅಭಿವ್ಯಕ್ತಪಡಿಸುವ ಹಿನ್ನಲೆಯಲ್ಲಿ ಬಳಕೆಯಲ್ಲಿ ಬಳಕೆಯಾದಂತಹ ಭಾಷೆಯು ಪ್ರತಿರೋಧದ ಭಾಷೆ ಎನ್ನಲಾಗಿದೆ. ಇಲ್ಲಿ ಅನ್ಯಾಯಕ್ಕೆ ಒಳಗಾದವರ ರೋಧನೆಯು ಕಂಡು ಬರುತ್ತದೆ.

ಬರಗೂರು ರಾಮಚಂದ್ರಪ್ಪನವರ 'ಶಬರಿ' ಕಾದಂಬರಿಯಲ್ಲಿ ಶಬರಿಯ ಗಂಡ ಚಂದ್ರ ಸತ್ತನಂತರ ಊರಿನ ಧಣಿ ನರಸಿಂಹರಾಯಪ್ಪ ಶಬರಿಯನ್ನು 'ಕೂಡಿಕೆ' ಮಾಡಿಕೊಳ್ಳುವ ಪ್ರಸಂಗ ಬಂದಾಗ ಶಬರಿ ಸಾಗರದ ಮೌನದಂತೆ ಪ್ರತಿರೋಧಿಸುವುದನ್ನು ಈ ಕಾದಂಬರಿಯಲ್ಲಿ ಕಾಣುತ್ತೇವೆ.

ಒಡೆಯ ನರಸಿಂಹರಾಯಪ್ಪ ಅಮವಾಸ್ಯೆಯಂತೆ ಕಾಡಿದ ಹೇಗಿದ್ದರೂ ಮದುವೆಯಾದ ಗಂಡನಿಲ್ಲ; ಒಂದು ದಿನವೂ ಆತನೊಂದಿಗೆ ಬಾಳುವೆ ಮಾಡಲಿಲ್ಲ, ಶ್ರೀಮಂತರು, ಭೂಮಾಲೀಕರು ಹಣ ನೀಡಿ ಹೆಣ್ಣಿನ ಕೂಡಿಕೆ ಮಾಡಿಕೊಳ್ಳವ ಪ್ರವೃತ್ತಿ ಒಂದು ಪದ್ಧತಿಯೇ ಆಗಿ ಬಿಟ್ಟಿದೆ. ಅದರಂತೆ ತಾನೇಕೆ ಶಬರಿಯನ್ನು ಪಡೆಯಬಾರದು? ಹೀಗೆ ಅನ್ನಿಸಿದ್ದೇ ತಡ ಒಡೆಯ ನರಸಿಂಹರಾಯಪ್ಪ ತಿಮ್ಮರಾಯಿಗೆ ಹೇಳಿ ಕಳಿಸಿದ್ದ. ಒಡೆಯನ ಮಾತಿಗೆ ಎದುರಾಡದೇ ತಿಮ್ಮರಾಯಿ ಬಂದು ರಾತ್ರಿ ಚಿಂತೆಯಲ್ಲಿ ಮುಳುಗಿದ ತಂದೆ ಚಡಪಡಿಸುತ್ತಿರುವುದನ್ನು ಕಂಡ ಶಬರಿ ತಾನೇ ಕೇಳಿದಳು.

"ಯಾಕಪ್ಪೊ ಒಂತರಾ ಇದ್ದೀಯಾ? ಏನಾತು ತಿಮ್ಮರಾಯಿ ಮಗಳ ಮುಖ ನೋಡಿದ

"ನನ್ ಬಾಳ್ವೆವ್ ಇಂಗಾತು ಅಂಬ್ತ ಸಂಕಟಾನೇನಪ್ಪ? ನೀನ್ ಯಾತ್ರುದು ಸಿಂತೆ ಮಾಡ್ ಬ್ಯಾಡ್, ಗಂಡಮಗ ಇದ್ದಂಗಿರ್ತೀನಿ" ಆಗ ತಿಮ್ಮರಾಯಿ ಮೆಲ್ಲಗೆ ಮಾತು ಶುರುಮಾಡಿದ.

"ಬಾಯಗೇಳ್ದಂಗೆಲ್ಲ ಇರಾಕಾಯ್ತದ ಮಗ್ಳೆ?"

"ಯಾಕಪ್ಪ ಆಗಾಕಿಲ್ಲ? ನಾನಿಲ್ ಇರಾದ ನಿಂಗ್ ಸರ್‌ಬರಾಕಿಲ್ವ? ಯೇಳು"

"ಎಲ್ಲಾನ ಉಂಟಾ ಮಗ್ಳೆ? ಕಣ್ಣಿದ್ರಿಗೇ ಮಗಳಿದ್ರೆ ಬ್ಯಾಡ ಅಂಬಾಕಾಯ್ತದ? ಆದ್ರೆ ಸಾಯಾಗಂಟ ಇಂಗೇ ಇರಾಕಾಯ್ತದ ಯೇಳು ಮತ್ತೇ ಅದ್ಕೆ ಒಂದ್ ವಿಸ್ಯ ಯೇಳಾನ ಅಂಬ್ತಿ ಇದ್ನಿ"

"ಏನಪ್ಪ?"

"ಅದೇ... ಅದೇ... ಒಡೇರ್ ಕರಿಸ್ಕಂಡಿದ್ರು"...

"ಯಾಕಂತೆ?"....

"ನಿನ್ನ.... ನಿನ್ನ.... ಕೂಡಿಕೆ ಮಾಡ್ಕಂಬ್ತಾರಂತೆ"

ಶಬರಿ ಸಿಟ್ಟಾಗಲಿಲ್ಲ ಸ್ವಲ್ಪ ಹೊತ್ತು ಸುಮ್ಮನಿದ್ದು ಕೇಳಿದಳು.

"ಅದಕ್ ನೀನೇನಂದೆ?"

"ನಿನ್ನನ್ ಕೇಳಿ ಯೇಳ್ತೀನಿ ಅಂದೇ"

"ನನ್ನೇನ್ ಇದ್ರಾಗ ಕೇಳಾದು?

ತಿಮ್ಮರಾಯಿಗೆ ಅಚ್ಚರಿ ಆಗಿ ಮಗಳ ಮುಖ ನೋಡಿದ ಶಬರಿ ಮಾತು ಮುಂದುವರೆಸಿದಳು.

"ನನ್ ಕೇಳ್ತೀನಿ ಅಂಬಾದ್ಕಿಂತ ಅಲ್ಲೆ ಯೇಳ್ ಬರ್ಬೇಕಿತ್ತು .ಇದು ಆಗಾವೋಗೊ ಮಾತಲ್ಲ, ನನ್ ಮಗಳು ಒಪ್ಪಾಕಿಲ್ಲ ಅಂಬ್ತ"

"ಒಡೇರ್ಗೆ ಅಂಗೇಳಾಕಾಯ್ತದ. ಮಗ್ಳೆ?"

"ಮಗಳಿಗೆ ಇಂಗೇಳಾಕಾಯ್ತದೆ ಅಲ್ವೇನಪ್ಪ ?"

ಶಬರಿಯ ವ್ಯಂಗ್ಯ–ವೇದನೆ ಪ್ರತಿರೋಧದ ಮಾತಿಗೆ ತಿಮ್ಮರಾಯಿ ಮೌನವಾದ. ಇಲ್ಲಿ ಶಬರಿಯು ಶಾಂತ ಸಾಗರದಂತೆ ಮೌನವಾಗಿದ್ದು ವ್ಯಂಗ್ಯ ರೂಪದಲ್ಲಿ ಊರಗೌಡನ ವಿರುದ್ಧ ತನ್ನ ತಂದೆಯ ಎದುರಿಗೆ ಪ್ರತಿರೋಧಿಸುತ್ತಾಳೆ.

ಬಿ. ಟಿ. ಲಲಿತಾನಾಯಕ್‌ರ 'ಗತಿ' ಕಾದಂಬರಿಯಲ್ಲಿ ಸೋನಿ, ಲಚ್ಚಿ, ಸೋನಿಯ ಮಗಳು ಸೀತಾ, ಹರಸಿಂಗ್, ಮಾನ್ಸಿಂಗ್, ಚಂದು ಹಲವಾರು ಪಾತ್ರಗಳು ಬರುತ್ತವೆ. ಈ ಎಲ್ಲಾ ಪಾತ್ರಗಳು ತಮ್ಮ ಪ್ರತಿರೋಧನೆಯ ಭಾಷೆಗಳನ್ನು ಪ್ರಸ್ತುತ ಕಾದಂಬರಿಯಲ್ಲಿ ಅಭಿವ್ಯಕ್ತಪಡಿಸಿರುವುದನ್ನು ಕಾಣುತ್ತೇವೆ.

ಸೀತಾ ಪುಟ್ಟ ಹುಡುಗಿ ಅವಳು ಮಾನಸಿಂಗ್‌ನ ಮಗಳಾದರೂ ಸಹಿತ ಅವಳಿಗೆ ಆದ ವೇದನೆ ಸಂಕಟದಿಂದ ಸ್ವತ: ತನ್ನ ತಂದೆಯನ್ನೇ ತಿರಸ್ಕರಿಸುತ್ತಾಳೆ ಈ ಪ್ರತಿರೋಧನೆಯ ವೇದನೆಯನ್ನು ತಾಯಿ ಸೋನಿ ಮತ್ತು ಕಾಕಾ ಚಂದುವಿನಲ್ಲಿ ತೋಡಿಕೋಳ್ಳುವ ಭಾಷೆಯನ್ನು ನಾವಿಲ್ಲಿ ನೋಡುತ್ತೇವೆ.

ದಿಬ್ಬದ ಪ್ರಾಥಮಿಕ ಶಾಲೆಯ ಕಟ್ಟಡ ಮುಗಿದಮೇಲೆ ಅದರ ಪ್ರಾರಭೋತ್ಸವ ದಿನ ಮಾನ್ಸಿಂಗ್ ಚಂದು ಮತ್ತು ಸೋನಿಯನ್ನು ಎಲ್ಲರ ಎದುರಿಗೆ ಹೊಡೆದನು. ಇದನ್ನು ಗಮನಿಸಿದ ಸೀತಾ ಸ್ನೇಹಿತೆಯ ಮನೆಯಲ್ಲಿ ಹೊತ್ತು ಕಳೆದು 'ಅವ್ವಾ' ಎಂದು ಕೂಗುತ್ತಾ ಅಲ್ಲಿಗೆ ಬಂದಳು. "ಇನ್ನೂ ಮಲಗಿಲ್ಲೇನು ಸೀತಾ? ಬಾ ಇಲ್ಲಿ" ಎಂದು ಚಂದು ಅಕ್ಕರೆಯಿಂದ ಕರೆದನು. ಸೀತಾ ಅವನ ಬಳಿ ಹೋಗಿ ಕೊರಳಲ್ಲಿ ತಬ್ಬಿಕೊಂಡು "ಚಂದುಕಾಕಾ, ಆತ ನಿನಗ ಎಷ್ಟು ಬಡಿದುಬಿಟ್ಟನಲ್ಲಾ! ಅವ್ವನಿಗೂ ಬಡ್ದಾ!.... ಅವನನ್ನ ಪೋಲಿಸರಿಗ ಹಿಡಿದುಕೊಡು ಕಾಕಾ. ಆತ ಭಾಳ ಕೆಟ್ಟೋನಿದ್ದಾನೆ!" ಎನ್ನುತ್ತ ಅಳತೊಡಗಿದಳು.

ಈ ರೀತಿ ಪ್ರತಿಯೊಂದು ಪಾತ್ರಗಳು ಸಹಿತ ತಮಗಾದ ಅನ್ಯಾಯದ ವಿರುದ್ಧ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಪ್ರತಿರೋಧನೆಯ ಭಾಷೆಯನ್ನು ಬಳಸುತ್ತಾರೆ. ಇದು ಕೇವಲ ಬುಡಕಟ್ಟು, ದಲಿತ, ಕೆಳವರ್ಗ ಶೋಷಿತರ ವರ್ಗಗಳಲ್ಲಿ ಇರಬಹುದಾದ ರೋಗವಲ್ಲ. ಎಲ್ಲಾ ಹಳ್ಳಿಗಾಡುಗಳಲ್ಲಿ, ಪಟ್ಟಣಗಳಲ್ಲಿಯೂ ಇರಬಹುದಾದಂತಹ ಕರ್ಮಕಥೆಯಾಗಿದೆ. ಇಲ್ಲಿ ಗೊಡ್ಡು ಸಂಪ್ರದಾಯಗಳು ಕಂದಾಚಾರ ಪದ್ಧತಿಗಳು, ಜೀವವಿರೋಧಿ ಮೂಢನಂಬಿಕೆಗಳು, ದೇವರು–ಧರ್ಮದ ಹೆಸರಿನಲ್ಲಿ ಶೋಷಿಸುವ ಪುರೋಹಿತಶಾಹಿಗಳು, ಅನಕ್ಷರತೆ, ಬಡತನ, ದಾರಿದ್ರ್ಯ ತುಂಬಿ ತುಳುಕುತ್ತಿವೆ.

ಈ ಮೇಲಿನ ಅನೇಕ ಉದಾಹರಣೆಗಳ ಹಿನ್ನೆಲೆಯಲ್ಲಿ ಹೇಳುವುದಾದರೆ, ದಲಿತ–ಬಂಡಾಯದ ಕೆಲವು ಕಾದಂಬರಿಗಳಲ್ಲಿ ಕೆಳವರ್ಗದ ಪಾತ್ರಗಳು ಅನ್ಯಾಯಕ್ಕೊಳಗಾದ ಸಂದರ್ಭಗಳಲ್ಲಿ ಮೇಲುವರ್ಗದವರನ್ನು ಪ್ರತಿಭಟಿಸಿ ಮಾತನಾಡಿರುವುದನ್ನು ಕಾಣಬಹುದು. ಅದಕ್ಕೆ ಮುಖ್ಯವಾಗಿ ಅವರ ಮೇಲಿನ ದೌರ್ಜನ್ಯಗಳು, ನೋವುಗಳು ಕಾರಣಗಳಾಗಿರುತ್ತವೆ. ಸಾಮಾಜಿಕವಾಗಿ ಬಲಉಳ್ಳವರು ಬಲಹೀನರ ಮೇಲೆ ಹೆಚ್ಚು ದಬ್ಬಾಳಿಕೆ ಮಾಡುವರು ಎನ್ನುವುದನ್ನು ಅನೇಕ ಕಾದಂಬರಿಗಳಲ್ಲಿ ನೋಡಬಹುದಾಗಿದೆ. ದಲಿತ–ಬಂಡಾಯದ ಹಲವಾರು ಕಾದಂಬರಿಗಳಲ್ಲಿ ದಲಿತರು ಮೇಲ್ವರ್ಗದವರ ಸೇವೆ ಮಾಡುತ್ತಾ ತಮ್ಮ ಬದುಕಲ್ಲಿ ಶೋಷಣೆಗೆ ಒಳಗಾಗಿ ಅಸಹಾಯಕರಾಗಿ ಜೀವಿಸುವುದನ್ನು ನಿರೂಪಿಸುತ್ತಾರೆ. ಅವರು ಈ ಮೇಲಿನ ಉದಾಹರಣೆಗಳಂತೆ ಮೇಲ್ವರ್ಗದವರನ್ನು, ವ್ಯವಸ್ಥೆಯನ್ನು ನೇರವಾಗಿ ಪ್ರತಿಭಟಿಸುವುದರ ಜೊತೆಗೆ ಪ್ರತಿರೋಧನೆಯನ್ನು ಅಭಿವ್ಯಕ್ತಪಡಿಸುವುದು ಕಂಡುಬರುತ್ತದೆ. ಪ್ರಸ್ತುತ ಸಮಾಜದಲ್ಲಿಯೂ ಏನೆಲ್ಲ ಬದಲಾವಣೆಗಳಾಗಿವೆ ಎಂದರೂ ಒಂದು ಉನ್ನತ ಸ್ಥಾನದಲ್ಲಿರುವವರ ಹಾಗೂ ಆರ್ಥಿಕ ಸಬಲತೆ ಹೊಂದಿರುವವರ ಮುಂದೆ ಜನಸಾಮಾನ್ಯರು ಅಸಹಾಯಕರಾಗಿಯೇ ಇರುವಂತಹದ್ದನ್ನು ಕಾಣಲಾಗುತ್ತದೆ. ಅದರಿಂದ ಯಾವುದೇ ರೀತಿಯಲ್ಲಿ ತಮಗೆ ಅನ್ಯಾಯವಾದರೂ ಸಾಮಾನ್ಯ ಜನ ಅದನ್ನು ವಿರೋಧಿಸುವಂತಹ ಶಕ್ತಿಯನ್ನು ಸಮಾಜದಲ್ಲಿ ಸಮರ್ಥವಾಗಿ ಪಡೆಯುವಲ್ಲಿ ಸಾಧ್ಯವಾಗಿಲ್ಲದಿರುವುದನ್ನು ಅನೇಕ ಕಾದಂಬರಿಗಳಲ್ಲಿನ ಪಾತ್ರಗಳ ಭಾಷೆಯ ಧ್ವನಿಯೊಂದಿಗೆ ಉಲ್ಲೇಖಿಸಬಹುದಾಗಿದೆ.

**ಆಕರ ಗ್ರಂಥಗಳು**


1. ಬರಗೂರು ರಾಮಚಂದ್ರಪ್ಪ. (2023). *ಶಬರಿ.* ಅಂಕಿತ ಪುಸ್ತಕ.
2. ಲಲಿತಾ ನಾಯಕ್.ಬಿ.ಟಿ (2014). *ಗತಿ.* ಕನ್ನಡ ಸಾಹಿತ್ಯ ಪರಿಷತ್ತು.


**ಪರಾಮರ್ಶನ ಗ್ರಂಥಗಳು**


- ಮಲ್ಲಪ್ಪ ಬಂಡಿ, ಎನ್. (2023). *ಪ್ರತಿಧ್ವನಿ.* ಅಭ್ಯುನ್ನತಿ ಪ್ರಕಾಶನ.
- ನಾರಾಯಣ, ಕೆ.ವಿ. (2009). *ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ನಾರಾಯಣ, ಕೆ.ವಿ. (ಸಂ.) (2009). *ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ–1 ಭಾಷೆ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಪುರುಷೋತ್ತಮ ಬಿಳಿಮಲೆ (2017). *ಬಂಡಾಯ ದಲಿತ ಚಳುವಳಿ ಮತ್ತು ಸಾಹಿತ್ಯ.* ಅಭಿನವ ಪ್ರಕಾಶನ.
- ವೀರಭದ್ರಪ್ಪ, ಹೆಚ್. (2022). *ಕನ್ನಡ ಸಣ್ಣಕಥೆಗಳ ಭಾಷೆ ಮತ್ತು ಸ್ವರೂಪ.* [ಅಪ್ರಕಟಿತ ಪಿಎಚ್.ಡಿ. ಮಹಾಪ್ರಬಂಧ] ಕನ್ನಡ ವಿಶ್ವವಿದ್ಯಾಲಯ,

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 36-42
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ದಲಿತ ಸಾಹಿತ್ಯ : ಭಾಷಿಕ ಸಂಬಂಧ

**ಅನಿಲ್ ಕುಮಾರ್ ಎಂ. ಕೆ**[1] **ಮತ್ತು ಪ್ರೊ. ಚಲುವರಾಜು**[2]
ಸಂಶೋಧನಾ ವಿದ್ಯಾರ್ಥಿ[1], ಪ್ರಾಧ್ಯಾಪಕರು[2]
ಬುಡಕಟ್ಟು ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

***Abstract:***

*ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಇಪ್ಪತ್ತನೆಯ ಶತಮಾನವು ಒಂದು ವಿಶಿಷ್ಟ ಯುಗವಾಗಿದೆ. ಈ ಶತಮಾನದ ಆರಂಭದಲ್ಲಿ ಕನ್ನಡ ಸಾಹಿತ್ಯವು ವಿಶಿಷ್ಟಗತಿಯನ್ನು ಪಡೆದು ಹಲವು ಮುಖಗಳಲ್ಲಿ ವಿಕಾಸ ಹೊಂದಿತು. ಈ ವಿಕಾಸವು ಕಾವ್ಯ ಗದ್ಯ ಬರಹಗಳಲ್ಲಿ ಹಾಸುಹೊಕ್ಕಾಗಿ ಸಾಹಿತ್ಯಾಭಿವ್ಯಕ್ತಿಗೆ ಮಾಧ್ಯಮವಾಗಿರುವ ಭಾಷೆಯೂ ಒಂದಾಗಿದೆ. ಇಪ್ಪತ್ತನೆಯ ಶತಮಾನದಲ್ಲಿಯೇ ಈ ಕಾಲದಲ್ಲಿ ಕಾವ್ಯದ ಭಾಷೆ ಮತ್ತು ಛಂದಸ್ಸುಗಳಲ್ಲಿ ಹೊಸತನ ಮೂಡಿತು. ಇದಕ್ಕೆ ಮೂಲ ಪ್ರೇರಣೆ ಇಂಗ್ಲಿಷ್ ಸಾಹಿತ್ಯದಿಂದ ದೊರಕಿತು ಎಂದು ಹೇಳಬಹುದು. ಈ ಪ್ರೇರಣೆಯಿಂದ ಹಾಗೂ ಇಂಗ್ಲಿಷ್ ಸಾಹಿತ್ಯದ ಅನುಕರಣೆಯಿಂದ ಕನ್ನಡದಲ್ಲಿ ಹೊಸ ಹೊಸ ಪ್ರಕಾರಗಳು ಹುಟ್ಟಿದವು. ಅವುಗಳಲ್ಲಿ ಭಾವಗೀತೆ, ಸಾನೆಟ್. ಖಂಡಕಾವ್ಯ. ಕಥನಕಾವ್ಯ, ಮಹಾಕಾವ್ಯ ಇನ್ನು ಗದ್ಯದಲ್ಲಿ ಸಣ್ಣಕಥೆ, ಕಾದಂಬರಿ, ಪ್ರಬಂಧ, ಹರಟೆ, ಅಂಕಣ, ಪ್ರವಾಸ. ಜೀವನ ಚರಿತ್ರೆ, ವ್ಯಕ್ತಿಚಿತ್ರ. ಆತ್ಮಕಥನ ವೈಚಾರಿಕ ಮತ್ತು ವಿಮರ್ಶೆ ಮುಂತಾದವು. ಅವುಗಳ ವಸ್ತು, ನಿರೂಪಣೆ, ಶೈಲಿಗಳಲ್ಲಿ ಭಾಷಿಕವಾಗಿ ಹೊಸತನವನ್ನು ಪ್ರಯೋಗಿಸಿ ಬೆಳೆದುಕೊಂಡು ಬಂದವು. ಕಾವ್ಯದಲ್ಲಿ ಅನೇಕ ಹೊಸ ಹೊಸ ಮಟ್ಟುಗಳು ಕೂಡ ಭಾಷಿಕ ಪ್ರಯೋಗದಿಂದ ಜನಜನಿತವಾಗಿವೆ.*

***Keywords:*** *ದಲಿತ – ಬಂಡಾಯ ಸಾಹಿತ್ಯ, ಭಾಷಿಕ ಸಂಬಂಧ, ಕಾವ್ಯ ಮತ್ತು ಭಾಷೆ.*

**ಪೀಠಿಕೆ**

ಮಾನವನ ಅತ್ಯಂತ ಮಹತ್ವದ ಸಾಧನೆಯಲ್ಲಿ ಭಾಷೆಯನ್ನು ಸಿದ್ಧಿಸಿಕೊಂಡಿದ್ದಾಗಿದೆ ಎನ್ನಬೇಕು. ಭಾಷೆ ಮಾನವನ ಸಾಧನೆ. ಭಾಷೆ ನಿಂತ ನೀರಲ್ಲ. ಅದು ನಿರಂತರವಾಗಿ ಪ್ರವಹಿಸುವ ನದಿ ಇದ್ದಂತೆ. ನದಿಯು ಕಾಲಕಾಲಕ್ಕೆ ತನ್ನ ಪಾತ್ರವನ್ನು ಬದಲಿಸುವಂತೆ ಭಾಷೆಯೂ ತನ್ನ ರೂಪವನ್ನು ಬದಲಿಸಿಕೊಂಡು ಬೆಳೆಯುತ್ತದೆ. ಹೀಗೆ ಬೆಳೆಯುವ ಭಾಷೆಯು ಜಗತ್ತಿನ ಎಲ್ಲ ಜ್ಞಾನ ಶಾಖೆಗಳ ವಾಹಕವಾಗಿದೆ. ಅದು ಎಲ್ಲ ಜ್ಞಾನ ಶಾಖೆಗಳ ಬೆಳಕೂ ಆಗಿದೆ. ಏಕೆಂದರೆ ನಾವಿಂದು ಯಾವುದಾದರೂ ವಿಷಯದ ಬಗ್ಗೆ ತಿಳಿದುಕೊಳ್ಳಬೇಕಾದರೆ, ಬೇರೆ ಬೇರೆ ಮೂಲಗಳಿಂದ ಮಾಹಿತಿಯನ್ನು ಸಂಗ್ರಹಿಸಬೇಕಾದರೆ, ಭಾಷೆಯ ನೆರವು ನಮಗೆ ಬೇಕೆಬೇಕು.

ಹೀಗಾಗಿ ಭಾಷೆ ನಮಗೆ ಏನೆಲ್ಲವೂ ಆಗಿದೆ. ಅದು ನಮ್ಮನ್ನು ಸುಸಂಸ್ಕೃತರನ್ನಾಗಿಸುವಲ್ಲಿ, ಬುದ್ಧಿವಂತರಾಗಿಸುವಲ್ಲಿ ಭಾಷೆಯ ಪಾತ್ರ ಮಹತ್ವದ್ದಾಗಿದೆಯೆಂಬುದರಲ್ಲಿ ಯಾವುದೇ

***Please cite this article as:*** ಅನಿಲ್ ಕುಮಾರ್ ಎಂ.ಕೆ. ಮತ್ತು ಚಲುವರಾಜು. (2024). ದಲಿತ ಸಾಹಿತ್ಯ : ಭಾಷಿಕ ಸಂಬಂಧ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(3), 36–42

ಅತಿಶಯೋಕ್ತಿಯೇನಲ್ಲ. ಇದಕ್ಕೆ ಕನ್ನಡ ಭಾಷೆಯೂ ಹೊರತಾಗಿಲ್ಲ.

"ಭಾಷೆ ಮೂಲತಃ ಭಾಷ್–ಎಂಬ ಸಂಸ್ಕೃತ ಧಾತುವಿನಿಂದ ಬಂದಿದೆ"[1]ಯೆಂದು ಭಾಷಾ ವಿದ್ವಾಂಸರು ಅಭಿಪ್ರಾಯಿಸಿದ್ದಾರೆ. ಅದಕ್ಕೆ ಬೆಳಕು, ಹೊಳೆ ಪ್ರಕಾಶಿಸು ಎಂಬರ್ಥ ಹೇಳಲಾಗುತ್ತದೆ. ಮನುಷ್ಯನು ಅದಿಮದಲ್ಲಿ ನಿಸರ್ಗದಲ್ಲಿ ತಾನು ಕಂಡ ಅನುಭವಿಸಿದ ಅನುಭವಗಳನ್ನು, ಭಾವನೆಗಳನ್ನು. ಅನಿಸಿಕೆಗಳನ್ನು ಇನ್ನೊಬ್ಬರಿಗೆ ತಿಳಿಸುವ ಸಲುವಾಗಿ ಭಾಷೆಯನ್ನು ಕಂಡುಕೊಂಡನು ಎಂದು ಹೇಳಬಹುದು. ಪ್ರಾಚೀನ ಕಾಲದಲ್ಲೇ ನಮ್ಮ ಭಾಷಾ ಪಂಡಿತರು. ವೈಯಾಕರಣಿಗಳು, ಭಾಷಾಮೀಮಾಂಸಕರು ಭಾಷೆಯ ಕುರಿತಾಗಿ ಅನೇಕ ಚರ್ಚೆಗಳನ್ನು ಮಾಡುತ್ತ ಬಂದಿರುವರು. ಭಾಷೆ ಮನುಷ್ಯನ ವ್ಯವಹಾರಕ್ಕಾಗಿದ್ದರೂ ಅದು ಅವನ ಪಾಂಡಿತ್ಯ, ಲೋಕಜ್ಞಾನ. ಸಾಹಿತ್ಯಜ್ಞಾನದ ವೃದ್ಧಿಗೂ ಸಾಧನವಾಗಿದೆಯೆಂದು ಹೇಳಬಹುದಾಗಿದೆ. ಪ್ರಾಚೀನ ಮೀಮಾಂಸಕರು ಶಬ್ದವನ್ನು ಪ್ರಮಾಣವೆಂದು ಸ್ವೀಕರಿಸಿ ಜ್ಞಾನದ ಸಾಧನಗಳ ನಿರೂಪಣೆಯಾಗಿ ಬಳಸಿದರು. ಶಬ್ದದಿಂದ ಅಥವಾ ಭಾಷೆಯಿಂದ ನಾವು ಗಳಿಸುವ ಜ್ಞಾನವು ಅಪಾರ. ಪ್ರತ್ಯಕ್ಷ ಮತ್ತು ಅನುಮಾನಗಳ ಕ್ಷೇತ್ರವು ಮಿತವಾದದ್ದು, ಶಬ್ದವು ಒಪ್ಪಿಕೊಂಡರೆ ಜ್ಞಾನದ ಕ್ಷೇತ್ರವು ವಿಸ್ತರಿಸುತ್ತವೆಯೆಂಬುದು ಅವರ ಅಭಿಪ್ರಾಯ.

ಹನ್ನೆರಡನೆಯ ಶತಮಾನದ ಶ್ರೇಷ್ಠ ಜ್ಞಾನಿ, ವಚನಕಾರ ಅಲ್ಲಮಪ್ರಭು, ಭಾಷೆಯೆಂದರೆ 'ಮಾತು' ಎಂದು ಹೇಳುತ್ತ ಅದನ್ನು ಜ್ಯೋತಿರ್ಲಿಂಗಕ್ಕೆ ಹೋಲಿಸುತ್ತಾನೆ. ಅದರಂತೆ ಬಸವಣ್ಣ ಕೂಡ ಭಾಷೆಯನ್ನು ಮುತ್ತಿನ ಹಾರ, ಸ್ಪಟಿಕದ ಸಲಾಕೆ, ದೀಪ್ತಿಗೆ ಹೋಲಿಸಿರುವುದನ್ನು ನೋಡುತ್ತೇವೆ. "ನಾವು ನಮ್ಮ ದೈನಂದಿನ ಕೆಲಸ ಕಾರ್ಯಗಳನ್ನು ಪೂರೈಸಿಕೊಳ್ಳಬೇಕಾದರೆ ಮಾತುಗಳನ್ನೇ ಭಾಷೆಯನ್ನು ಅವಲಂಬಿಸಬೇಕಾಗುವುದು. ಮಾತು ಮಾನವನ ಬದುಕಿಗೆ ಬೆಳಕು ನೀಡುವಂಥದಾಗಿದೆ".[2] ಅದಕ್ಕೆ ಸಂಸ್ಕೃತ ಪ್ರಸಿದ್ಧ ಮೀಮಾಂಸಕನಾದ ದಂಡಿಯು ತನ್ನ ಪ್ರಸಿದ್ಧ ಉಕ್ತಿಯೊಂದರ ಮೂಲಕ ಮಾನವನ ವ್ಯವಹಾರಕ್ಕೆ, ಸಾಹಿತ್ಯಾಭಿವ್ಯಕ್ತಿಗೆ ಇರುವ ಭಾಷೆಯ ಅವಶ್ಯಕತೆಯನ್ನು ಮನಗಾಣಿಸುತ್ತಾನೆ

> ***"ಇದಮಂದಂ ತಮಃ ಕೃತ್ಸ್ನಂ ಜಾಯೇತ ಭುವನತ್ರಮಂ।***
>
> ***ಯದಿ ಶಬ್ದಾಹ್ವಯಂ ಜ್ಯೋತಿರಾ ಸಂಸಾರಾನ್ನ ದೀಪ್ಯತೇ"*** [3]

ಭಾಷೆಯೆಂಬುದು ಜ್ಯೋತಿಯು ಜೀವನದಲ್ಲಿ ಬೆಳಗದೇ ಹೋಗಿದ್ದರೆ ಮೂರು ಲೋಕಗಳೆಲ್ಲವೂ ಕತ್ತಲೆಯಲ್ಲಿ ಮುಳುಗಿರುತ್ತಿದ್ದವು ಎಂಬುದು ಈ ಉಕ್ತಿಯ ಅರ್ಥವಾಗಿದೆ. ಇಲ್ಲಿ ದಂಡಿಯು ಮಾನವನ ಭಾಷೆಯ ಮಹತ್ವವನ್ನು ಮನಗಾಣಿಸಿದ್ದಾನೆ ಎಂದು ಹೇಳಬೇಕಾಗುತ್ತದೆ. ನಿಜವಾಗಿಯೂ ಭಾಷೆ ನಮ್ಮ ಬದುಕು ಮತ್ತು ಬರೆಹದ ಸಾಧನವೇ ಆಗಿದೆ ಎಂಬುದರಲ್ಲಿ ಯಾವುದೇ ಅನುಮಾನವಿಲ್ಲ. ಭಾಷಾವಿಜ್ಞಾನಿಗಳು ಭಾಷೆ ಒಂದು ಅಭಿವ್ಯಕ್ತಿಯ ಸಂಕೇತವೆಂದು ಕರೆಯುತ್ತಾರೆ. ಈ ಸಂಕೇತವು ಒಂದು ಸಾಮಾಜಿಕ. ಸಾಂಸ್ಕೃತಿಕ ವ್ಯವಸ್ಥೆಯಾಗಿರುತ್ತದೆ. ಜಗತ್ಪಸಿದ್ಧ ಭಾಷಾವಿಜ್ಞಾನಿಗಳಾದ ಬ್ಲಾಕ್ ಮತ್ತು ಟ್ರೇಗರ್ ಅವರು ಭಾಷೆಯ ಕುರಿತು ಅತ್ಯಂತ ವೈಜ್ಞಾನಿಕ ತಳಹದಿಯ ಮೇಲೆ ವ್ಯಾಖ್ಯಾನಿಸಿದ್ದು ಇವರ ಈ ವ್ಯಾಖ್ಯಾನ ತುಂಬಾ ಪ್ರಸಿದ್ಧವಾಗಿದೆ. ಆ ವ್ಯಾಖ್ಯೆ ಹೀಗಿದೆ.

"ಭಾಷೆ ಎಂಬುದು ಯಾದೃಚ್ಛಿಕ ಮೌಖಿಕಧ್ವನಿ ಸಂಕೇತಗಳ ಒಂದು ವ್ಯವಸ್ಥೆ: ಸಮುದಾಯದಲ್ಲಿ ಇದರಿಂದ ಸಂಪರ್ಕ ಸಹಕಾರ ಉಂಟಾಗುವುದು ಎಂದರ್ಥ".[4] ಭಾಷೆಯೊಂದು ವ್ಯವಸ್ಥೆ, ಅದು ಧ್ವನಿ ಸಂಕೇತಗಳ ವ್ಯವಸ್ಥೆ, ಮಾನವನ ಮೌಖಿಕ ಧ್ವನಿ ಸಂಕೇತಗಳ ವ್ಯವಸ್ಥೆ, ಸಾಮಾಜಿಕ ವ್ಯವಹಾರಕ್ಕೆ ಉಂಟಾದ ಸಾಧನ. ಮಾನವ ಎರಡು ರೀತಿಯಲ್ಲಿ ತನ್ನ ಧ್ವನಿಗಳನ್ನು ಅರ್ಥಕ್ಕೆ ಹೊಂದಿಸಿಕೊಂಡು ವಸ್ತುವನ್ನು ಗುರುತಿಸಲು ಪ್ರಯತ್ನಿಸುವಂತೆ ಕವಿ

ಅಥವಾ ಸಾಹಿತಿಯು ತನ್ನ ಅಭಿವ್ಯಕ್ತಿಯನ್ನು ಸಂಕೇತ, ಪ್ರತಿಮೆ, ರೂಪಕ, ಅಲಂಕಾರ ರಸಧ್ವನಿ ಮೂಲಕ ಹೇಳಲು ಪ್ರಯತ್ನಿಸುತ್ತಾನೆ. ಕಾವ್ಯ ಅಥವಾ ಇತರ ಕೃತಿಗಳಲ್ಲಿ ಭಾಷೆ ರಚನೆಯ ಸ್ವರೂಪವನ್ನು ವಿಶ್ಲೇಷಿಸುವಾಗ ಅವುಗಳ ಅಭ್ಯಾಸಿಯು ಇವುಗಳನ್ನು ಗಮನಿಸುತ್ತಾನೆ ಎನ್ನಬೇಕು.

ಜಗತ್ತಿನಾದ್ಯಂತ ಒಂದೇ ಭಾಷೆ ಇಲ್ಲ. ಸಾವಿರಾರು ಭಾಷೆಗಳು, ಉಪಭಾಷೆಗಳು, ಪ್ರಾದೇಶಿಕ ಭಾಷೆಗಳು ಜನರಲ್ಲಿ ಬಳಕೆಯಲ್ಲಿವೆ. ಉದಾಹರಣೆಗೆ ಕನ್ನಡವನ್ನೇ ತೆಗೆದುಕೊಂಡು ನೋಡಲಾಗಿ ಪ್ರಾಚೀನ ಕನ್ನಡ, ಮಧ್ಯಕಾಲೀನ ಕನ್ನಡ ಮತ್ತು ಆಧುನಿಕ ಕನ್ನಡವೆಂತಲೂ 'ಕಾಲವಾಚವಾಗಿ ಹಾಗೆಯೇ ಶಾಸನಗಳಲ್ಲಿನ ಕನ್ನಡ ಆಡುಗನ್ನಡ ಇದನ್ನು ಪ್ರಾದೇಶಿಕವಾಗಿ ಮೈಸೂರು ಪ್ರದೇಶದ ಮಂಗಳೂರು ಕನ್ನಡ, ಧಾರವಾಡ ಕನ್ನಡ, ಬೆಂಗಳೂರು ಕನ್ನಡ, ಚಿತ್ರದುರ್ಗ ಕನ್ನಡವೆಂಬ ಒಳ ಪ್ರಭೇದ ಭಾಷೆಗಳನ್ನು ಕಾಣುತೇವೆ. ಇದಲ್ಲದೆ ಮತ್ತೆ ಪ್ರಭೇದ ಭಾಷೆ ವ್ಯಕ್ತಿ ಭಾಷೆಯೂ ವಿಭಿನ್ನವೂ ವಿಶಿಷ್ಟವೂ ಆಗಿರುವುದು. ಒಂದೇ ಪ್ರದೇಶದಲ್ಲಿ ವಾಸಿಸುವ ಜನರು ತಮ್ಮ ವಲಯದಲ್ಲಿಯೇ ಭಿನ್ನ ಭಿನ್ನ ಭಾಷೆಗಳನ್ನು ಮಾತನಾಡುತ್ತಾರೆ. ಇದನ್ನು ಸಾಮಾಜಿಕವಾಗಿ ನೋಡಲಾಗುತ್ತದೆ. ಈ ಭಾಷಾ ಭಿನ್ನತೆಗಳಿಗೆ ಕಾರಣಗಳು ಅನೇಕ. ಅವು ಪ್ರಕೃತಿ, ಸಮಾಜ, ಪ್ರದೇಶಗಳನ್ನು ಹೊಂದಿ ಬದಲಾವಣೆಯಾಗುತ್ತ ಬೆಳೆಯುತ್ತವೆ. ಒಂದೇ ಪ್ರದೇಶದಲ್ಲಿ ಒಂದೇ ಪರಿಸರದಲ್ಲಿ ಎರಡು, ಮೂರು ಅಥವಾ ಅನೇಕ ಭಾಷೆಗಳು ಒಟ್ಟಿಗೆ ಬಳಕೆಯಲ್ಲಿರುವುದನ್ನು ಕಾಣಲಾಗುತ್ತದೆ. ಇದಕ್ಕೆ ಉದಾಹರಣೆಯೆಂದರೆ ಬಹು ಧಾರ್ಮಿಕ, ಬಹು ಸಾಂಸ್ಕೃತಿಕ, ಬಹುಭಾಷಿಕ ನೆಲೆಯಾದ ಕೆಲವು ಜಿಲ್ಲೆಯಲ್ಲಿಯೇ ನಾವು ಅನೇಕ ಭಾಷೆಗಳನ್ನು ಜನರು ದಿನನಿತ್ಯದಲ್ಲಿ ಬಳಸುತ್ತಿರುವುದನ್ನು ಕಾಣುತ್ತೇವೆ. ಬಹುಭಾಷಿಕ ಪ್ರಯೋಗ ಆಡುಮಾತಿನಲ್ಲಿರುವಂತೆ ಈ ಪ್ರದೇಶದ ಕಾವ್ಯ, ಕಥೆ, ಕಾದಂಬರಿ, ನಾಟಕ ಮೊದಲಾದ ಸಾಹಿತ್ಯ ರಚನೆಗಳಲ್ಲಿಯೂ ಕಾಣಬಹುದಾಗಿದೆ.

ಕವಿ ಅಥವಾ ಸಾಹಿತಿಯೂ ಒಬ್ಬ ಸಾಮಾಜಿಕ ಜೀವಿ, ಹೀಗಾಗಿ ಆತನ ಮೇಲೆ ಸಮಾಜದ ಅನೇಕ ಘಟನೆ, ಪ್ರಸಂಗಗಳು ಆತನ ಮೇಲೆ ಪ್ರಭಾವವನ್ನುಂಟು ಮಾಡಿರುತ್ತವೆ. ಸಮಾಜದಿಂದಲೇ ತನ್ನ ಬರವಣಿಗೆಗೆ ವಸ್ತುವನ್ನು ಆಯ್ದುಕೊಳ್ಳುವ ಕವಿ ಅಥವಾ ಸಾಹಿತಿಯು ಸಮಾಜದಲ್ಲಿ ಬಳಕೆಯಲ್ಲಿರುವ ಶಬ್ದ, ಪದ, ನುಡಿಗಟ್ಟು, ಪ್ರತಿಮೆ, ರೂಪಕ, ಗಾದೆ, ನಾಣ್ಣುಡಿ ಮುಂತಾದವುಗಳನ್ನು ಬಳಸಿಕೊಂಡು ರಚನೆ ಮಾಡಿರುತ್ತಾನೆ. ಹೀಗಾಗಿ ಕವಿ, ಬರಹಗಾರರ ಕೃತಿಗಳನ್ನು ಭಾಷಿಕ ನೆಲೆಯಲ್ಲಿ ನೋಡುವುದು ಹೆಚ್ಚಿನ ಪ್ರಯೋಜನವಿದೆ.

**ಕಾವ್ಯ ಮತ್ತು ಭಾಷೆ**

ಭಾಷೆ ಒಂದು ಜನಸಮುದಾಯದ ಆಲೋಚನಾ ಶಕ್ತಿ ಅಥವಾ ಭಾವನಾಶಕ್ತಿಯ ಅಭಿವ್ಯಕ್ತಿಯ ಸಾಧನ, ತನ್ನೊಳಗಿನ ಅನುಭವಗಳನ್ನು ಆಲೋಚನೆಗಳನ್ನು ಅನಿಸಿಕೆಗಳನ್ನು ಕವಿಯಾದವನು ತಕ್ಕ ಭಾಷಾ ಮಾಧ್ಯಮದ ಮೂಲಕ ಸಂವಹನ ಸಾಧನವನ್ನಾಗಿಸುವ 'ಕ್ರಿಯೆಯನ್ನು ಮಾಡುತ್ತಾನೆ. "ಈ ಅಭಿವ್ಯಕ್ತಿ ಕವಿಯಾದವನ ಪಾಲಿಗೆ ಒಂದು ಸಹಜವೂ, ಸ್ವತಂತ್ರವೂ ಮತ್ತು ಅನಿವಾರ್ಯವೂ ಆದ ವ್ಯಾಪಾರವಾಗಿರುತ್ತದೆ"[5] ಎನ್ನುತ್ತಾರೆ. ಡಾ. ಜಿ.ಎಸ್.ಶಿವರುದ್ರಪ್ಪನವರು, ಅವರು ಆತನಿಗೆ ಅನಿಸಿದ ವೇದನೆ–ಸಂವೇದನೆಗಳನ್ನಷ್ಟೇ ನಿವೇದನೆಯ ಅಗತ್ಯವೂ ಹಾಗೂ ಅನಿವಾರ್ಯವೂ ಆಗಿರುತ್ತದೆ. ಆದ್ದರಿಂದ ಆಂಗ್ಲ ವಿದ್ವಾಂಸರಾದ ವರ್ಡ್ಸ್ ವರ್ತ ಹೇಳುವಂತೆ ಕಾವ್ಯ ನಮ್ಮೊಳಗಿನ ಭಾವನೆ–ಸಂವೇದನೆಗಳ ಒತ್ತಡಗೊಂಡು ಹೊರಚಲ್ಲುವಿಕೆ ಮತ್ತು ಮುಖಾಮುಖಿಯಾಗುವಿಕೆಯಲ್ಲಿ ಹುಟ್ಟುತ್ತದೆ ಎಂಬ ಮಾತು ಹೇಳಿರುವುದನ್ನು ಕಾಣುತ್ತೇವೆ.

ಭಾಷೆ ಮತ್ತು ವಸ್ತುವಿನ ಬಗೆಗಿನ ನಿಲುವು ಕನ್ನಡದಲ್ಲಿ ಹಿಂದಿನ ಕಾಲದಲ್ಲಿಯೇ ಪಂಪ, ರನ್ನ

ಹಾಗೂ ವಚನಕಾರರಲ್ಲಿ ಹಾಗೂ ಅವರ ಪರಂಪರೆಯ ಹೆಜ್ಜೆಯಲ್ಲಿಯೇ ನಡೆದ ಹರಿಹರ, ರಾಘವಾಂಕ ಮತ್ತು ಆನಂತರದ ಕೀರ್ತನಕಾರರಲ್ಲಿ ತತ್ವಪದಕಾರರಲ್ಲಿ ಹಾಗೆಯೇ ಆಧುನಿಕ ಕನ್ನಡ ನವೋದಯ, ಪ್ರಗತಿಶೀಲ, ನವ್ಯ ಮತ್ತು ನವೋತ್ತರ ಸಂದರ್ಭದ ದಲಿತ ಬಂಡಾಯ ಕವಿಗಳಲ್ಲಿ ಕಾಣುತ್ತೇವೆ.

**ಹೊಸ ಭಾಷಿಕ ಪರಿಭಾಷೆಯಲ್ಲಿ ದಲಿತ ಕಾವ್ಯ**

ಪ್ರಾಚೀನ ಛಂದೋಬಂಧಗಳನ್ನು ನಿರಾಕರಿಸಿದ ಆಧುನಿಕರು ಅಷ್ಟೇ ನಿಯತವಾದ ಛಂದೋಲಯಗಳನ್ನು ಮುಂದುವರಿಸಿಕೊಂಡು ಬಂದಿರುವುದನ್ನು ನವೋದಯ ಕಾವ್ಯ ಸಂದರ್ಭದಲ್ಲಿ ಕಾಣುತ್ತೇವೆ. ಅದೇ ನವ್ಯಕವಿಗಳು ಕಾವ್ಯಕ್ಕೆ ಹೊಸ ಪ್ರತಿಮಾತ್ಮಕ, ರೂಪಕ, ಭಾಷಿಕ ಸ್ವರೂಪವನ್ನು ನೀಡಿದರು. ಆದರೆ, ನವ್ಯದ ನಂತರದಲ್ಲಿ ಕಾಣಿಸಿಕೊಂಡ ದಲಿತ ಕಾವ್ಯವು ಸಾಮಾಜಿಕ ಪರಿಭಾಷೆಯಲ್ಲಿ ಕಾವ್ಯರಚನೆ ಮಾಡತೊಡಗಿದರು. ಮಾತನ್ನು ಕಾವ್ಯವಾಗಿಸಿದರು. ಅದರಲ್ಲಿ ರೂಪಕ ಪ್ರತಿಮೆಗಳನ್ನು ಸೌಮ್ಯ ಆಕ್ರೋಶಭರಿತ ಭಾಷೆಯಲ್ಲಿ ಪಡಿಮೂಡಿಸಿದರು. ಎನ್ನಬೇಕು.

ಬಹುಮುಖ್ಯವಾಗಿ ಶ್ರೇಣಿಕೃತ ಸಮಾಜದ ನಿರ್ನಾಮ ಸಂಕಲ್ಪವು ದಲಿತ ಕವಿಗಳದ್ದಾಗಿತ್ತು. ಬದುಕಿನ ಎಲ್ಲ ನೆಲೆಗಳಿಂದಲೂ ಕಾವ್ಯವನ್ನು ಕಟ್ಟಬೇಕು ಎಂಬ ಉತ್ಸಾಹ, ಅನಿವಾರ್ಯತೆಯನ್ನು ದಲಿತ ಕವಿಗಳು ಹೆಗಲೇರಿಸಿಕೊಂಡರು. ಕಳೆದ 70ರ ದಶಕದಲ್ಲಿ ಬಂಡಾಯ ಚಳವಳಿಯ ಜೊತೆಗೆ ಸರಿಜೋಡಿಯಾಗಿ ನಿಂತು ಕನ್ನಡ ಕಾವ್ಯದಲ್ಲಿ ಮೊದಲ ಬಾರಿಗೆ ಜಾತಿಯ ನೆಲೆಯಿಂದ ಗುರುತಿಸಿಕೊಂಡು ಬಂದರು. ಜಾತಿಯ ಮುಖೇನೇ ತನ್ನನ್ನು ಗುರುತಿಸಿಕೊಂಡು ದಲಿತ ಕಾವ್ಯ ಕನ್ನಡ ಸಾಹಿತ್ಯವನ್ನು ಸಾಮಾಜಿಕ ಹಾಗೂ ರಾಜಕೀಯ ಸ್ಥಿತ್ಯಂತರಗಳ ಅನಿವಾರ್ಯತೆಯನ್ನು ವ್ಯಕ್ತಪಡಿಸಿತು. ಇದಕ್ಕೆ ಸ್ಪಷ್ಟ ಉದಾಹರಣೆಯೆಂದರೆ ಡಾ. ಸಿದ್ದಲಿಂಗಯ್ಯನವರ ಕಾವ್ಯ ಎನ್ನಬೇಕು.

***"ದಲಿತರು ಬಂದರು ದಾರಿಬಿಡಿ,***
***ದಲಿತರ ಕೈಗೆ ರಾಜ್ಯ ಕೊಡಿ"***

ಎಂದು ಹೇಳುವ ಮೂಲಕ ದುಡಿಯುವ ಜನರಿಗೆ ಸಾಮಾಜಿಕವಾಗಿ ತುಳಿತಕ್ಕೊಳಗಾದ ಜನರಿಗೆ ಶೋಷಣೆಯ ಬೆಂಕಿಯಲ್ಲಿ ಬೆಂದು ನೊಂದವರಿಗೆ ಅಧಿಕಾರ ಬಂದಾಗ ಮಾತ್ರ ಸರ್ವರಿಗೂ ಸಾಮಾಜಿಕ ಹಾಗೂ ರಾಜಕೀಯ ನ್ಯಾಯ ಸಿಗಲು ಸಾಧ್ಯ ಎಂದು ಹೇಳುವ ಮೂಲಕ ಇಡೀ ದಲಿತ ಸಮುದಾಯದಲ್ಲಿ ಶೋಷಣೆಯಿಂದ ಮುಕ್ತವಾಗುವ ಪ್ರಜ್ಞೆಯನ್ನು ಮೂಡಿಸಿದರು ಎನ್ನಬೇಕು.

ಸ್ವಾತಂತ್ರ್ಯ ಲಭಿಸಿದ ಸುಮಾರು ಮೂರು ದಶಕಗಳಲ್ಲಿಯೇ ಸ್ವಾತಂತ್ರ್ಯಪೂರ್ವದಲ್ಲಿ ಕಟ್ಟಿಕೊಂಡಿದ್ದ ಪರಿವರ್ತನೆಗಳು ರೂಪದಲ್ಲಿ ಮಾತ್ರ ಬದಲಾವಣೆ ಹೊಂದಿದವು. ಆದರೆ ಆಚರಣೆಯಲ್ಲಿ ಮಾತ್ರ ಅದೇ ವರ್ಣ, ವರ್ಗ, ಜಾತಿ, ಲಿಂಗ ತಾರತಮ್ಯ ಹಾಗೇ ಉಳಿದುಕೊಂಡು ಬಂದಿತು. ಇದು ಪ್ರಗತಿಪರ ಚಿಂತಕರು, ಕವಿ, ಸಾಹಿತಿಗಳಲ್ಲಿ ಚಿಂತನೆಗೀಡು ಮಾಡಿತು. ಇದರ ಜೊತೆಗೆ 70ರ ದಶಕದಲ್ಲಿ ರಾಷ್ಟ್ರ ರಾಜ್ಯದಲ್ಲಿ ನಡೆದ ವಿದ್ಯಮಾನಗಳು ತುರ್ತುಪರಸ್ಥಿತಿ ಕರಾಳ ಶಾಸನವು ಲೇಖಕರ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಹತ್ತಿಕ್ಕಿತು. ಬಸವಲಿಂಗಪ್ಪನವರ ಕನ್ನಡ ಸಾಹಿತ್ಯ ಭೂಸಾ ಎಂಬ ಹೇಳಿಕೆ, ಧರ್ಮಸ್ಥಳ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ದಲಿತ ಗೋಷ್ಠಿ ಇಡಲು ನಿರಾಕರಣೆ ಇವೆಲ್ಲವೂ ಕನ್ನಡ ಸಾಹಿತ್ಯದಲ್ಲಿ ಬಹು ದೊಡ್ಡ ಬದಲಾವಣೆಗಳಿಗೆ ಕಾರಣವಾದವು. ಪ್ರಗತಿಪರ ಚಿಂತನೆಯ ಅನೇಕರು ವಿಭಿನ್ನ ರೀತಿಯ ಸಾಹಿತ್ಯಕ ಭಾಷೆಯಲ್ಲಿ ಬರೆಯಲು ತೊಡಗಿದರು. ರಾಜ್ಯಮಟ್ಟದಲ್ಲಿ ಡಾ. ಸಿದ್ಧಲಿಂಗಯ್ಯನವರು ಕಾವ್ಯಕ್ಕೆ ಹೊಸ ಭಾಷಿಕ ನೆಲೆಯನ್ನು ತಂದುಕೊಟ್ಟರೆ, ದೇವನೂರ ಮಹಾದೇವ, ಬರಗೂರ ರಾಮಚಂದ್ರಪ್ಪ ಮುಂತಾದವರು ಗದ್ಯಕ್ಕೆ ಹೊಸ ಭಾಷಾ ಅಭಿವ್ಯಕ್ತಿಯನ್ನು ಕಲ್ಪಿಸಿಕೊಟ್ಟರು. ಇವರುಗಳ ಕಾವ್ಯ, ಸಾಹಿತ್ಯ, ಭಾಷಿಕ ಅಭಿವ್ಯಕ್ತಿ ಕ್ರಮ, ಶೈಲಿ ಉಳಿದಡೆಯಲ್ಲಿಯಂತೆ ದಲಿತಕವಿ, ಸಾಹಿತಿಗಳ

ಮೇಲೂ ಪ್ರಭಾವವಾಯಿತು. ಅನೇಕರು ಇಲ್ಲಿಯೂ ಕಾವ್ಯ ಗದ್ಯಕ್ಕೆ ಹೊಸ ಹೊಸ ಪ್ರತಿಮೆ ರೂಪಕ, ನುಡಿಗಟ್ಟು, ವ್ಯಂಗೋಕ್ತಿ, ಪಡೆನುಡಿ ಹಾಗೂ ಅನ್ಯಭಾಷಿಕ ಪದಪುಂಜಗಳನ್ನು ಪ್ರಯೋಗಿಸಿದ್ದನ್ನು ಬಹು ಮುಖ್ಯವಾಗಿ ಕಾಣುತ್ತೇವೆ. ಇದಲ್ಲದೆ ದಲಿತ ಕಾವ್ಯದ ಮೇಲೆ ವಚನಸಾಹಿತ್ಯ ತತ್ತಪದ ಸಾಹಿತ್ಯ, ಡಾ. ಅಂಬೇಡ್ಕರ್ ಅವರ ಬರಹ ಭಾಷಣಗಳು ಅವರ ಚಿಂತನೆಗಳ ಪ್ರಭಾವವನ್ನು ಕಾಣದೆ ಇರಲಾರೆವು, ಭಾವ ಪರವಶತೆಯ ನವೋದಯವನ್ನು ದಾಟಿ, ಜನಪರ ನಿಲುವಿನ ಪ್ರಗತಿಶೀಲ ಕಾವ್ಯವನ್ನು ಮೀರಿ, ಚಿಂತನಪರ ನವ್ಯ ಕಾವ್ಯವನ್ನು ಹಿಂದಕ್ಕೆ ತಳ್ಳಿ ಬೆಳೆದ ದಲಿತಕಾವ್ಯ ಬೀದಿಮಾತಿನ ಆಡುಭಾಷೆಯ ಜನಸಾಮಾನ್ಯರ ಕಾವ್ಯವಾಗಿ ಹೊರಹೊಮ್ಮಿತು. ಕಾವ್ಯ. ಜನ. ಭಾಷೆ, ಜನಪರ ಧೋರಣೆಯನ್ನೇ ತನ್ನ ಜೀವಸತ್ವವಾಗಿಸಿಕೊಂಡಿತು. ಸ್ವಾತಂತ್ರ್ಯದ ಸಮಾನತೆ, ಮಾನವೀಯ ನ್ಯಾಯ, ಅನುಕಂಪ ಮುಂತಾದ ಸಾಹಿತ್ಯದ ಚಿರಂತನ ಮೌಲ್ಯಗಳನ್ನು ದಲಿತ ಕಾವ್ಯ ವಿನೂತನ ಭಾಷೆಯಲ್ಲಿ ಪ್ರತಿಪಾದಿಸಿತು.

ದಲಿತ ಕವಿಗಳು ಜನಸಾಮಾನ್ಯರಿಗೂ ಅರ್ಥವಾಗುವ, ಸಂವಹನವಾಗುವ ರೀತಿಯಲ್ಲಿ ಗೇಯತೆಯ ಮೂಲಕ ಕಾವ್ಯವನ್ನು ರಚಿಸಿತು. ಅನೇಕ ದಲಿತ ಕವಿತೆಗಳು ಜಾಥಾ ಚಳವಳಿ, ರ್‍ಯಾಲಿ, ವಿಚಾರ ಸಂಕಿರಣ, ಸಮ್ಮೇಳನಗಳಲ್ಲಿ ಅವು ಹಾಡುವಂತಾಗಿವೆ. ಮಾತಿಗಿಂತಲೂ ಹಾಡು ಹೆಚ್ಚು ಸಂವಹನಕ್ಕೆ ಒಪ್ಪಿಕೊಳ್ಳುವ ಮಾಧ್ಯಮ ನವೋದಯದ ಗೇಯತೆಗಿಂತಲೂ ಭಿನ್ನವಾಗಿ ದಲಿತ ಕವಿಗಳ ಕಾವ್ಯ ಗೇಯತೆಯನ್ನು ಹೊಂದಿರುವುದು ಇನ್ನೂ ವಿಶಿಷ್ಟವೆನಿಸಿದೆ. ಕಾವ್ಯ ಜನತೆಯದೇ ಆಗಿ, ಕನ್ನಡ ಪರಂಪರೆಯ ಕಾವ್ಯಕ್ಕೆ ಹೊಸ ಚಿಗುರು ಅಷ್ಟೇ ಅಲ್ಲ, ಹೊಸ ಹೂವು, ಹಣ್ಣನ್ನು ನೀಡಿತು ಎನ್ನಬೇಕು.

**ದಲಿತ ಕಾವ್ಯದ ಗೇಯತೆ**

'ಸಮಾಜಮುಖಿ ಕಾವ್ಯರಚನೆಯಲ್ಲಿ ಕವಿಯು ತನ್ನವರಿಗೆ ಏನನ್ನು ಹೇಳಬೇಕು. ಸಮಾಜದ ಮೇಲೆ ಅದು ಹೇಗೆ ಪ್ರಭಾವ ಬೀರಬೇಕು ಎಂಬ ಉದ್ದೇಶವನ್ನು ಹೊಂದಿರುತ್ತಾನೆ. ಅದಕ್ಕಾಗಿ ತಾನು ಪರಿಣಾಮಕಾರಿಯಾಗುವಂಥ ಮಾಧ್ಯವನ್ನೇ ಆಯ್ದುಕೊಳ್ಳುವನು. ವಿಚಾರಗಳನ್ನು ಪರಿಣಾಮಕಾರಿಗೊಳಿಸುವ ಶಕ್ತಿ ಕಾವ್ಯಕ್ಕೆ ಇದೆ. ಕಾವ್ಯ ಸ್ವಕೀಯ ಪರಕೀಯ ಅನುಭವಗಳನ್ನು ಜೀವನ ಪ್ರೀತಿಯಿಂದ ದಾಖಲಿಸಿಕೊಡುವ ಸೂಕ್ಷ್ಮ ಅಂತರ್ಯಾಣದ ಉತ್ಪನ್ನವಾಗಿದೆ ಎಂದು ಹೇಳಲಾಗುತ್ತದೆ. ಅಷ್ಟೇ ಅಲ್ಲದೆ ಅದು ರಸಗ್ರಹಣಕ್ಕೆ ಸಂಕೇತವಾದುದು ಆಗಿದೆ.

ಕಾವ್ಯ ರಚಿಸುವುದು ಪ್ರಥಮತಃ ಕವಿಗೆ ಅಂತರಂಗದ ಖುಷಿಯಾದರೂ, ಓದುಗನ ನಿಲುವಿಗೆ ಅದೊಂದು ಮಾನಸಿಕ ರುಚಿಯಾಗಿ ಪಾಲ್ಗೊಳ್ಳುತ್ತದೆ. ಜೀವ ವಿವೇಚನೆಯ ಪಾತಳಿಯಾಗಿ ಎದುರಾಗುತ್ತದೆ. ಹೀಗೆ ಹಲವು ಕಾರಣಗಳು ಕಾವ್ಯಕ್ಕೆ ಇರುವವು. ಆಧುನಿಕ ಕಾವ್ಯ ಪರಂಪರೆಯ ಭಾಗವಾಗಿಯೇ ಬೆಳೆದುಬಂದ ದಲಿತ ಕಾವ್ಯ ಕನ್ನಡ ಕಾವ್ಯ ಲಕ್ಷಣಗಳನ್ನು ಅರಗಿಸಿಕೊಂಡು ವಿಶಿಷ್ಟವಾಗಿ ಅಭಿವ್ಯಕ್ತಿಯಾಗಿದೆ ಎಂಬುದನ್ನು ಮರೆಯಬಾರದು. ನವೋದಯ ಸಂದರ್ಭದಲ್ಲಿ ಬಿ.ಎಂ.ಶ್ರೀ.ಯವರು ಹೇಳಿರುವ "ಜನವಾಣಿ ಬೇರು ಕವಿವಾಣಿ ಹೂ" ಎಂಬ ಅನ್ವರ್ಥವು ದಲಿತ ಕಾವ್ಯಕ್ಕೂ ಸಲ್ಲುತ್ತದೆ. ಜನಸಾಮಾನ್ಯರನ್ನು ದೃಷ್ಟಿಯಾಗಿಟ್ಟುಕೊಂಡ ರಚನೆಗೊಂಡ ದಲಿತಕಾವ್ಯ ಜನಪದರ ಗೇಯ ಗುಣವನ್ನೂ ಹೊಂದಿದೆ. *ಉದಾ:*

***"ನಾಡ ನಡುವಿನಿಂದ***
***ನೋವಿನ ಕೂಗೇ***
***ಆಕಾಶದ ಅಗಲಕ್ಕೂ***
***ಕೋಟಿ ಕೋಟಿ ಕಪ್ಪು ಜನರ***
***ಮೊಟ್ಟ ಮೊದಲ ಮಾತೇ***
***ನೀರಿನಾಚೆ ಮೋಡದಾಚೆ ಮೊಳಗಿದಂಥ ಘೋಷವೇ"*** [6]

(ಅಂಬೇಡ್ಕರ್: ಹೊಲೆಮಾದಿಗರ ಹಾಡು ಸಂಕಲನದಿಂದ)

ಈ ಮೇಲಿನ ಕವಿತೆ ಖ್ಯಾತ ದಲಿತ ಕವಿ ಸಿದ್ದಲಿಂಗಯ್ಯನವರದು. ದಲಿತ–ಬಂಡಾಯ ಚಳವಳಿ

ಸಂದರ್ಭದಲ್ಲಿ ಬರೆದದ್ದು. ಸಿದ್ಧಲಿಂಗಯ್ಯನವರ ಇನ್ನೂ ಎಷ್ಟೋ ಕವಿತೆಗಳು. ದಲಿತ ಚಳವಳಿಯ ಸಂದರ್ಭದಲ್ಲಿ ಶಕ್ತಿ ತುಂಬುವ ಗೀತೆಗಳಾಗಿ ಬೆಳೆದವು.

***"ಊರ ಹೊರಗೆ ಗಿಡಗಳಲ್ಲಿ***
***ಹಾಳು ಬಿದ್ದ ಭಾವಿಗಳಲ್ಲಿ***
***ತೂಗಿದವೂ ಮುಂಡಗಳ***
***ತೇಲಿದವೂ ರುಂಡಗಳು***
***ಕೊನೆಯಿಲ್ಲದೆ ಈ ಕಥೆಗೆ?***
***ಬೆಳಕಿಲ್ಲವೆ ನಮ್ಮ ಬದುಕಿಗೆ?"*** [7]

ಈ ಸಾಲುಗಳು ಇಂದಿಗೂ ದಲಿತರ ಬದುಕು ಭಯದಿಂದಲೇ ಕೂಡಿದೆ ಎಂಬುದನ್ನು ಸಾರುತ್ತವೆ. ಈ ದುಷ್ಟ ವ್ಯವಸ್ಥೆಯ ವಿರುದ್ಧ ಸಾಮಾಜಿಕ ಸಂಘರ್ಷಕ್ಕಾಗಿ ದಲಿತರು ಧ್ವನಿ ಎತ್ತಿದರೆ ಅವರಿಗೆ ಯಾವ ಸ್ಥಿತಿಯು ಒದಗುತ್ತದೆಂಬುದನ್ನು ಅರವಿಂದ ಮಾಲಗತ್ತಿ ಅವರು ಸ್ಪಷ್ಟಪಡಿಸಿದ್ದಾರೆ. ಹಾಗಾದರೆ ಶಿಕ್ಷಣ, ಸಂಘಟನೆ ಮತ್ತು ಹೋರಾಟ ಎಂಬ ಬಾಬಾ ಸಾಹೇಬ್ ಅಂಬೇಡ್ಕರ ಅವರ ಮೂಲ ಧ್ಯೆಯಗಳು ಇಂದಿಗೂ ಸಹ ಪೂರ್ಣ ಪ್ರಮಾಣದಲ್ಲಿ ಫಲಿತಗಳನ್ನು ಕಾಣಲು ಸಾಧ್ಯವಾಗುತ್ತಿಲ್ಲವೆನಿಸಿದೆ.

### ಪ್ರತಿಮೆ–ಸಂಕೇತಗಳು–ರೂಪಕ

ಕವಿತೆಯೊಂದರಲ್ಲಿ ಪ್ರತಿಮೆಯು ಸ್ವತಂತ್ರವಾಗಿ ಬಳಕೆಯಾಗಿದ್ದರೆ, ಅದರದ್ದೇ ಆದ ವೈಶಿಷ್ಟಗಳನ್ನು ಗುರುತಿಸಲು ಆಗುವಂತಿದ್ದರೆ, ತನ್ನ ಅರ್ಥವ್ಯಾಪ್ತಿಯನ್ನು ಆ ಪ್ರತಿಮೆಯು ತಾನೇ ನಿರ್ಧರಿಸಿಕೊಳ್ಳುವಂತಿದ್ದರೆ ಆಗ ಅದು ಬಹಳ ಮಟ್ಟಿಗೆ ಒಂದು ಸಂಕೇತವಾಗುತ್ತದೆ.

ಉದಾ: ಒಂದು ಕವಿತೆ ಮರವನ್ನು ವರ್ಣಿಸಬಹುದು, ಅಲ್ಲಿ ಮರ, ಮರದ ಆಕಾರ, ಕೊಂಬೆ. ರೆಂಬೆ, ಬಂದು ಕೂಡುವ ಹಕ್ಕಿ ಇತ್ಯಾದಿಗಳನ್ನು ಚಿತ್ರಿಸಿ ಕವಿಯ ಮನಸ್ಥಿತಿಯನ್ನು ಸೂಚಿಸಬಹುದು. ಇಲ್ಲಿ ನಿಜವಾದ ಮರವನ್ನು ಕುರಿತು ವಾಚ್ಯಾರ್ಥದಲ್ಲಿ ಕವಿ ಹೇಳಿರದೆ ಸೂಚ್ಯಾರ್ಥದಲ್ಲಿ ಮರವನ್ನು ಪ್ರತಿಮೆ–ಸಂಕೇತವಾಗಿಸಿಕೊಂಡು ಒಂದು ಅನುಭವವನ್ನು ಹೇಳಲು ಹೊರಟವನಾಗಿರುತ್ತಾನೆ. ಇಂಥ ಒಂದು ಸಂಕೇತ ಭಾವ ಸೂಚಕ ಪ್ರತಿಮೆಯ ರೂಪ ತಾಳಿ ಇಡೀ ಕವಿತೆಯನ್ನು ಭಾವ ಸ್ತಿತಿಗೆ ಒಯ್ಯುವುದು. ಹೊಸಗನ್ನಡದ ನವೋದಯ ಕಾವ್ಯ, ನವ್ಯಕಾವ್ಯಗಳು ಅನೇಕ ವಿಭಿನ್ನ ಪ್ರತಿಮೆ ಈ ಸಂಕೇತ ರೂಪಕಗಳಿಂದ ಕಾವ್ಯದ ಅರ್ಥ ಸ್ವಾರಸ್ಯ ದರ್ಶನ ಹೆಚ್ಚಿಸಿರುವಂತೆ ಇವುಗಳ ರೂಪ–ಸ್ವರೂಪ ದಲಿತ ಕಾವ್ಯದಲ್ಲಿಯೂ ಕಾಣುತ್ತೇವೆ.

ಕವಿ ತಾಯ್‌ರಾಜ್ ಮರ್ಚಟ್ಟಾಳ ಅವರ 'ಚರಿತೆ' ಸಂಕಲನದ 'ರಕ್ಷಣೆ' ಎನ್ನುವ ಕವಿತೆಯಲ್ಲಿ ಈ ದೇಶದ ನಿನ್ನ ವರ್ಗ ಜಾತಿಗೆ ಸೇರಿದ ಬಡವರು ಉಳ್ಳವರ ಪಾಲಿಗೆ ಕಾಗೆಗಳು ನಮ್ಮವರ ಶೋಷಣೆಗೆ, ಸಾವಿಗೆ ನಾವೇ ಮರುಗಬೇಕು ಎಂಬುದನ್ನು ಅವರ ಕವಿತೆಯ ಈ ಸಾಲುಗಳು ಧ್ವನಿಸುತ್ತವೆ.

***"ವಿದ್ಯುತ್ ಸರ್ಕ್ಯೂಟ್‌ಗೆ***
***ಸತ್ತ ಕಾಗೆಯ ಸುತ್ತ ಸುತ್ತಾಡಲು***
***ಹಿಂಡು ಹಿಂಡು***
***ಕಾಗೆಯ***
***ಆರ್ತನಾದ"***

'ಸತ್ತ ಕಾಗೆ' ಶೋಷಿತರನ್ನು ಸಂಕೇತಿಸುವ ಪ್ರತಿಮೆಯಾಗಿ ಕವಿತೆಯಲ್ಲಿ ಮೂಡಿಬಂದಿದೆ. ನಮ್ಮ ಸಾವಿಗೆ ನಾವೇ ಆರ್ತನಾದ ಮಾಡುವ ಧಾರಣತೆ ಕವಿತೆಯ ಆಶಯವಾಗಿ ತೋರಿದೆ.

### ಉಪಸಂಹಾರ

ಸಾವಿರಾರು ವರ್ಷಗಳ ಸುದೀರ್ಘ ಪರಂಪರೆಯ ಹಿನ್ನೆಲೆಯಲ್ಲಿ ಗಮನಿಸಿದರೆ ಆಧುನಿಕ ಕನ್ನಡ ಸಾಹಿತ್ಯ ತುಂಬಾ ವಿಶಿಷ್ಟವೂ, ಸಂಕೀರ್ಣವೂ ಆಗಿದ್ದು ಕಂಡು ಬರುತ್ತದೆ. ಏಕೆಂದರೆ, ಆಧುನಿಕ ಕನ್ನಡ ಸಾಹಿತ್ಯ ತನ್ನ ಪರಂಪರೆ ಮತ್ತು ಬಾಹ್ಯ ಪ್ರೇರಣೆ, ಪ್ರಭಾವಗಳನ್ನು ಅಳವಡಿಸಿಕೊಂಡೂ, ಅದಕ್ಕಿಂತ ಬೇರೆಯಾದ ರೂಪ, ಪ್ರಕಾರಗಳನ್ನು ಸೃಷ್ಟಿಸಿ ಕನ್ನಡ ಸಾಹಿತ್ಯಕ್ಕೆ ತನ್ನದೇ ಆದ ಕೊಡುಗೆಯನ್ನು ನೀಡಿದ್ದು ಸುಳ್ಳಲ್ಲ.

ಸಾಮಾನ್ಯವಾಗಿ ಹೊಸಗನ್ನಡದ ಉಗಮವನ್ನು ಬ್ರಿಟಿಷ್ ವಸಾಹತುಶಾಹಿ ಆಡಳಿತ ಜಾರಿಗೆ ತಂದ ಹೊಸ ಶಿಕ್ಷಣ ಪದ್ಧತಿ. ಹೊಸ ಹೊಸ ಸಾಹಿತ್ಯ ಪ್ರಕಾರಗಳ ಪ್ರಭಾವದಿಂದ ಆಯಿತೆಂದು ಸಾಮಾನ್ಯವಾಗಿ ಅಭಿಪ್ರಾಯ ವಿದ್ವಾಂಸರಲ್ಲಿ ಕಾಣುತ್ತೇವೆ. ಆದರೆ ಈ ಅಭಿಪ್ರಾಯ ಮೇಲ್ನೋಟಕ್ಕೆ ನಿಜವೇ ಅನ್ನಿಸಿದರೂ ಕೂಡ ಸಂಪೂರ್ಣ ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಸ್ವಾತಂತ್ರ್ಯಪೂರ್ವದಲ್ಲಿ ಕರ್ನಾಟಕ ಬೇರೆ ಬೇರೆ ಆಡಳಿತ ವ್ಯವಸ್ಥೆಯಲ್ಲಿ ಹರಿದು ಹಂಚಿ ಹೋಗಿತ್ತೆಂಬುದನ್ನು ಬಲ್ಲೆವು. ಹೀಗಿದ್ದಾಗ ಜನಜೀವನ, ಆಡಳಿತ, ಶಿಕ್ಷಣ, ಸಾಹಿತ್ಯ ಕಲೆ. ಸಂಸ್ಕೃತಿಗಳ ಮೇಲೆ ಇಸ್ಲಾಂ ಧರ್ಮ, ಉರ್ದು, ಪರ್ಶಿಯನ್, ಮರಾಠಿ ಭಾಷೆಗಳ ಪ್ರಭಾವ ನಿಚ್ಚಳವಾಗಿತ್ತು. ಇಲ್ಲಿ ಕನ್ನಡ ಕೇವಲ ಮನೆ ಭಾಷೆಯಾಗಿ ಬಳಸಲ್ಪಡುತ್ತಿರುವುದರಿಂದಾಗಿ ಆ ಘಟ್ಟದಲ್ಲಿ ಸಾಹಿತ್ಯ ಚಟುವಟಿಕೆಗಳು ರಚನೆಯಾಗಿ ಅಷ್ಟಾಗಿ ಬೆಳೆದುಬರಲಿಲ್ಲ ಎಂದು ಹೇಳಬಹುದು.

ಆಧುನಿಕ ಕನ್ನಡ ಸಂದರ್ಭದಲ್ಲಿ ನವೋದಯ, ಪ್ರಗತಿಶೀಲ, ನವ್ಯ, ದಲಿತ–ಬಂಡಾಯ ಹಾಗೂ ಬಂಡಾಯೋತ್ತರಗಳೆಂಬ ಕಾಲಘಟ್ಟಗಳ ಸನ್ನಿವೇಶಗಳನ್ನು ನಿರ್ಮಾಣ ಮಾಡಿಕೊಳ್ಳುತ್ತ ಸುದೀರ್ಘವಾಗಿ ಬೆಳೆದುಬಂದಿದ್ದೆ ಆದರೆ, ಕವಿಗಳು ಈ ಸಾಹಿತ್ಯ ಘಟ್ಟಗಳ ಜೊತೆಗೆ ತಮ್ಮನ್ನು ಗುರುತಿಸಿಕೊಂಡು ಸಾಹಿತ್ಯ ರಚನೆ ಮಾಡುತ್ತ ಬಂದಿರುವುದನ್ನು ಗಮನಿಸಿದರೆ ನಮಗೆ ತುಂಬಾ ನಿರಾಶೆಯುಂಟಾಗುತ್ತದೆ. ಏಕೆಂದರೆ ಸ್ವಾತಂತ್ರ್ಯಪೂರ್ವದಿಂದ ಹಿಡಿದು ಸ್ವಾಂತಂತ್ರ್ಯ ಬಂದು ಸುಮಾರು ಎರಡು ದಶಕಗಳವರೆಗೆ ಕನ್ನಡ ಶಿಕ್ಷಣ ಮರೀಚಿಕೆಯಾಗಿತ್ತು. 1956ರಲ್ಲಿ ಕರ್ನಾಟಕ ರಾಜ್ಯ ನಿರ್ಮಾಣಗೊಂಡ ನಂತರ ಕನ್ನಡ ಭಾಷೆ ಶಿಕ್ಷಣದ ಮಾಧ್ಯಮ ಭಾಷೆಯಾಯಿತು.

ಅರವತ್ತು–ಎಪ್ಪತ್ತರ ದಶಕದ ಸುಮಾರಿಗೆ ಕನ್ನಡ ಮಾಧ್ಯಮ ಶಿಕ್ಷಣದ ಸೌಲಭ್ಯವನ್ನು ಪಡೆದುಕೊಂಡ ಹೋರಾಟ ಮನೋಭಾವದ ಕವಿ, ಲೇಖಕರು ಈವರೆಗೆ ಬೆಳೆದುಬಂದಿದ್ದ ವಿವಿಧ ಕಾಲಘಟ್ಟಗಳ ಸಾಹಿತ್ಯವನ್ನು ಪರಿಚಯಿಸಿಕೊಂಡರು. ಕನ್ನಡದಲ್ಲಿ ತಾವೂ ಬರೆಯಲು ತೊಡಗಿದರು. ಹೊಸ ತಲೆಮಾರಿನ ಯುವ ಕವಿ, ಲೇಖಕರು ತಮ್ಮ ಬರವಣಿಗೆ ಪ್ರಾರಂಭಿಸಿದ ಸಂದರ್ಭದಲ್ಲಿ ಕನ್ನಡ ಸಾಹಿತ್ಯವು ನಾಲ್ಕನೆಯ ಘಟ್ಟವಾದ ದಲಿತ–ಬಂಡಾಯದ ಏರಿಕೆಯ ಕಾಲದಲ್ಲಿತ್ತು ಎಂದು ಹೇಳಬಹುದಾಗಿದೆ.

**ಕೊನೆಟಿಪ್ಪಣಿಗಳು**

1. ಪೂಜಾರ, ವಿ.ಜಿ. (2008). *ಕನ್ನಡ ವ್ಯಾಕರಣ ಮತ್ತು ಭಾಷೆ.* ಚೇತನ ಪ್ರಕಾಶನ. ಪುಟ. 85.
2. ಅದೇ. ಪುಟ.85
3. ಶಿವರುದ್ರಪ್ಪ, ಜಿ.ಎಸ್. (1982). *ಪ್ರತಿಕ್ರಿಯೆ.* ಪುರೋಗಾಮಿ ಪ್ರಕಾಶನ. ಮೈಸೂರು. ಪುಟ. 26,
4. ಗುಂಡಣ್ಣ ಕಲಬುರ್ಗಿ. (2000). *ಕಣವಿ ಮತ್ತು ಆಧುನಿಕ ಕಾವ್ಯ ಪರಂಪರೆ.* ಸೌಜನ್ಯ ಪ್ರಕಾಶನ. ಪುಟ.3.
5. ನಾಗಭೂಷಣ ಸ್ವಾಮಿ, ಓ.ಎಲ್. (1983). *ವಿಮರ್ಶೆಯ ಪರಿಭಾಷೆಯಲ್ಲಿ.* ಪರಿಸರ ಸಾಹಿತ್ಯ ಪ್ರಕಾಶನ, ಪುಟ. 51,
6. ಸಿದ್ದಲಿಂಗಯ್ಯ. (2010). *ನನ್ನ ಜನಗಳ ಮತ್ತಿತರ ಕವಿತೆಗಳು.* ಕನ್ನಡ ಸಂಸ್ಕೃತಿ ಇಲಾಖೆ, ಪುಟ. 27
7. ಅರವಿಂದ ಮಾಲಗತ್ತಿ. (1981). *ಮೂಕನಿಗೆ ಬಾಯಿ ಬಂದಾಗ.* ಚೇತನ ಬುಕ್‌ಹೌಸ್, ಪುಟ.40.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 43-46
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಮಾನವ ಕಳ್ಳಸಾಗಣಿಕೆಗೆ ಒಳಗಾದವರಿಗೆ ಪುನರ್ವಸತಿ ಕೇಂದ್ರದಿಂದ ಆಗುವ ಪ್ರಯೋಜನಗಳ ಕುರಿತು ಒಂದು ಅಧ್ಯಯನ

**ಶೃತಿ[1] ಮತ್ತು ಡಾ. ಪಟವರ್ಧನ ರಾಠೋಡ್[2]**
ಸಂಶೋಧನಾ ವಿದ್ಯಾರ್ಥಿ[1], ಸಹಾಯಕ ಪ್ರಾಧ್ಯಾಪಕರು[2]
ಸಮಾಜಕಾರ್ಯ ಅಧ್ಯಯನ ವಿಭಾಗ, ದಾವಣಗೆರೆ ವಿಶ್ವವಿದ್ಯಾನಿಲಯ, ಶಿವಗಂಗೋತ್ರಿ, ದಾವಣಗೆರೆ.

**Abstract:**
*ಮಾನವ ಕಳ್ಳಸಾಗಣಿಕೆಗೆ ಒಳಗಾದ ಮಹಿಳೆಯರು ಪುನರ್ವಸತಿ ಕೇಂದ್ರದಲ್ಲಿ ಆಶ್ರಯ ಪಡೆದ ಮೇಲೆ ಅವರ ಜೀವನದಲ್ಲಿ ಆಗುವ ಬದಲಾವಣೆಯನ್ನು ಕುರಿತು ತಿಳಿಯುವುದು ಈ ಅಧ್ಯಯನದ ಮುಖ್ಯಗುರಿಯಾಗಿದೆ. ಮಾನವ ಕಳ್ಳಸಾಗಣಿಕೆ ನಮ್ಮದೇಶದ ಸಮಸ್ಯೆ ಮಾತ್ರವಲ್ಲ ಜಾಗತಿಕ ಸಮಸ್ಯೆಯೂ ಆಗಿದೆ. ಮಹಿಳೆಯರ ಸಾಗಾಣಿಕೆಯು ಒಂದು ಘೋರ ಅಪರಾಧವಾಗಿದೆ. ಸಾಮಾಜಿಕ ಅಸಮಾನತೆ, ತಾರತಮ್ಯತೆ, ಬಡತನ ಮತ್ತು ದುರ್ಬಲತೆ ಮಾನವ ಕಳ್ಳಸಾಗಣಿಕೆಗೆ ಕಾರಣವಾಗಿದೆ. ಕಳ್ಳಸಾಗಣೆಗೊಳಗಾದ ಮಹಿಳೆಯ ಘನತೆ ಮತ್ತು ಸುರಕ್ಷತೆಗೆ ಧಕ್ಕೆ ತರುವುದರ ಜೊತೆಗೆ ವೈಯಕ್ತಿಕ ಹಕ್ಕುಗಳನ್ನು ಉಲ್ಲಂಘಿಸುತ್ತದೆ. ಕಳ್ಳಸಾಗಣೆಯಿಂದ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಬಹಳಷ್ಟು ಮಹಿಳೆಯರು ತಮಗೆ ಅರಿವಿಲ್ಲದೆ ಹೊರದೇಶಗಳಿಗೆ ರವಾನೆಯಾಗುತ್ತಿದ್ದು, ಮಕ್ಕಳು ಕೂಡ ಬಲಿಪಶುಗಳಾಗುತ್ತಿದ್ದಾರೆ. ಇಂತಹ ಶೋಷಿತರಿಗೆ ನ್ಯಾಯ ಒದಗಿಸಲು ಹಾಗೂ ಕಾನೂನು ಚೌಕಟ್ಟಿನಲ್ಲಿ ರಕ್ಷಣೆ ಒದಗಿಸಲು ಪುನರ್ವಸತಿ ಕೇಂದ್ರಗಳು ಮುಖ್ಯ ಪಾತ್ರವಹಿಸುತ್ತವೆ. ಈ ಅಧ್ಯಯನವು ಕಳ್ಳಸಾಗಣೆಕೆಗೆ ಒಳಗಾದವರಿಗೆ ಪುನರ್ವಸತಿ ಕೇಂದ್ರದಿಂದ ಆಗುವ ಪ್ರಯೋಜನೆಗನ್ನು ಕುರಿತು ಪರಿಶೀಲಿಸುತ್ತದೆ.*

**Keywords:** *ಮಾನವ ಕಳ್ಳಸಾಗಣೆ, ಪುನರ್ವಸತಿ ಕೇಂದ್ರ, ಸರ್ಕಾರದ ಯೋಜನೆಗಳು, ಎನ್‌ಜಿಒಗಳ ಪಾತ್ರ.*

## ಪೀಠಿಕೆ

ಮಾನವ ಕಳ್ಳಸಾಗಣಿಕೆ ಎಂದರೆ ಬಲವಂತದ ದುಡಿಮೆ, ಲೈಂಗಿಕ ಶೋಷಣೆ, ಅಥವಾ ವಾಣಿಜ್ಯ ಶೋಷಣೆಯ ಉದ್ದೇಶಗಳಿಗಾಗಿ ಬಲ, ವಂಚನೆ ಅಥವಾ ಬಲವಂತದ ಮೂಲಕ ಜನರನ್ನು ಶೋಷಣೆ ಮಾಡುವುದನ್ನು ಒಳಗೊಂಡಿರುವ ಘೋರ ಅಪರಾಧ. ಮಾನವ ಕಳ್ಳಸಾಗಣೆಯ ಬಲಿಪಶುಗಳು ಪುರುಷರು, ಮಹಿಳೆಯರು ಅಥವಾ ಮಕ್ಕಳು ಆಗಿರಬಹುದು ಮತ್ತು ಅವರು ಸಾಮಾನ್ಯವಾಗಿ ದುರ್ಬಲ ವ್ಯಕ್ತಿಗಳಾಗಿರುತ್ತಾರೆ. ಅವರು ಶೋಷಣೆಗೆ ಒಳಗಾಗುವ ಸಂದರ್ಭಗಳಲ್ಲಿ ಮೋಸ ಹೋಗುತ್ತಾರೆ. ಕಾರ್ಖಾನೆಗಳು, ಫಾರ್ಮ್‌ಗಳು ಅಥವಾ ಗೃಹಬಳಕೆಯ ಗುಲಾಮಗಿರಿಯಲ್ಲಿ ಬಲವಂತದ ಕೆಲಸ, ಹಾಗೆಯೇ ಬಲವಂತದ ವೇಶ್ಯಾವಾಟಿಕೆ, ಬಲವಂತದ ಮದುವೆ ಅಥವಾ ಅಂಗಗಳ ಕಳ್ಳಸಾಗಣೆಯಂತಹ ಸಂದರ್ಭಗಳನ್ನು

***Please cite this article as:*** ಶೃತಿ ಮತ್ತು ಪಟವರ್ಧನ ರಾಠೋಡ್. (2024). ಮಾನವ ಕಳ್ಳಸಾಗಣಿಕೆಗೆ ಒಳಗಾದವರಿಗೆ ಪುನರ್ವಸತಿ ಕೇಂದ್ರದಿಂದ ಆಗುವ ಪ್ರಯೋಜನಗಳ ಕುರಿತು ಒಂದು ಅಧ್ಯಯನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್*, 3(3), 43–46

ಒಳಗೊಂಡಿರಬಹುದು. ಮಾನವ ಕಳ್ಳಸಾಗಣೆಯು ಮಾನವ ಹಕ್ಕುಗಳ ಗಂಭೀರ ಉಲ್ಲಂಘನೆಯಾಗಿದೆ ಮತ್ತು ಇದನ್ನು ಆಧುನಿಕ ಗುಲಾಮಗಿರಿ ಎಂದು ಕರೆಯಲಾಗುತ್ತದೆ.

**ಅಧ್ಯಯನದ ಉದ್ದೇಶಗಳು**

1. ಪುನರ್ವಸತಿ ಕೇಂದ್ರದಲ್ಲಿ ಸೇವೆಗಳನ್ನು ಪಡೆಯುವ ಮೊದಲು ಮತ್ತು ನಂತರ ಮಾನವ ಕಳ್ಳಸಾಗಣಿಕೆಗೆ ಒಳಗಾದವರ ಮಾನಸಿಕ ಆರೋಗ್ಯವನ್ನು ಮೌಲ್ಯಮಾಪನ ಮಾಡುವುದು.
2. ಶಿಕ್ಷಣ ಮತ್ತು ಉದ್ಯೋಗಾವಕಾಶಗಳ ಪ್ರವೇಶದ ಮೇಲೆ ಪುನರ್ವಸತಿಕೇಂದ್ರದ ಕಾರ್ಯಕ್ರಮಗಳ ಪ್ರಭಾವವನ್ನು ಮೌಲ್ಯಮಾಪನ ಮಾಡುವುದು.
3. ಪುನರ್ವಸತಿ ಕೇಂದ್ರದಿಂದ ಒದಗಿಸುವ ತರಬೇತಿ, ಕೌಶಲ್ಯ ಅಭಿವೃದ್ಧಿ, ಕಾನೂನು ನೆರವು ಮುಂತಾದ ಸೌಲಭ್ಯಗಳನ್ನು ಪರಿಶೀಲಿಸುವುದು.
4. ಮಾನವ ಕಳ್ಳಸಾಗಣೆಯಿಂದ ಬದುಕುಳಿದವರ ಸಮಗ್ರ ಅಭಿವೃದ್ಧಿಯಲ್ಲಿ ಪುನರ್ಸವಸತಿ ಕೇಂದ್ರಳು ಯಾವ ರೀತಿಯ ಪಾತ್ರವಹಿಸುತ್ತಿವೆ ಎಂಬುದನ್ನು ತಿಳಿದುಕೊಳ್ಳುವುದು.

**ಅಧ್ಯಯನ ವಿಧಾನ**

ಪ್ರಸ್ತುತ ಅಧ್ಯಯನವು ಆನುಷಂಗಿಕ/ಮಾಧ್ಯಮಿಕ ಮಾಹಿತಿ ಮೂಲವನ್ನು ಅವಲಂಬಿಸಿದೆ. ಮಾಧ್ಯಮಿಕ ಮಾಹಿತಿಯನ್ನು ರಾಷ್ಟೀಯ ಅಪರಾಧ ದಾಖಲೆಗಳ ಬ್ಯೂರೋ, ಕೇಂದ್ರ ಮತ್ತು ರಾಜ್ಯ ಸರ್ಕಾರದ ಗೃಹ ಇಲಾಖೆ ವರದಿಗಳು, ಗ್ರಂಥಗಳು, ಲೇಖನಗಳು, ಸಂಶೋಧನಾ ಪ್ರಬಂಧಗಳು ಹಾಗೂ ಅಂತರ್ಜಾಲದ ಮೂಲಕ ಸಂಗ್ರಹಿಸಿಕೊಳ್ಳಲಾಗಿದೆ.

**ವಿಷಯ ಮಂಡನೆ**

ಮಾನವ ಕಳ್ಳಸಾಗಣೆಯು ವಿಶ್ವಾದಾದ್ಯಂತ ಹೆಚ್ಚುತ್ತಿದ್ದು, ಇದೊಂದು ಪಿಡುಗಾಗಿ ಪರಿಣಮಿಸಿದೆ. ಮಾನವ ಕಳ್ಳಸಾಗಣೆಯ ಬಲಿಪಶುಗಳು ದೈಹಿಕ ಮತ್ತು ಮಾನಸಿಕ ಆಘಾತ, ಶೋಷಣೆ ಮತ್ತು ಬಲಾತ್ಕಾರ ಸೇರಿದಂತೆ ಊಹಿಸಲಾಗದ ದುಃಖವನ್ನು ಸಹಿಸಿಕೊಳ್ಳುತ್ತಾರೆ. ಇತ್ತೀಚಿನ ವರ್ಷಗಳಲ್ಲಿ ಮಾನವ ಕಳ್ಳಸಾಗಣೆಯನ್ನು ಎದುರಿಸುವ ಪ್ರಯತ್ನಗಳು ತೀವ್ರಗೊಂಡಿವೆ. ಅದರ ಭಾಗವಾಗಿ ಮಾನವ ಕಳ್ಳಸಾಗಣಿಕೆಗೆ ಒಳಗಾದವರಿಗೆ ಬದುಕು ರೂಪಿಸಲು ಸರ್ಕಾರ ಮತ್ತು ಸರ್ಕಾರೇತರ ಸಂಸ್ಥೆಗಳು ರಾಷ್ಟ್ರೀಯ ಮತ್ತು ಅಂತರಾಷ್ಟ್ರೀಯ ಮಟ್ಟದಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಅಗತ್ಯಗಳಿಗೆ ಅನುಗುಣವಾಗಿ ಪುನರ್ವಸತಿ ಕೇಂದ್ರಗಳ ಸ್ಥಾಪನೆಗಳನ್ನು ಸ್ಥಾಪಿಸಿ ವಿವಿಧ ರೀತಿಯ ಸೌಲಭ್ಯಗಳನ್ನು ಕಲ್ಪಿಸಲಾಗುತ್ತಿದೆ.

ಪುನರ್ವಸತಿ ಕೇಂದ್ರಗಳಲ್ಲಿ ಆರೈಕೆ, ಮಾನಸಿಕ ಸಮಾಲೋಚನೆ, ವೃತ್ತಿಪರ ತರಬೇತಿ ಮತ್ತು ಕಾನೂನು ನೆರವು ಸೇರಿದಂತೆ ಹಲವಾರು ಸೇವೆಗಳನ್ನು ಒದಗಿಸಲಾಗುತ್ತದೆ. ಈ ಕೇಂದ್ರಗಳು ಅವರ ಜೀವನವನ್ನು ಪುನರ್ನಿರ್ಮಿಸಲು ಮತ್ತು ಅವರ ಸ್ವಾತಂತ್ರ್ಯವನ್ನು ಮರಳಿ ಪಡೆಯಲು ಸಹಾಯ ಮಾಡುವಲ್ಲಿ ಪ್ರಮುಖ ಪಾತ್ರವನ್ನು ವಹಿಸುತ್ತವೆ.

**ಮಾನವ ಕಳ್ಳಸಾಗಣೆಗೆ ಒಳಗಾದವರಿಗೆ ಪುನರ್ವಸತಿಕೇಂದ್ರದಿಂದ ಆಗುವ ಪ್ರಯೋಜನಗಳು**

***ಸಮಗ್ರ ಬೆಂಬಲ:*** ವೈದ್ಯಕೀಯಆರೈಕೆ, ಮಾನಸಿಕ ಬೆಂಬಲ, ಕಾನೂನು ನೆರವು ಮತ್ತು ವೃತ್ತಿಪರತರಬೇತಿ ಸೇರಿದಂತೆ ಮಾನವ ಕಳ್ಳಸಾಗಣಿಕೆಗೆ ಒಳಗಾದವರ ಅಗತ್ಯಗಳಿಗೆ ಅನುಗುಣವಾಗಿ ಸಮಗ್ರ ಸೇವೆಗಳನ್ನು ಒದಗಿಸುತ್ತಾರೆ.

***ಸುರಕ್ಷತೆ ಮತ್ತು ಭದ್ರತೆ:*** ಪುನರ್ವಸತಿ ಕೇಂದ್ರಗಳು ಸುರಕ್ಷಿತ ವಾತವರಣವನ್ನು ಒದಗಿಸುತ್ತದೆ, ಕೇಂದ್ರದಲ್ಲಿ ಆಶ್ರಯ ಪಡೆದವರಿಗೆ ಶೋಷಣೆ ಅಥವಾ ಹಾನಿಯ ಭಯವಿಲ್ಲದೆ ತಮ್ಮ ಆಘಾತದಿಂದ ಚೇತರಿಸಿಕೊಳ್ಳಬಹುದು.

***ಸಬಲೀಕರಣ:*** ಪುನರ್ವಸತಿ ಕೇಂದ್ರಗಳು ಮಾನವ ಕಳ್ಳಸಾಗಣಿಕೆಗೆ ಒಳಗಾದವರ ಜೀವನವನ್ನು ಪುನರ್ನಿರ್ಮಿಸಲು ಮತ್ತು ಸ್ವಾತಂತ್ರ್ಯವನ್ನು ಮರಳಿ

ಪಡೆಯಲು ಅಗತ್ಯವಿರುವ ಕೌಶಲ್ಯ ಮತ್ತು ಸಂಪನ್ಮೂಲಗಳೊಂದಿಗೆ ಸಜ್ಜುಗೊಳಿಸುವ ಮೂಲಕ ಅವರನ್ನು ಸಬಲಗೊಳಿಸುತ್ತವೆ.

***ಮರು–ಸಾಗಾಣಿಕೆತಡೆಗಟ್ಟುವಿಕೆ:*** ಕಳ್ಳಸಾಗಣೆಯ ಮೂಲ ಕಾರಣವನ್ನು ಪರಿಹರಿಸುವ ಮೂಲಕ ಮತ್ತು ಮಾನವ ಕಳ್ಳಸಾಗಣಿಕೆಗೆ ಒಳಗಾದವರಿಗೆ ಬೆಂಬಲವನ್ನು ಒದಗಿಸುವ ಮೂಲಕ, ಕೇಂದ್ರಗಳು ಮರು–ಸಂಚಾರದ ಅಪಾಯವನ್ನು ಕಡಿಮೆ ಮಾಡಲು ಸಹಾಯ ಮಾಡುತ್ತದೆ.

***ಕಾನೂನು ನೆರವು:*** ಮಾನವ ಕಳ್ಳಸಾಗಣೆಯ ಬಲಿಪಶುಗಳಿಗೆ ಸಾಮಾನ್ಯವಾಗಿ ಸಂಕೀರ್ಣ ಕಾನೂನು ವ್ಯವಸ್ಥೆಗಳನ್ನು ಮಾಡಲು ವ್ಯಾಪಕವಾದ ಕಾನೂನು ಬೆಂಬಲ ಬೇಕಾಗುತ್ತದೆ. ಪುನರ್ವಸತಿ ಕೇಂದ್ರಗಳು ನೀಡುತ್ತವೆ.

***ಶಿಕ್ಷಣ ಮತ್ತು ವೃತ್ತಿಪರತರಬೇತಿ:*** ಸಂತ್ರಸ್ತರು ತಮ್ಮ ಜೀವನವನ್ನು ಪುನರ್ನಿರ್ಮಿಸಲು ಶಿಕ್ಷಣ ಮತ್ತು ವೃತ್ತಿಪರ ತರಬೇತಿಯನ್ನು ಪುನರ್ವಸತಿ ಕೇಂದ್ರಗಳು ಒದಗಿಸುತ್ತವೆ.

***ಸಾಮಾಜಿಕ ಮರುಸಂಘಟನೆ:*** ಮಾನವ ಕಳ್ಳಸಾಗಣಿಕೆಗೆ ಒಳಗಾದವರು ತಮ್ಮ ಸ್ವಾತಂತ್ರ್ಯ ಮತ್ತು ಸಾಮಾಜಿಕ ಸ್ಥಿರತೆಯನ್ನು ಮರಳಿ ಪಡೆಯಲು ಸಹಾಯ ಮಾಡಲು ಅವರು ಸೇವೆಗಳನ್ನು ನೀಡುತ್ತಾರೆ.

ಭಾರತದಲ್ಲಿ ಮಾನವ ಕಳ್ಳಸಾಗಣೆ ಸಿತ್ಥಿಗತಿಗಳು ರಾಷ್ಟೀಯ ಅಪರಾಧ ದಾಖಲೆಗಳ ಬ್ಯೂರೋ (ಎನ್‌ಸಿಆರ್‌ಬಿ) ಅಂಕಿ ಅಂಶಗಳ ಪ್ರಕಾರ 2022 ರಲ್ಲಿ 2189 ಮಾನವ ಕಳ್ಳಸಾಗಣೆ ಪ್ರಕರಣಗಳನ್ನು ದಾಖಲಿಸಲಾಗಿದೆ. ಒಟ್ಟು 6,533 ಸಂತ್ರಸ್ಥರಲ್ಲಿ 4,062 ಮಹಿಳೆಯರು ಮತ್ತು 2,471 ಪುರುಷರಿದ್ದಾರೆ. ಇವರಲ್ಲಿ 2,877 ಅಪ್ರಾಪ್ರ ವಯಸ್ಕರಿದ್ದಾರೆ. 2021 ರಲ್ಲಿ ಹುಡುಗಿಯರಿಗಿಂತ (1,307) ಹೆಚ್ಚು ಅಪ್ರಾಪ್ತ ವಯಸ್ಸಿನ ಹುಡುಗರು (1570) ಮಾನವ ಕಳ್ಳಸಾಗಣಿಕೆಗೆ ಒಳಗಾಗಿದ್ದಾರೆ.

ಮಾನವ ಕಳ್ಳಸಾಗಣೆ ಪ್ರಕರಣಗಳ ವರದಿ ಪ್ರಕಾರ ತೆಲಂಗಾಣ, ಮಹಾರಾಷ್ಟ್ರ ಮತ್ತು ಅಸ್ಸಾಂನಲ್ಲಿ 2021 ರಲ್ಲಿ ಮಾನವ ಕಳ್ಳಸಾಗಣಿಕೆಯ ಹೆಚ್ಚಿನ ಪ್ರಕರಣಗಳು ದಾಖಲಾಗಿವೆ.

## ಮಾನವ ಕಳ್ಳಸಾಗಣೆಯ ವಿವಿಧ ರೂಪಗಳು

***ಬಲವಂತದ ಕೆಲಸ:*** ಕೃಷಿ, ನಿರ್ಮಾಣ, ಮನೆಕೆಲಸ ಮತ್ತು ಉತ್ಪಾದನೆಯಂತಹ ಕೈಗಾರಿಗೆಗಳಲ್ಲಿ ಬಲವಂತವಾಗಿ ದುಡಿಸಿಕೊಳ್ಳುವುದು.

***ಲೈಂಗಿಕ ಶೋಷಣೆ:*** ವ್ಯಕ್ತಿಗಳು, ವಿಶೇಷವಾಗಿ ಮಹಿಳೆಯರು ಮತ್ತು ಮಕ್ಕಳು, ವೇಶ್ಯಾವಾಟಿಕೆ ಮತ್ತು ಅಶ್ಲೀಲತೆ ಸೇರಿದಂತೆ ವಾಣಿಜ್ಯ ಲೈಂಗಿಕ ಶೋಷಣೆಗಾಗಿ ಕಳ್ಳಸಾಗಣೆ ಮಾಡಲಾಗುತ್ತದೆ.

***ಮಕ್ಕಳ ಕಳ್ಳಸಾಗಣೆ:*** ಬಾಲ ಕಾರ್ಮಿಕರು, ಬಲವಂತದ ಭಿಕ್ಷಾಟನೆ, ಬಾಲ್ಯವಿವಾಹ, ದತ್ತು ವಂಚನೆಗಳು ಮತ್ತು ಲೈಂಗಿಕ ಶೋಷಣೆ ಸೇರಿದಂತೆ ವಿವಿಧ ಉದ್ದೇಶಗಳಿಗಾಗಿ ಮಕ್ಕಳನ್ನು ಸಾಗಾಣಿಕೆ ಮಾಡಲಾಗುತ್ತದೆ.

***ಅಂಗಗಳ ಕಳ್ಳಸಾಗಣೆ:*** ಅಂಗಗಲ ಕಳ್ಳಸಾಗಣೆಯು ಮೂತ್ರಪಿಂಡಗಳು, ಯಕೃತ್ತು ಮತ್ತು ಕಾರ್ನಿಯಾಗಳಂತಹ ಅಂಗಗಳ ಅಕ್ರಮ ವ್ಯಾಪಾರವನ್ನು ಕಸಿ ಉದ್ದೇಶಗಳಿಗಾಗಿ ಒಳಗೊಂಡಿರುತ್ತದೆ.

## ಉಪಸಂಹಾರ

ಮಾನವ ಕಳ್ಳಸಾಗಣೆಗೆ ಒಳಗಾದವರ ಚೇತರಿಕೆಯ ಪ್ರಕ್ರಿಯೆಯಲ್ಲಿ ಪುನರ್ವಸತಿ ಕೇಂದ್ರಗಳು ಅನಿವಾರ್ಯವಾಗಿದೆ. ದೈಹಿಕಆರೋಗ್ಯ, ಮಾನಸಿಕ ಯೋಗಕ್ಷೇಮ, ಕಾನೂನು ಸಮಸ್ಯೆಗಳು, ಶಿಕ್ಷಣ ಮತ್ತು ಸಾಮಾಜಿಕ ಮರುಸಂಘಟನೆಯನ್ನು ಪರಿಹರಿಸುವ ಮೂಲಕ ಈ ಕೇಂದ್ರಗಳು ಸಂತ್ರಸ್ಥರು ತಮ್ಮ ಜೀವನವನ್ನು ಪುನರ್ನಿರ್ಮಿಸಲು ಮತ್ತು ಅವರ ಸ್ವಾತಂತ್ರ್ಯವನ್ನು ಮರಳಿ ಪಡೆಯಲು ಸಹಾಯ ಮಾಡುತ್ತದೆ. ಪುನರ್ವಸತಿ ಕೇಂದ್ರಗಳು ಒದಗಿಸುವ ಸಮಗ್ರ ಮತ್ತು ಸಹಾನುಭೂತಿಯ ಕಾಳಜಿಯು

ಶೋಷಣೆಯನ್ನು ತಡೆಗಟ್ಟಲು ಹಾಗೂ ಸಂತ್ರಸ್ಥರಿಗೆ ಶಕ್ತಿ ತುಂಬುವಲ್ಲಿ ನಿರ್ಣಾಯಕವಾಗಿದೆ.

**ಪರಾಮರ್ಶನ ಗ್ರಂಥಗಳು**


- ಬೂದಿಯಾನಿ–ಸಭೇರಿ, ರಾಜ, ಕೆ. ಆರ್., ಫೈನ್ಡಾಯ್, ಕೆ. ಸಿ., ಕೆರ್ಕೆಟ್ಟ, ಪಿ., & ಆನಂದ್, ವಿ. (2014). ಹ್ಯೂಮನ್ ಟ್ರಾಫಿಕಿಂಗ್ ಫಾರ್ ಆರ್ಗನ್ ರಿಮೂವಲ್ ಇನ್ ಇಂಡಿಯಾ. *ಟ್ರಾನ್ಸ್‌ಪ್ಲಾಂಟೇಷನ್,* 97(4), 380–384.
- ಬರುತ್, ಎಸ್. (2018). ಹ್ಯೂಮನ್ ಟ್ರಾಫಿಕಿಂಗ್ ಇನ್ ಇಂಡಿಯಾ. *ಇಂಟರ್ನ್ಯಾಷನಲ್ ಜರ್ನಲ್ ಆ ಟ್ರೆಂಡ್ ಇನ್ ಸೈಂಟಿಫಿಕ್ ರಿಸರ್ಚ್ ಅಂಡ್ ಡೆವಲಪ್ಮೆಂಟ್,* 2(3), 2453–2455.
- ವೈದುಷ್ಯ, ವಿ. (2016). ಹ್ಯೂಮನ್ ಟ್ರಾಫಿಕಿಂಗ್ ಇನ್ ಇಂಡಿಯಾ: ಎನ್ ಅನಾಲಿಸಿಸ್. *ಇಂಟರ್ನ್ಯಾಷನಲ್ ಜರ್ನಲ್ ಆ ಅಪ್ಲೈಡ್ ರಿಸರ್ಚ್,* 2(6), 168–171.
- ವಿರ್ಥ್, ಕೆ. ಈ., ಟೀಚೆಟ್ಗೆನ್, ಸಿಲ್ವೆರ್ಮ್ಯಾನ್, ಜೆ. ಜಿ., & ಮುರ್ರಾಯ್, ಮ್. ಬಿ. (2013). ಹೌ ಡಸ್ ಸೆಕ್ಸ್ ಟ್ರಾಫಿಕಿಂಗ್ ಇನ್ಕ್ರೀಜ್ ದಿ ರಿಸ್ಕ್ ಆ ಹೈವ್ ಇನ್ಫೆಕ್ಷನ್? ಎನ್ ಒಬ್ಸರ್ವೇಷನಲ್ ಸ್ಟಡಿ ಫ್ರಮ್ ಸೌಥೆರ್ನ್ ಇಂಡಿಯಾ. *ಅಮೆರಿಕನ್ ಜರ್ನಲ್ ಆ ಎಪಿಡೆಮಿಯೋಲಾಜಿ,* 177(3), 232–241.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 47-51
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಪರಿಸರವನ್ನು ಸಂರಕ್ಷಿಸುವಲ್ಲಿ ಘನ ತ್ಯಾಜ್ಯ ಮರುಬಳಕೆಯ ಪರಿಣಾಮ

**ಅಂಜಿನಪ್ಪ ಡಿ[1] ಮತ್ತು ಡಾ. ಲೋಕೇಶ್ ಎಂ. ಯು[2]**
ಸಂಶೋಧನಾ ವಿದ್ಯಾರ್ಥಿ[1], ಪ್ರಾಧ್ಯಾಪಕರು[2]
ಸಮಾಜಕಾರ್ಯ ಅಧ್ಯಯನ ವಿಭಾಗ, ದಾವಣಗೆರೆ ವಿಶ್ವವಿದ್ಯಾನಿಲಯ, ಶಿವಗಂಗೋತ್ರಿ, ದಾವಣಗೆರೆ.

***Abstract:***
*ಘನತ್ಯಾಜ್ಯ ಮರುಬಳಕೆಯು ವಿಶ್ವದಾದ್ಯಂತ ಪರಿಸರ ಸಂರಕ್ಷಣಾ ಕಾರ್ಯತಂತ್ರಗಳ ಪ್ರಮುಖ ಅಂಶವಾಗಿದೆ. ಈ ಲೇಖನವು ಪರಿಸರ ಸಂರಕ್ಷಣೆಯ ಮೇಲೆ ಘನತ್ಯಾಜ್ಯ ಮರುಬಳಕೆಯ ಬಹುಮುಖಿ ಪರಿಣಾಮಗಳನ್ನು ಪರಿಶೀಲಿಸುತ್ತದೆ. ಮರುಬಳಕೆಯಿಂದ ಭೂಮಿಯ ಮೇಲಿನ ಒತ್ತಡವನ್ನು ಕಡಿಮೆ ಮಾಡುವುದರ ಜೊತೆಗೆ ಪರಿಸರ ಮಾಲಿನ್ಯವನ್ನು ತಪ್ಪಿಸುತ್ತದೆ. ಇದಲ್ಲದೆ ಘನತ್ಯಾಜ್ಯ ಮರುಬಳಕೆಯಿಂದ ಕಚ್ಚಾ ವಸ್ತುಗಳ ಬೇಡಿಕೆಯನ್ನು ಕಡಿಮೆ ಮಾಡುತ್ತದೆ. ಇದಲ್ಲದೆ ಹವಾಮಾನ ಬದಲಾವಣೆಯನ್ನು ತಗ್ಗಿಸಲು ಸಹಾಯ ಮಾಡುತ್ತದೆ. ಘನತ್ಯಾಜ ಮರುಬಳಕೆ ಮತ್ತು ಸೂಕ್ತ ನಿರ್ವಹಣೆಯಿಂದ ಪರಿಸರ ಸಂರಕ್ಷಣೆಗೆ ಅನುಕೂಲವಾಗುತ್ತದೆ.*

***Keywords:*** *ಘನತ್ಯಾಜ, ತ್ಯಾಜ್ಯ ಕಡಿತ, ಸಂಪನ್ಮೂಲ ಸಂರಕ್ಷಣೆ, ಮಾಲಿನ್ಯ ತಡೆಗಟ್ಟುವಿಕೆ, ಹಸಿರುಮನೆ ಅನಿಲ ತಗ್ಗಿಸುವಿಕೆ.*

**ಪೀಠಿಕೆ**

ಘನತ್ಯಾಜ್ಯ ಮರುಬಳಕೆಯು ಪರಿಸರ ಸಂರಕ್ಷಣೆಯಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ, ಇದು ಘನತ್ಯಾಜ್ಯದ ಪ್ರಮಾಣವನ್ನು ಕಡಿಮೆ ಮಾಡುತ್ತದೆ, ನೈಸರ್ಗಿಕ ಸಂಪನ್ಮೂಲಗಳನ್ನು ಸಂರಕ್ಷಿಸುತ್ತದೆ, ಇಂಧನ ಉಳಿತಾಯ ಮತ್ತು ಮಾಲಿನ್ಯವನ್ನು ತಗ್ಗಿಸುತ್ತದೆ. ಜಾಗತಿಕ ಜನಸಂಖ್ಯೆಯು ಬೆಳೆಯುತ್ತಿರುವಂತೆ ಮತ್ತು ಕೈಗಾರಿಕಾ ಚಟುವಟಿಕೆಗಳು ತೀವ್ರಗೊಂಡಂತೆ, ಘನತ್ಯಾಜ್ಯ ಪ್ರಮಾಣ ದಿನೇದಿನ ಹೆಚ್ಚುತ್ತಿದೆ. ಇದರಿಂದಾಗಿ ಅನೇಕ ಸವಾಲುಗಳನ್ನು ಎದುರಿಸಬೇಕಿದೆ. ತ್ಯಾಜ್ಯ ನಿರ್ವಹಣೆಯ ಪ್ರಮುಖ ಅಂಶವಾದ ಮರುಬಳಕೆಯು ಕಾಗದ, ಪ್ಲಾಸ್ಟಿಕ್‌ಗಳು, ಲೋಹಗಳು ಮತ್ತು ಗಾಜಿನಂತಹ ವಸ್ತುಗಳನ್ನು ಮರುಬಳಕೆ ಮಾಡುವುದು ಅನುಕೂಲವಾಗಿದೆ. ತ್ಯಾಜ್ಯವನ್ನು ಮರುಬಳಕೆ ಮಾಡಬಹುದಾದ ಸಂಪನ್ಮೂಲಗಳಾಗಿ ಪರಿವರ್ತಿಸುವ ಮೂಲಕ, ಕಚ್ಚಾ ವಸ್ತುಗಳ ಬೇಡಿಕೆಯನ್ನು ಕಡಿಮೆ ಮಾಡಲು ಸಹಾಯ ಮಾಡುತ್ತದೆ, ಇದು ಹೊರತೆಗೆಯುವಿಕೆ ಮತ್ತು ಸಂಸ್ಕರಣಾ ಚಟುವಟಿಕೆಗಳಿಂದ ಉಂಟಾಗುವ ಪರಿಸರ ಅವನತಿಯನ್ನು ಕಡಿಮೆ ಮಾಡುತ್ತದೆ. ಇದಲ್ಲದೆ, ಹೊಸ ವಸ್ತುಗಳ ಉತ್ಪಾದನೆಗೆ ಹೋಲಿಸಿದರೆ ಮರುಬಳಕೆ ಪ್ರಕ್ರಿಯೆಗಳು ಸಾಮಾನ್ಯವಾಗಿ ಕಡಿಮೆ ಶಕ್ತಿಯನ್ನು ಬಳಸುತ್ತವೆ, ಇದು ಹಸಿರುಮನೆ ಅನಿಲ ಹೊರಸೂಸುವಿಕೆ ಮತ್ತು ಇತರ ಮಾಲಿನ್ಯಕಾರಕಗಳ ಕಡಿತಕ್ಕೆ ಕಾರಣವಾಗುತ್ತದೆ. ಹೀಗಾಗಿ, ಘನತ್ಯಾಜ್ಯ ಮರುಬಳಕೆಯು ತ್ಯಾಜ್ಯ

***Please cite this article as:*** ಅಂಜಿನಪ್ಪ ಡಿ ಮತ್ತು ಲೋಕೇಶ್ ಎಂ. ಯು. (2024). ಪರಿಸರವನ್ನು ಸಂರಕ್ಷಿಸುವಲ್ಲಿ ಘನ ತ್ಯಾಜ್ಯ ಮರುಬಳಕೆಯ ಪರಿಣಾಮ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 47–51

ನಿರ್ವಹಣೆಗೆ ಪ್ರಾಯೋಗಿಕ ಪರಿಹಾರ ಮಾತ್ರವಲ್ಲದೆ ಸುಸ್ಥಿರ ಅಭಿವೃದ್ಧಿಯನ್ನು ಉತ್ತೇಜಿಸುವ ಮತ್ತು ಪರಿಸರ ವ್ಯವಸ್ಥೆಗಳನ್ನು ರಕ್ಷಿಸುವ ಪ್ರಮುಖ ಕಾರ್ಯತಂತ್ರವಾಗಿದೆ.

ಪರಿಣಾಮಕಾರಿ ಮರುಬಳಕೆ ಕಾರ್ಯಕ್ರಮಗಳು ಕಾಗದ, ಪ್ಲಾಸ್ಟಿಕ್, ಗಾಜು ಮತ್ತು ಲೋಹಗಳಂತಹ ವಸ್ತುಗಳನ್ನು ಹೊಸ ಉತ್ಪನ್ನಗಳಾಗಿ ಮರುಸಂಸ್ಕರಿಸುವ ಮೂಲಕ ಈ ಸಮಸ್ಯೆಗಳನ್ನು ತಗ್ಗಿಸಬಹುದು, ಇದರಿಂದಾಗಿ ಉತ್ತಮ ಸಂಪನ್ಮೂಲಗಳ ಬೇಡಿಕೆಯನ್ನು ಕಡಿಮೆ ಮಾಡುತ್ತದೆ. ಮರುಬಳಕೆಯು ವಸ್ತುಗಳ ಉತ್ಪಾದನೆ ಮತ್ತು ವಿಲೇವಾರಿಗೆ ಸಂಬಂಧಿಸಿದ ಶಕ್ತಿಯ ಬಳಕೆ ಮತ್ತು ಹಸಿರುಮನೆ ಅನಿಲ ಹೊರಸೂಸುವಿಕೆಯನ್ನು ಕಡಿಮೆ ಮಾಡುತ್ತದೆ. ಹೆಚ್ಚುವರಿಯಾಗಿ, ಇದು ಅಪಾಯಕಾರಿ ವಸ್ತುಗಳನ್ನು ನಿರ್ವಹಿಸುವಲ್ಲಿ ಸಹಾಯ ಮಾಡುತ್ತದೆ, ಮಣ್ಣು ಮತ್ತು ಜಲಮೂಲಗಳನ್ನು ಕಲುಷಿತಗೊಳಿಸದಂತೆ ತಡೆಯುತ್ತದೆ. ತ್ಯಾಜ್ಯವನ್ನು ಮೌಲ್ಯಯುತ ಸಂಪನ್ಮೂಲಗಳಾಗಿ ಪರಿವರ್ತಿಸುವ ಮೂಲಕ, ಮರುಬಳಕೆಯು ತ್ಯಾಜ್ಯ ನಿರ್ವಹಣೆಯ ಸವಾಲುಗಳನ್ನು ಪರಿಹರಿಸುತ್ತದೆ ಆದರೆ ಸಮರ್ಥನೀಯ ಅಭಿವೃದ್ಧಿಯನ್ನು ಬೆಂಬಲಿಸುತ್ತದೆ ಮತ್ತು ವೃತ್ತಾಕಾರದ ಆರ್ಥಿಕತೆಯನ್ನು ಉತ್ತೇಜಿಸುತ್ತದೆ, ಅಂತಿಮವಾಗಿ ಪರಿಸರ ವ್ಯವಸ್ಥೆಗಳು ಮತ್ತು ಮಾನವ ಸಮುದಾಯಗಳ ಆರೋಗ್ಯ ಮತ್ತು ಯೋಗಕ್ಷೇಮಕ್ಕೆ ಕೊಡುಗೆ ನೀಡುತ್ತದೆ.

ನೈಸರ್ಗಿ ಸಂಪನ್ಮೂಲಗಳನ್ನು ಸಂರಕ್ಷಿಸುವ ಮತ್ತು ಹಸಿರುಮನೆ ಅನಿಲ ಹೊರಸೂಸುವಿಕೆಯನ್ನು ಕಡಿಮೆ ಮಾಡುವ ಮೂಲಕ ಪರಿಸರ ಸಂರಕ್ಷಣೆಯಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ. ಈ ಪ್ರಕ್ರಿಯೆಯು ವಸ್ತುಗಳನ್ನು ಸಂಗ್ರಹಿಸುವುದು, ಸಂಸ್ಕರಿಸುವುದು ಮತ್ತು ಮರುಬಳಕೆ ಮಾಡುವುದನ್ನು ಒಳಗೊಂಡಿರುತ್ತದೆ. ಇದರಿಂದಾಗಿ ಈ ತ್ಯಾಜ್ಯ ನಿರ್ವಹಣಾ ವ್ಯವಸ್ಥೆಗಳ ಮೇಲಿನ ಹೊರೆ ಕಡಿಮೆಯಾಗುತ್ತದೆ. ಮರುಬಳಕೆಯು ಕಚ್ಚಾ ವಸ್ತುಗಳ ಹೊರತೆಗೆಯುವಿಕೆಯ ಅಗತ್ಯವನ್ನು ಕಡಿಮೆ ಮಾಡುತ್ತದೆ. ಇದು ಪರಿಸರ ವ್ಯವಸ್ಥೆಗಳನ್ನು ಸಂರಕ್ಷಿಸುತ್ತದೆ. ಅರಣ್ಯನಾಶವನ್ನು ಕಡಿಮೆ ಮಾಡುತ್ತದೆ ಮತ್ತು ಶಕ್ತಿಯ ಬಳಕೆಯನ್ನು ಕಡಿಮೆ ಮಾಡುತ್ತದೆ. ಇದು ಹವಾಮಾನ ಬದಲಾವಣೆಯ ವಿರುದ್ಧದ ಹೋರಾಟಕ್ಕೆ ಕೊಡುಗೆ ನೀಡುತ್ತದೆ. ಇದಲ್ಲದೆ ಮರುಬಳಕೆಯು ಮರುಬಳಕೆ ಮತ್ತು ಉತ್ಪಾದನಾ ಕೈಗಾರಿಕೆಗಳಲ್ಲಿ ಉದ್ಯೋಗಗಳನ್ನು ಸೃಷ್ಟಿಸುವ ಮೂಲಕ ಆರ್ಥಿಕ ಬೆಳವಣಿಗೆಯನ್ನು ಉತ್ತೇಜಿಸುತ್ತದೆ. ತ್ಯಾಜ್ಯವನ್ನು ಅಮೂಲ್ಯವಾದ ಸಂಪನ್ಮೂಲಗಳಾಗಿ ಪರಿವರ್ತಿಸುವ ಮೂಲಕ, ಮರುಬಳಕೆಯು ಸುಸ್ಥಿರ ಅಭಿವೃದ್ಧಿಯನ್ನು ಉತ್ತೇಜಿಸುತ್ತದೆ ಮತ್ತು ಜವಾಬ್ದಾರಿಯುತ ಬಳಕೆಯ ಮಾದರಿಗಳನ್ನು ಉತ್ತೇಜಿಸುತ್ತದೆ. ಒಟ್ಟಾರೆಯಾಗಿ, ಘನತ್ಯಾಜ್ಯ ಮರುಬಳಕೆಯ ಪರಿಣಾಮವು ಆಳವಾದದ್ದು, ಗಮನಾರ್ಹವಾದ ಪರಿಸರ, ಆರ್ಥಿಕ ಮತ್ತು ಸಾಮಾಜಿಕ ಪ್ರಯೋಜನಗಳನ್ನು ನೀಡುತ್ತದೆ.

**ಘನತ್ಯಾಜ್ಯ ಮರುಬಳಕೆಯ ಪರಿಸರ ಪ್ರಯೋಜನಗಳು**

ಘನತ್ಯಾಜ್ಯ ಮರುಬಳಕೆ ಪರಿಸರ ವ್ಯವಸ್ಥೆಗಳ ಮೇಲೆ ತ್ಯಾಜ್ಯದ ಋಣಾತ್ಮಕ ಪರಿಣಾಮಗಳನ್ನು ರಕ್ಷಿಸುವಲ್ಲಿ ನಿರ್ಣಾಯಕ ಪಾತ್ರವನ್ನು ವಹಿಸುತ್ತದೆ, ನೈಸರ್ಗಿಕ ಸಂಪನ್ಮೂಲಗಳನ್ನು ಸಂರಕ್ಷಿಸುತ್ತದೆ ಮತ್ತು ಹಸಿರುಮನೆ ಅನಿಲ ಹೊರಸೂಸುವಿಕೆಯನ್ನು ಕಡಿಮೆ ಮಾಡುತ್ತದೆ. ಘನತ್ಯಾಜ್ಯ ಮರುಬಳಕೆಯ ಪರಿಸರ ಪ್ರಯೋಜಗಳು.

1. ***ಕಡಿಮೆಯಾದ ತ್ಯಾಜ್ಯದ ಪ್ರಮಾಣ:*** ಮರುಬಳಕೆಯು ಗಮನಾರ್ಹ ಪ್ರಮಾಣದ ತ್ಯಾಜ್ಯವನ್ನು ಭೂಕುಸಿತದಿಂದ ಬೇರೆಡೆಗೆ ತಿರುಗಿಸುತ್ತದೆ, ಇದು ನಿರ್ವಹಿಸಬೇಕಾದ ಮತ್ತು ಒಳಗೊಂಡಿರುವ ಘನತ್ಯಾಜ್ಯದ ಪ್ರಮಾಣವನ್ನು ಕಡಿಮೆ ಮಾಡುತ್ತದೆ.
2. ***ಕಡಿಮೆಯಾದ ಭೂ ಮಾಲಿನ್ಯ:*** ಭೂಕುಸಿತದ ಬಳಕೆಯನ್ನು ಕಡಿಮೆ ಮಾಡುವ ಮೂಲಕ,

ಮರುಬಳಕೆಯು ತ್ಯಾಜ್ಯದಿಂದ ಸೋರಿಕೆಯಾಗುವ ಅಪಾಯಯಕಾರಿ ವಸ್ತುಗಳಿಂದ ಮಣ್ಣಿನ ಮಾಲಿನ್ಯವನ್ನು ತಡೆಯಲು ಸಹಾಯ ಮಾಡುತ್ತದೆ.

3. ***ಕಚ್ಚಾ ವಸ್ತುಗಳ ಉಳಿತಾಯ:*** ಕಾಗದ, ಪ್ಲಾಸ್ಟಿಕ್, ಗಾಜು ಮತ್ತು ಲೋಹಗಳಂತಹ ವಸ್ತುಗಳನ್ನು ಮರುಬಳಕೆ ಮಾಡುವುದರಿಂದ ಭೂಮಿಯಿಂದ ಕಚ್ಚಾ ವಸ್ತುಗಳನ್ನು ಹೊರ ತೆಗೆಯುವ ಮತ್ತು ಸಂಸ್ಕರಿಸುವ ಅಗತ್ಯವನ್ನು ಕಡಿಮೆ ಮಾಡುತ್ತದೆ. ಮರ, ನೀರು ಮತ್ತು ಖನಿಜಗಳಂತಹ ನೈಸರ್ಗಿಕ ಸಂಪನ್ಮೂಲಗಳನ್ನು ಸಂರಕ್ಷಿಸುತ್ತದೆ.
4. ***ಶಕ್ತಿ ಸಂರಕ್ಷಣೆ:*** ಮರುಬಳಕೆಯ ವಸ್ತುಗಳಿಂದ ಉತ್ಪನ್ನಗಳನ್ನು ತಯಾರಿಸುವುದು ಸಾಮಾನ್ಯವಾಗಿ ಕಚ್ಚಾ ವಸ್ತುಗಳಿಂದ ಉತ್ಪಾದಿಸುವುದಕ್ಕಿಂದ ಕಡಿಮೆ ಶಕ್ತಿಯನ್ನು ಬಳಸುತ್ತದೆ.
5. ***ಕಡಿಮೆ ವಾಯು ಮತ್ತು ನೀರಿನ ಮಾಲಿನ್ಯ:*** ಸಾಂಪ್ರದಾಯಿಕ ಉತ್ಪಾದನಾ ಪ್ರಕ್ರಿಯೆಗಳಿಗೆ ಹೋಲಿಸಿದರೆ ಮರುಬಳಕೆ ಪ್ರಕ್ರಿಯೆಗಳು ಸಾಮಾನ್ಯವಾಗಿ ಕಡಿಮೆ ಮಾಲಿನ್ಯವನ್ನು ಉಂಟುಮಾಡುತ್ತವೆ.
6. ***ಕಡಿಮೆ ಹಸಿರುಮನೆ ಅನಿಲ ಹೊರಸೂಸುವಿಕೆ:*** ಮರುಬಳಕೆಯು ಹಸಿರುಮನೆ ಅನಿಲ ಹೊರಸೂಸುವಿಕೆಯನ್ನು ಕಡಿಮೆ ಮಾಡುವ ಮೂಲಕ ಹವಾಮಾನ ಬದಲಾವಣೆಯನ್ನು ತಗ್ಗಿಸಲು ಸಹಾಯ ಮಾಡುತ್ತದೆ.
7. ***ಆವಾಸಸ್ಥಾನ ಸಂರಕ್ಷಣೆ:*** ಕಚ್ಚಾ ವಸ್ತುಗಳ ಹೊರತೆಗೆಯುವಿಕೆ ಅಗತ್ಯವನ್ನು ಕಡಿಮೆ ಮಾಡುವ ಮೂಲಕ, ಮರುಬಳಕೆಯು ನೈಸರ್ಗಿಕ ಆವಾಸಸ್ಥಾನಗಳು ಮತ್ತು ಜೀವವೈವಿಧ್ಯತೆಯನ್ನು ರಕ್ಷಿಸಲು ಸಹಾಯ ಮಾಡುತ್ತದೆ. ಕಡಿಮೆ ಗಣಿಗಾರಿಕೆ, ಅರಣ್ಯನಾಶ ಮತ್ತು ನೀರಿನ ಬಳಕೆ ಪರಿಸರ ವ್ಯವಸ್ಥೆಗಳನ್ನು ಮತ್ತು ಅವುಗಳಲ್ಲಿ ವಾಸಿಸುವ ಜಾತಿಗಳನ್ನು ಸಂರಕ್ಷಿಸುತ್ತದೆ.
8. ***ಹವಾಮಾನ ನಿಯಂತ್ರಣ:*** ಹವಾಮಾನವನ್ನು ನಿಯಂತ್ರಿಸುವಲ್ಲಿ ಆರೋಗ್ಯಕರ ಪರಿಸರ ವ್ಯವಸ್ಥೆಗಳು ನಿರ್ಣಾಯಕ ಪಾತ್ರವನ್ನು ವಹಿಸುತ್ತವೆ. ಮರುಬಳಕೆಯು ಪರಿಸರದ ಅವನತಿ ಮತ್ತು ಮಾಲಿನ್ಯವನ್ನು ಕಡಿಮೆ ಮಾಡುವ ಮೂಲಕ ಪರಿಸರ ವ್ಯವಸ್ಥೆಗಳನ್ನು ನಿರ್ವಹಿಸಲು ಸಹಾಯ ಮಾಡುತ್ತದೆ.
9. ***ಕಡಿಮೆಯಾದ ವಿಷತ್ವ:*** ಮರುಬಳಕೆಯು ಪರಿಸರಕ್ಕೆ ಹಾನಿಕಾರಕ ವಸ್ತುಗಳ ಬಿಡುಗಡೆಯನ್ನು ಕಡಿಮೆ ಮಾಡುತ್ತದೆ, ಇದರಿಂದಾಗಿ ಗಾಳಿ ಮತ್ತು ನೀರಿನ ಗುಣಮಟ್ಟವನ್ನು ಸುಧಾರಿಸುತ್ತದೆ ಮತ್ತು ಮಾಲಿನ್ಯಕ್ಕೆ ಸಂಬಂಧಿಸಿದ ಆರೋಗ್ಯದ ಅಪಾಯಗಳನ್ನು ಕಡಿಮೆ ಮಾಡುತ್ತದೆ.
10. ***ತ್ಯಾಜ್ಯ ನಿರ್ವಹಣೆ:*** ಪರಿಣಾಮಕಾರಿ ಮರುಬಳಕೆ ಕಾರ್ಯಕ್ರಮಗಳು ತ್ಯಾಜ್ಯ ನಿರ್ವಹಣಾ ವ್ಯವಸ್ಥೆಗಳ ಮೇಲಿನ ಹೊರೆಯನ್ನು ಕಡಿಮೆ ಮಾಡುತ್ತದೆ, ಇದು ಸ್ವಚ್ಛ, ಆರೋಗ್ಯಕರ ಸಮುದಾಯಗಳಿಗೆ ಕಾರಣವಾಗುತ್ತದೆ.

**ಪರಿಸರ ವ್ಯವಸ್ಥೆಗಳ ಮೇಲೆ ಘನತ್ಯಾಜ್ಯ ಮರುಬಳಕೆಯ ಧನಾತ್ಮಕ ಪರಿಣಾಮಗಳು**

1. ***ಸಂಪನ್ಮೂಲ ಸಂರಕ್ಷಣೆ:*** ಮರುಬಳಕೆಯು ಕಚ್ಚಾ ವಸ್ತುಗಳನ್ನು ಹೊರತೆಗೆಯುವ, ಸಂಸ್ಕರಿಸುವ ಅಗತ್ಯವನ್ನು ಕಡಿಮೆ ಮಾಡುತ್ತದೆ, ಇದು ಮರ, ನೀರು ಮತ್ತು ಖನಿಜಗಳಂತಹ ನೈಸರ್ಗಿಕ ಸಂಪನ್ಮೂಲಗಳನ್ನು ಸಂರಕ್ಷಿಸುತ್ತದೆ.
2. ***ಶಕ್ತಿಯ ಉಳಿತಾಯ:*** ಉತ್ತಮ ವಸ್ತುಗಳಿಂದ ತಯಾರಿಸುವ ಉತ್ಪನ್ನಗಳಿಗೆ ಹೋಲಿಸಿದರೆ ಮರುಬಳಕೆ ಪ್ರಕ್ರಿಯೆಗಳು ಸಾಮಾನ್ಯವಾಗಿ ಕಡಿಮೆ ಶಕ್ತಿಯನ್ನು ಬಳಸುತ್ತವೆ.

3. ***ಲ್ಯಾಂಡ್ ಫಿಲ್ ಬಳಕೆಯಲ್ಲಿ ಕಡಿತ***: ಕಸವನ್ನು ತಿರುಗಿಸುವ ಮೂಲಕ, ಮರುಬಳಕೆಯು ತ್ಯಾಜ್ಯ ವಿಲೇವಾರಿಗೆ ಅಗತ್ಯವಿರುವ ಸ್ಥಳದ ಪ್ರಮಾಣವನ್ನು ಕಡಿಮೆ ಮಾಡುತ್ತದೆ. ಇದು ಅಸ್ತಿತ್ವದಲ್ಲಿರುವ ಭೂಕುಸಿತಗಳ ಜೀವಿತಾವಧಿಯನ್ನು ಹೆಚ್ಚಿಸುವುದಲ್ಲದೆ, ಮಣ್ಣು ಮತ್ತು ನೀರಿನ ಮಾಲಿನ್ಯದ ಸಾಮರ್ಥ್ಯವನ್ನು ಕಡಿಮೆ ಮಾಡುತ್ತದೆ.
4. ***ಮಾಲಿನ್ಯದಲ್ಲಿ ಕಡಿತ*** : ತ್ಯಾಜ್ಯ ಮರುಬಳಕೆ ಗಾಳಿ ಮತ್ತು ನೀರಿನ ಮಾಲಿನ್ಯವನ್ನು ಕಡಿಮೆ ಮಾಡಲು ಸಹಾಯ ಮಾಡುತ್ತದೆ. ಕಚ್ಚಾ ವಸ್ತುಗಳಿಂದ ಉತ್ಪಾದಿಸುವ ಉತ್ಪನ್ನಗಳಿಗೆ ಹೋಲಿಸಿದರೆ ಮರುಬಳಕೆಯ ವಸ್ತುಗಳಿಂದ ಉತ್ಪನ್ನಗಳನ್ನು ತಯಾರಿಸುವುದು ಕಡಿಮೆ ವಾಯು ಮತ್ತು ನೀರಿನ ಮಾಲಿನ್ಯಕ್ಕೆ ಕಾರಣವಾಗುತ್ತದೆ.
5. ***ಹಸಿರುಮನೆ ಅನಿಲ ಹೊರಸೂಸುವಿಕೆಯಲ್ಲಿ ಕಡಿತ:*** ಲೋಹಗಳು, ಕಾಗದ, ಪ್ಲಾಸ್ಟಿಕ್‌ಗಳಂತಹ ಮರುಬಳಕೆ ವಸ್ತುಗಳು ಹಸಿರುಮನೆ ಅನಿಲ ಹೊರಸೂಸುವಿಕೆಯನ್ನು ಗಮನಾರ್ಹವಾಗಿ ಕಡಿಮೆ ಮಾಡಬಹುದು, ಏಕೆಂದರೆ ಇದಕ್ಕೆ ಸಾಮಾನ್ಯವಾಗಿ ಕಡಿಮೆ ಶಕ್ತಿಯ ಅಗತ್ಯವಿರುತ್ತದೆ. ಕಡಿಮೆ ಶಕ್ತಿಯ ಬಳಕೆಯು ಕಡಿಮೆ ಪಳೆಯುಳಿಕೆ ಇಂಧನಗಳನ್ನು ಸುಡುತ್ತದೆ, ಹೀಗಾಗಿ ಇಂಗಾಲದ ಡೈಆಕ್ಸೈಡ್ ಮತ್ತು ಇತರ ಹಸಿರುಮನೆ ಅನಿಲ ಹೊರಸೂಸುವಿಕೆಯನ್ನು ಕಡಿಮೆ ಮಾಡುತ್ತದೆ.
6. ***ಆರ್ಥಿಕ ಪ್ರಯೋಜನಗಳು:*** ಮರುಬಳಕೆಯು ಮತ್ತು ಉತ್ಪಾದನಾ ಕೈಗಾರಿಕೆಗಳಲ್ಲಿ ಉದ್ಯೋಗಗಳನ್ನು ಸೃಷ್ಟಿಸುತ್ತದೆ ಮತ್ತು ಸಮುದಾಯಗಳು ಕಡಿಮೆ ತ್ಯಾಜ್ಯ ವಿಲೇವಾರಿ ವೆಚ್ಚಗಳು ಮತ್ತು ಹೆಚ್ಚು ಪರಿಣಾಮಕಾರಿ ಸಂಪನ್ಮೂಲ ನಿರ್ವಹಣೆಯ ಮೂಲಕ ಹಣವನ್ನು ಉಳಿಸಬಹುದು.

**ಉಪಸಂಹಾರ**

ಕೊನೆಯಲ್ಲಿ, ಘನತ್ಯಾಜ್ಯ ಮರುಬಳಕೆಯು ಭೂಕುಸಿತ ತ್ಯಾಜ್ಯವನ್ನು ಕಡಿಮೆ ಮಾಡುವ ಮೂಲಕ, ಸಂಪನ್ಮೂಲಗಳನ್ನು ಸಂರಕ್ಷಿಸುವ ಮತ್ತು ಶಕ್ತಿಯ ಬಳಕೆಯನ್ನು ಕಡಿತಗೊಳಿಸುವ ಮೂಲಕ ಪರಿಸರ ಸಂರಕ್ಷಣೆಗೆ ಗಣನೀಯವಾಗಿ ಕೊಡುಗೆ ನೀಡುತ್ತದೆ. ಈ ಪ್ರಯೋಜನಗಳು ಒಟ್ಟಾರೆಯಾಗಿ ಮಾಲಿನ್ಯವನ್ನು ಕಡಿಮೆ ಮಾಡುತ್ತದೆ. ಹಸಿರುಮನೆ ಅನಿಲ ಹೊರಸೂಸುವಿಕೆಯನ್ನು ತಗ್ಗಿಸುತ್ತದೆ ಮತ್ತು ಸಮರ್ಥನೀಯ ಅಭ್ಯಾಸಗಳನ್ನು ಉತ್ತೇಜಿಸುತ್ತದೆ. ತ್ಯಾಜ್ಯ ಮರುಬಳಕೆಯು ಸುಸ್ಥಿರತೆಯನ್ನು ಬೆಂಬಲಿಸುತ್ತದೆ ಮತ್ತು ಭವಿಷ್ಯದ ಪೀಳಿಗೆಗೆ ಭೂಮಿಯ ಯೋಗಕ್ಷೇಮವನ್ನು ಖಚಿತಪಡಿಸಿಕೊಳ್ಳಲು ಸಹಾಯ ಮಾಡುತ್ತದೆ. ಈ ಪರಿಸರ ಪ್ರಯೋಜನೆಗಳನ್ನು ಸಾಧಿಸಲು ಮರುಬಳಕೆಯ ಪ್ರಯತ್ನಗಳನ್ನು ವಿಸ್ತರಿಸುವುದು ಮತ್ತು ಸುಧಾರಿಸುವುದು ನಿರ್ಣಾಯಕವಾಗಿದೆ. ನೈಸರ್ಗಿಕ ಪರಿಸರ ವ್ಯವಸ್ಥೆಗಳನ್ನು ಸಂರಕ್ಷಿಸಲು ಮತ್ತು ಭವಿಷ್ಯದ ಪೀಳಿಗೆಗೆ ಆರೋಗ್ಯಕರ ಪರಿಸರವನ್ನು ಖಚಿತಪಡಿಸಿಕೊಳ್ಳಲು ಮರುಬಳಕೆಯ ಪ್ರಯತ್ನಗಳನ್ನು ಅತ್ಯಗತ್ಯವಾಗಿದೆ.

**ಪರಾಮರ್ಶನ ಗ್ರಂಥಗಳು**


- ಇಪಿಎ (ಪರಿಸರ ಸಂರಕ್ಷಣಾ ಸಂಸ್ಥೆ).
- ನ್ಯಾಷನಲ್ ಇನ್‌ಸ್ಟಿಟ್ಯೂಟ್ ಆಫ್ ಎನ್ವಿರಾನ್ಮೆಂಟಲ್ ಹೆಲ್ತ್ ಸೈನ್ಸಸ್
- ಯುನೈಟೆಡ್ ನೇಷನ್ಸ್ ಎನ್ವಿರಾನ್ಮೆಂಟ್ ಪ್ರೋಗ್ರಾಂ.
- ಯುನೈಟೆಡ್ ಸ್ಟೇಟ್ಸ್ ಎನ್ವಿರಾನ್ಮೆಂಟಲ್ ಪ್ರೊಟೆಕ್ಷನ್ ಏಜೆನ್ಸಿ
- ಯುರೋಪಿಯನ್ ಎನ್ವಿರಾನ್ಮೆಂಟ್ ಏಜೆನ್ಸಿ.
- Girish, A., Amin, A., Huns, Anish, Sunil, A., Hafeez, H., & Prabhu, S. C. (2021). A review on solid waste

management. *International Journal of Environmental Studies*. 78(3), 456-470.

- Hoornweg, D., & Bhada-Tata, P. (2012). *What a waste: A global review of solid waste management*.World Bank.
- Khoiron, K., Probandari, A. N., Setyaningsih, W., Putri, M. R., Kusumawati, E. R., & Nugroho, A. (2020). A review of environmental health impact from municipal solid waste (MSW) landfill. *Annals of Tropical Medicine and Public Health*, 23(2).
- Ragaert, K., Delva, L., & Van Geem, K. (2017). Mechanical and chemical recycling of solid plastic waste. *Waste Management*. 69. 24-58.
- Srivastava, V., Ismail, S. A., Singh, P., & Singh, R. P. (2015). Urban solid waste management in the developing world with emphasis on India: Challenges and opportunities. *Reviews in Environmental Science and Biotechnology*. 14(2). 317-337.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 52-55
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಸಾಹಿತ್ಯ ಮತ್ತು ತಂತ್ರಜ್ಞಾನ ಸಂಶೋಧನೆ ಹೊಸ ಸಾಧ್ಯತೆಗಳು

ಬಸವರಾಜ ಕೆ. ಎನ್[1] ಮತ್ತು ಡಾ. ಗಿರೀಶ್ ಡಿ. ಹೆಚ್[2]

[1]ಸಹಾಯಕ ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹೊಸಬಂಡಿ ಹರ್ಲಾಪುರ, ಕೊಪ್ಪಳ ತಾಲೂಕು ಮತ್ತು ಜಿಲ್ಲೆ.

[2] ಸಹಾಯಕ ಪ್ರಾಧ್ಯಾಪಕರು, ಅರ್ಥಶಾಸ್ತ್ರ ವಿಭಾಗ, ದಾವಣಗೆರೆ ವಿಶ್ವವಿದ್ಯಾಲಯ, ಶಿವಗಂಗೋತ್ರಿ, ದಾವಣಗೆರೆ

***Abstract:***

*ಸಾಹಿತ್ಯಕ್ಕೆ ಸಂಬಂಧಿಸಿದಂತೆ ಸುದೀರ್ಘವಾದ ಇತಿಹಾಸ ಇದೆ. ಸಾಹಿತ್ಯವು ಭಾಷೆ ಮತ್ತು ಚರಿತ್ರೆಯನ್ನು ಶ್ರೀಮಂತಗೊಳ್ಳಿಸುತ್ತದೆ. ಜೊತೆಗೆ ಮಾನವನ ಶ್ರೇಷ್ಠ ಬದುಕಿಗೆ ಬೇಕಾದ ಸರ್ವಕಾಲಿಕ ಮೌಲ್ಯಗಳನ್ನು ಪ್ರತಿಪಾದಿಸುತ್ತ ಬಂದಿದೆ. ಸಾಹಿತ್ಯ ಎನ್ನುವ ಪದ ಎಲ್ಲಾ ಕ್ಷೇತ್ರಗಳಲ್ಲಿ ಬಳಸಲಾಗುತ್ತದೆ. ಸಾಹಿತ್ಯದ ಜ್ಞಾನ ಪ್ರತಿಯೊಬ್ಬರಿಗೂ ಅವಶ್ಯಕತೆ ಇದೆ. ಸಾಹಿತ್ಯದ ವ್ಯಾಪ್ತಿ ತುಂಬ ವಿಶಾಲವಾಗಿದೆ. ಸಾಹಿತ್ಯಕ್ಕೆ ಸಮಾಜವನ್ನು ಬದಲಾಯಿಸುವ ಶಕ್ತಿ ಇದೆ. ಸಮಾಜ, ಸಾಹಿತ್ಯ, ಸಂಸ್ಕೃತಿ, ಆಧುನಿಕತೆ, ತಂತ್ರಜ್ಞಾನ ಇನ್ನೂ ಮುಂತಾದವುಗಳ ಬದಲಾವಣೆಗೆ ಸಂಶೋಧನೆ ಕಾರಣವಾಗಿದೆ. ಹೊಸ ತಂತ್ರಜ್ಞಾನವನ್ನು ಸಂಶೋಧನೆಯ ಮೂಲಕ ಹೊರತಂದಾಗ ಇದನ್ನು ಜನಪ್ರಿಯಗೊಳ್ಳಿಸಲು ಸಾಹಿತ್ಯ ಅತ್ಯವಶ್ಯಕ ಇದೆ. ಇದರಿಂದ ಹೊಸ ಸಾಧ್ಯತೆಗಳಿಗೆ ದಾರಿ ಮಾಡಿಕೊಡುತ್ತದೆ. ಸಾಹಿತ್ಯ ಮತ್ತು ಸಂಶೋಧನೆ ಇವುಗಳ ನಡುವೆ ಅನನ್ಯವಾದ ಸಂಬಂಧವಿದೆ. ಸಂಶೋಧನೆಯ ಮೂಲಕ ಹೊರತಂದಾಗ ವಿಷಯಗಳನ್ನು ಸಾಹಿತ್ಯವನ್ನು ಬಳಸಿ ಜನಸಾಮಾನ್ಯರಿಗೆ ಸುಲಭದ ರೀತಿಯಲ್ಲಿ ಅರ್ಥಮಾಡಿಸಿ ಅಳವಡಿಸಿಕೊಳ್ಳಲು ಸಾಧ್ಯವಾಗುತ್ತದೆ. ಹಾಗಾಗಿ ಸಾಹಿತ್ಯ, ತಂತ್ರಜ್ಞಾನ ಮತ್ತು ಸಂಶೋಧನೆಯ ಮೂಲಕ ಹೊಸ ಸಾಧ್ಯತೆಗಳನ್ನು ಕಂಡುಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ.*

***Keywords:*** *ಕನ್ನಡ ಸಾಹಿತ್ಯ, ಸಂಶೋಧನೆ, ತಂತ್ರಜ್ಞಾನ ಬಳಕೆ, ಭಾಷಾಭಿವೃದ್ಧಿ, ಮಾಹಿತಿ, ಕೌಶಲ್ಯ.*

**ಪೀಠಿಕೆ**

ಸಾಹಿತ್ಯ ಎಂದರೇನು? ಎನ್ನುವುದಕ್ಕೆ ಸಂಬಂಧಿಸಿದಂತೆ ಒಮ್ಮತ ವ್ಯಾಖ್ಯಾನ ನೀಡುವುದು ಸಾಧ್ಯವಿಲ್ಲ. ಸಾಮಾನ್ಯವಾಗಿ ಹೇಳುವುದಾದರೆ "ಜನರು ವ್ಯಕ್ತಿ ಮತ್ತು ವಸ್ತುವನ್ನು ಕುರಿತು ತಮ್ಮ ಅಭಿಪ್ರಾಯವನ್ನು ಅಭಿವ್ಯಕ್ತ ಪಡಿಸುವುದಕ್ಕೆ ಸಾಹಿತ್ಯ ಎಂದು ಹೇಳಬಹುದು". ಸಾಹಿತ್ಯ ಕ್ಷೇತ್ರಕ್ಕೆ ಸಾಕಷ್ಟು ಇತಿಹಾಸವಿದೆ ಹಾಗೂ ಸಾಕಷ್ಟು ಬದಲಾವಣೆಯಾಗಿದೆ ಮತ್ತು ಸಾಕಷ್ಟು ಶ್ರೀಮಂತಿಕೆ ಹೊಂದಿದೆ. ಪ್ರಪಂಚದಲ್ಲಿ ವಿವಿಧ ಕ್ಷೇತ್ರಗಳಲ್ಲಿ ಸಾಕಷ್ಟು ಬದಲಾವಣೆಯಾಗುತ್ತಿದೆ. ಆಗಿರುವ ಮತ್ತು ಆಗುತ್ತಿರುವ ಬದಲಾವಣೆಯನ್ನು ತಿಳಿದುಕೊಳ್ಳಲು ಮತ್ತು ಅಳವಡಿಸಿಕೊಳ್ಳಲು ಸಾಹಿತ್ಯದ ಮೂಲಕ ಸಾಧ್ಯ. ಹಾಗಾಗಿ ಸಾಹಿತ್ಯಕ್ಕೆ ತುಂಬ ಮಹತ್ವ ಇದೆ. ಮಾನವನಿಗೆ ಆಲೋಚನಾ ಶಕ್ತಿಯಿರುವುದರಿಂದ ಆತ ಬೇರೆಲ್ಲ ಪ್ರಾಣಿಗಳಿಗಿಂತ ಭಿನ್ನವೆನಿಸಿಕೊಂಡಿದ್ದಾನೆ. ಇಂತಹ ಆಲೋಚನೆಗಳು, ಅನುಭವಗಳು ಮತ್ತು

***Please cite this article as:*** ಬಸವರಾಜ ಕೆ. ಎನ್ ಮತ್ತು ಗಿರೀಶ್ ಡಿ. ಹೆಚ್. (2024). ಸಾಹಿತ್ಯ ಮತ್ತು ತಂತ್ರಜ್ಞಾನ ಸಂಶೋಧನೆ ಹೊಸ ಸಾಧ್ಯತೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 52–55

ಭಾವನೆಗಳು ವ್ಯಕ್ತಪಡಿಸಲು ಸಾಹಿತ್ಯ ಬಹಳ ಮುಖ್ಯವಾದುದು. ಜಗತ್ತಿನಲ್ಲಿ ಆಗಿರುವ ರಾಜಕೀಯ ಬದಲಾವಣೆಗಳು, ಆರ್ಥಿಕ ಬದಲಾವಣೆಗಳು, ಸಾಮಾಜಿಕ ಬದಲಾಣೆಗಳು, ತಾಂತ್ರಿಕ ಬದಲಾವಣೆಗಳು ಇನ್ನೂ ಮುಂತಾದವುಗಳಲ್ಲಿ ಆಗಿರುವ ಬದಲಾವಣೆಗಳನ್ನು ಸಮಾಜದ ಜನತೆಗೆ ತಿಳಿದುಕೊಳ್ಳಲು, ಅರ್ಥಮಾಡಿಕೊಳ್ಳಲು ಹಾಗೂ ಅಳವಡಿಸಿಕೊಳ್ಳಲು ಸಾಹಿತ್ಯದ ಬಹಳ ಪ್ರಮುಖ ಪಾತ್ರ ವಹಿಸುತ್ತದೆ. ಮಾಹಿತಿ ತಂತ್ರಜ್ಞಾನ ಭಾಷಾ ಕೌಶಲ್ಯ, ಅಂತರಶಿಸ್ತುಗಳ ಅಧ್ಯಯನಗಳನ್ನು ಮುಕ್ತವಾಗಿ ಸಂಶೋಧನೆಗೆ ಒಳಪಡಿಸುವುದರಿಂದ ಮಾನವನ ಬುದ್ಧಿಕೌಶಲ್ಯದ ಬೆಳವಣಿಗೆಯಲ್ಲಿ ಆತ್ಮಸ್ಥೆರ್ಯ ಉಂಟಾಗುತ್ತದೆ. ಕರ್ನಾಟಕದ ಹಿನ್ನಲೆಯನೇ ತೆಗೆದುಕೊಂಡರೆ ಎರಡು ಸಾವಿರ ವರ್ಷಗಳ ಇತಿಹಾಸವನ್ನು ಹೊಂದಿರುವ ಕನ್ನಡ ಸಾಹಿತ್ಯ ಭಾರತೀಯ ಯಾವುದೇ ಪ್ರಾದೇಶಿಕ ಸಾಹಿತ್ಯಕ್ಕೆ ಕಡಿಮೆ ಏನೂ ಇಲ್ಲ. ಈ ಸಾಹಿತ್ಯದಲ್ಲಿನ ಹೊಸ ಆಯಾಮಗಳನ್ನು ಪರಿಚಯಿಸಿ ಜನಮುಖಿ ಸಂಸ್ಕೃತಿಯ ಉಳಿವಿಗೆ ತಂತ್ರಜ್ಞಾನ ಕಾರಣವಾಗುವುದು ಇಂದಿನ ಅವಶ್ಯಕತೆಯಾಗಿದೆ.

## ಸಾಹಿತ್ಯ ಮತ್ತು ತಂತ್ರಜ್ಞಾನ ಸಂಶೋಧನೆ ಸಂಬಂಧಿಸಿದ ಸಮೀಕ್ಷೆಗಳು

ಸಾಹಿತ್ಯ ಮತ್ತು ತಂತ್ರಜ್ಞಾನ ಸಂಶೋಧನೆಗೆ ಸಂಬಂಧಿಸಿದಂತೆ ಅನೇಕ ಲೇಖನಗಳು, ಸಮೀಕ್ಷೆಗಳು, ಪುಸ್ತಕಗಳು ಮತ್ತು ಬರವಣಿಗೆಗಳು ಮಾಧ್ಯಮಗಳಲ್ಲಿ ಹಾಗೂ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಪ್ರಮುಖವಾದವುಗಳನ್ನು ಇಲ್ಲಿ ಚರ್ಚಿಸಲಾಗಿದೆ. ಎಂ.ಎಸ್.ಶ್ರೀಧರ್ (1879) ರವರು ಬರೆದಿರುವ ”"ಕನ್ನಡದಲ್ಲಿ ಜನಪ್ರಿಯ ವಿಜ್ಞಾನ ಮತ್ತು ತಂತ್ರಜ್ಞಾನ ಸಾಹಿತ್ಯದ ಬೆಳವಣಿಗೆ" ಈ ಲೇಖನದಲ್ಲಿ ಹಲವಾರು ಕಾರಣದಿಂದಗಳಿಗಾಗಿ ನಾವು ವಿಜ್ಞಾನ ಮತ್ತು ತಂತ್ರಜ್ಞಾನದ ಮಾಹಿತಿ ಬಯಸುತ್ತೇವೆ. ಈ ಮೊದಲೆ ತಿಳಿದಂತೆ ನಿಗೂಢತೆಯಿಂದ ಉಂಟಾದ ಕುತೂಹಲ, ವಿಸ್ಮಯ ಮತ್ತು ಜ್ಞಾನಧಾಹ ತಣಿಸಲಿಕ್ಕೆ ಮತ್ತು ಅದರಿಂದ ದೊರೆಯುವ ಆತ್ಮತೃಪ್ತಿಗೆ ಜನಪ್ರಿಯ ವಿಜ್ಞಾನ ಮತ್ತು ತಂತ್ರಜ್ಞಾನ ಸಾಹಿತ್ಯ ಅವಶ್ಯಕ. ನಮ್ಮಲ್ಲಿ ಸ್ವಾಭಾವಿಕವಾಗಿ ಉಂಟಾಗುವ ಅನುಮಾನ ಮತ್ತು ಉದ್ಭವಿಸುವ ಸಮಸ್ಯೆಗಳನ್ನು ಪರಿಹರಿಸಿ ಕೊಳ್ಳುವುದಕ್ಕೆ ಹಾಗು ನಿತ್ಯ ಬದುಕಿನ ಅವಶ್ಯಕತೆಗಳ ಬಗ್ಗೆ ಮಾಹಿತಿ ಮತ್ತು ತಿಳುವಳಿಕೆ ಪಡೆಯಲು ಕೂಡ ಜನಪ್ರಿಯ ವಿಜ್ಞಾನ ಮತ್ತು ತಂತ್ರಜ್ಞಾನ ಸಾಹಿತ್ಯ ಬೇಕಾಗುತ್ತದೆ. ಉದಾಹರಣೆಗೆ ನಾವು ದಿನನಿತ್ಯ ಉಪಯೋಗಿಸುವ ವಸ್ತು ಮತ್ತು ಸಲಕರಣೆಗಳು ಮಿತಿಗಳ ಬಗ್ಗೆ ಮತ್ತು ಉಪಯೋಗಗಳನ್ನು ಬಗ್ಗೆ ತಿಳಿಯಲು ಸ್ವಲ್ಪ ಜ್ಞಾನ ಅವಶ್ಯಕ. ತಂತ್ರಜ್ಞಾನ ಮಾಹಿತಿ ಪ್ರಸಾರದಲ್ಲಿ ಸಂವಹನ ಮಾಧ್ಯಮಗಳಾದ ಬಾನುಲಿ, ದೂರದರ್ಶನ, ಉತ್ಸವ, ತರಬೇತಿ, ಕಾರ್ಯಗಾರ, ಜಾಥ, ಪ್ರದರ್ಶನ, ಸಂಗ್ರಹಾಲಯ, ತಜ್ಞರ ಉಪನ್ಯಾಸಗಳು, ವಿಸ್ತರಣಾ ಚಟುವತಿಕೆಗಳು, ಮಾರ್ಗದರ್ಶನಗಳು ಮತ್ತು ಪತ್ರಿಕೆಗಳ ಮತ್ತು ನಿಯತಕಾಲಿಕೆಗಳ ಲೇಖನಗಳು ಗಮನಾರ್ಹವಾದ ಕಾರ್ಯಸಾಧಿಸಿದ್ದು ಗುರುತರ ಜವಾಬ್ದಾರಿ ಹೊಂದಿದ್ದರೂ ಈ ಕಾರ್ಯದಲ್ಲಿ ಪುಸ್ತಕಗಳು ತಮ್ಮದೇ ಆದ ವಿಶಿಷ್ಟ ಸ್ಥಾನ ಪಡೆದಿವೆ ಎಂದು ಸಾಹಿತ್ಯ ಮತ್ತು ತಂತ್ರಜ್ಞಾನದ ಮಹತ್ವ ತಿಳಿಸಿದ್ದಾರೆ. ತಂತ್ರಜ್ಞಾನ ಮತ್ತು ಸಾಹಿತ್ಯದ ಮೈಲುಗಲ್ಲುಗಳನ್ನು ವಿವರಿಸಿದ್ದಾರೆ.

ಪ್ರಹ್ಲಾದ, ಕೆ (2023) ಇವರು ಪ್ರಕಟಿಸಿರುವ "ಕನ್ನಡ ಸಾಹಿತ್ಯ ಮತ್ತು ತಂತ್ರಜ್ಞಾನ ಸಂದರ್ಭ" ಎಂಬ ಲೇಖನದಲ್ಲಿ ಸಾಹಿತ್ಯ ಮತ್ತು ತಂತ್ರಜ್ಞಾನ ಕುರಿತು ಈ ರೀತಿ ವಿವರಿಸಿದ್ದಾರೆ. ಆಧುನಿಕ ಪ್ರಪಂಚದಲ್ಲಿ ನಮ್ಮ ದಿನನಿತ್ಯ ಬದುಕು ಯಂತ್ರ., ತಂತ್ರಜ್ಞಾನಗಳ ಜೊತೆಗೆ ರೆಕ್ಕೆ ಕಟ್ಟಿಕೊಂಡು ಹಾರುತ್ತಿದೆ. ಸುಧಾರಿತ ತಂತ್ರಜ್ಞಾನದಿಂದಾಗಿ ಸಾಮಾಜಿಕ ಜಾಲತಾಣಗಳು ಫೋನ್, ಇಮೇಲ್, ಐಪ್ಯಾಡ್, ಫೇಸ್‌ಬುಕ್, ವಾಟ್ಸಾಪ್‌ಗಳಂತಹ ಸಂವಹನ ವೇದಿಕೆಗಳು ಇಂದು ಮುಖ್ಯವಾಹಿನಿಯಲ್ಲಿದೆ ಎಂದು ಹೇಳಿದ್ದಾರೆ. ಇಂದು

ನವೀನವಾಗಿ ಕಾಣುತ್ತಿರುವ ವಿಷಯ ನಾಳೆಗೆ ಹಳೆಯದಾಗಿ ಕಾಣುವಂತಹ ತಾಂತ್ರಿಕ ಧಾವಂತ ಇಂದಿನದು. ವೇಗವಾಗಿ ಬೆಳೆಯುತ್ತರುವ ತಂತ್ರಜ್ಞಾನವು ನಮ್ಮನ್ನು ಭ್ರಮಾಧೀನಗೊಳಿಸುತ್ತಿದೆ. ಮಾಹಿತಿಯೇ ಜ್ಞಾನವಾಗಿದೆ ಆ ಜ್ಞಾನವೇ ಇಂದು ಸಾಹಿತ್ಯವಾಗಿ ಬೆಳೆಯುತ್ತಿದೆ ಎನ್ನುವಂತಾಗಿದೆ. ಇಂತಹ ಸುಲಭೋಪಾಯ ಹಾಗು ತ್ವರಿತಗತಿಯ ತಂತ್ರಜ್ಞಾನದ ಬದುಕಿನಲ್ಲಿ ಮಾನವೀಯ ಮೌಲ್ಯಗಳ ಹುಡುಕಾಟಕ್ಕೆ ಹೆಣಗಬೇಕಾದ ಪರಿಸ್ಥಿತಿ ಇದೆ. ಇಂತಹ ಸಂದರ್ಭದಲ್ಲಿ ಸಾಹಿತ್ಯದ ಪ್ರಸ್ತುತತೆ ಅಗತ್ಯವೆನಿಸುತ್ತಿದೆ. ಇದರಲ್ಲಿ ಸಾಹಿತ್ಯ ಮತ್ತು ತಂತ್ರಜ್ಞಾನ ಬಳಕೆ ಮತ್ತು ಅವಶ್ಯಕತೆ ವ್ಯಕ್ತವಾಗುತ್ತದೆ.

ಶ್ರೀನಿಧಿ ಟಿ.ಜಿ. (2017) ಇವರ ಕೃತಿಯಾದ "ಕನ್ನಡ ತಂತ್ರಜ್ಞಾನ" ಇದರಲ್ಲಿ ತಂತ್ರಜ್ಞಾನ ಬೆಳೆದುಬಂದ ಬಗೆಯನ್ನು ಮತ್ತು ಭವಿಷ್ಯದ ಸಾಧ್ಯತೆಗಳನ್ನು ಕುರಿತು ಚರ್ಚಿಸಿದ್ದಾರೆ. ಜನಸಾಮಾನ್ಯರು ಮಾಹಿತಿ ತಂತ್ರಜ್ಞಾನದ ಸಂಪರ್ಕಕ್ಕೆ ಬಂದದ್ದಾದರೂ, ಈಚೆಗೆ ಕೆಲ ದಶಕಗಳ ಹಿಂದೆಯಷ್ಟೆ. ಇಷ್ಟು ಕಡಿಮೆ ಅವಧಿಯಲ್ಲಿ, ಬೇರೆ ಯಾವ ಕ್ಷೇತ್ರಕ್ಕೂ ಸಾಧ್ಯವಾಗದಷ್ಟು ಪ್ರಮಾಣದಲ್ಲಿ ನಮ್ಮ ಬದುಕಿನಲ್ಲಿ ಗಮನಾರ್ಹ ಬದಲಾವಣೆಗಳನ್ನು ತಂದದ್ದು ಮಾಹಿತಿ ತಂತ್ರಜ್ಞಾನದ ಹೆಗ್ಗಳಿಕೆಯೆಂದೇ ಹೇಳಬಹುದು. ಮಾಹಿತಿ ತಂತ್ರಜ್ಞಾನ ಕ್ಷೇತ್ರ ಬೆಳೆಯುತ್ತಿದ್ದ ಸಮಯದಲ್ಲಿ ಅದರ ವ್ಯಾಪ್ತಿ ದೊಡ್ಡ ದೊಡ್ಡ ಸಂಸ್ಥೆಗಳಿಗೆ, ವಿಶ್ವವಿದ್ಯಾಲಯ ಕೇಂದ್ರಗಳಗಷ್ಟೆ ಸೀಮಿತವಾಗಿತ್ತು. ಅಂತಹ ಸಮಯದಲ್ಲಿ ಕಂಪ್ಯೂಟರುಗಳಿಂದ ಏನು ಕೆಲಸವಾಗಬಲ್ಲದು ಎನ್ನುವುದು ಮುಖ್ಯವಾಗಿತ್ತೇ ಹೊರೆತು ಯಾವ ಭಾಷೆಯ ಮಾಧ್ಯಮ ಬಳಕೆಯಾಗಬೇಕು ಎನ್ನುವುದಕ್ಕೆ ಅಷ್ಟೇನೂ ಮಹತ್ವವಿರಲಿಲ್ಲ. ಆ ಸಮಯದಲ್ಲಿ ಕಂಪ್ಯೂಟರ್ ಪ್ರಪಂಚದ ಬಹುಪಾಲು ವ್ಯವಹಾರವೆಲ್ಲವು ಇಂಗ್ಲಿಷ್‌ನಲ್ಲೇ ನಡೆಯುತ್ತಿತ್ತು ಎನ್ನಬಹುದು. ಆನಂತರದ ಸಮಯದಲ್ಲಿ ಮಾಹಿತಿ ತಂತ್ರಜ್ಞಾನದ ಹರಿವು ಇನ್ನಷ್ಟು ವಿಸ್ತರಿಸಿದಂತೆ ಅದು ಜನಸಾಮಾನ್ಯರ ಸಮೀಪಕ್ಕೂ ಬಂತು. ತಂತ್ರಜ್ಞಾನ ಸಾಮಾನ್ಯರಿಗೂ ಆಪ್ತವಾಗಬೇಕಾದರೆ ಅದು ಜನರ ಭಾಷೆ ಕಲಿಯುವಂತಾಗಬಾರದು ಎಂಬ ಅಭಿಪ್ರಾಯ ರೂಪುಗೊಂಡಿತು.

**ಸಾಹಿತ್ಯ ಮತ್ತು ತಂತ್ರಜ್ಞಾನ ಸಂಶೋಧನೆಯ ವಿಶ್ಲೇಷಣೆ**

ಸಾಹಿತ್ಯ ಎಂದರೆ "ಜನರು ವ್ಯಕ್ತಿ ಮತ್ತು ವಸ್ತುವನ್ನು ಕುರಿತು ತಮ್ಮ ಅಭಿಪ್ರಾಯವನ್ನು ಅಭಿವ್ಯಕ್ತ ಪಡಿಸುವುದಕ್ಕೆ ಸಾಹಿತ್ಯ ಎಂದು ಹೇಳಬಹುದು" ಹಾಗೆಯೇ ಬಳಸುವ ವಿಧಾನಕ್ಕೆ ತಂತ್ರಜ್ಞಾನ ಎಂದು ಹೇಳಬಹುದು. ನಮ್ಮ ಮುಂದಿರುವ ಸಮಸ್ಯೆಯೊಂದಕ್ಕೆ ಪರಿಹಾರ ಕಂಡುಕೊಳ್ಳಲು ನಾವು ಮಾಡುವ ವ್ಯವಸ್ಥಿತ ಮತ್ತು ಸಂಘಟಿತ ಪ್ರಯತ್ನವೇ ಸಂಶೋಧನೆ ಎನ್ನಲಾಗುತ್ತದೆ. ಮಾನವ ಬುದ್ದಿಜೀವಿ ತನ್ನ ಆಲೋಚನ ಶಕ್ತಿಯ ಸಹಾಯದಿಂದ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳಲು ವಿಧಾನಗಳನ್ನು ಬಳಸಿಕೊಂಡು ನಂತರ ಸಾಹಿತ್ಯದ ಮೂಲಕ ಸಮಸ್ಯೆಗೆ ಪರಿಹಾರವನ್ನು ತನ್ನದೇಯಾದ ರೀತಿಯಲ್ಲಿ ವ್ಯಕ್ತ ಪಡಿಸುವುದಾಗಿದೆ. ಇದರಿಂದ ಸುಲಭವಾಗಿ ಅರ್ಥವಾಗುತ್ತದೆ ಮತ್ತು ಅಳವಡಿಸಿಕೊಳ್ಳಲು ಅನುಕೂಲವಾಗುತ್ತದೆ.

**ಸಮಸ್ಯೆಗಳ ಹೇಳಿಕೆಗಳು**

ಪ್ರಪಂಚದಲ್ಲಿ ಸಂಶೋಧನಾ ಕ್ಷೇತ್ರದಲ್ಲಿ ಆಗಿರುವ ತಂತ್ರಜ್ಞಾನ ಶೋದನೆಯನ್ನು ಯಾವ ರೀತಿ ಸಾಹಿತ್ಯದ ಮೂಲಕ ಹೇಗೆ ಅರ್ಥಮಾಡಿಸುವುದು ಒಂದು ಸಮಸ್ಯೆಯಾಗಿದೆ. ಜಾಗತಿಕರಣ, ಕೈಗಾರಿಕರಣ ಮತ್ತು ತಂತ್ರಜ್ಞಾನದ ಇವತ್ತಿನ ಜಗತ್ತಿನಲ್ಲಿ ನಮ್ಮ ಸಾಹಿತ್ಯದ ಮೌಲ್ಯಗಳು ಅಪಮೌಲ್ಯಗೊಳ್ಳುತ್ತಿರುವ ಪ್ರಸ್ತುತ ಸಂದರ್ಭದಲ್ಲಿ ಸಂಶೋಧನೆಯ ಕೆಲಸ ಆಗಬೇಕಿದೆ. ಮೌಲ್ಯಗಳ ಮರುಬಿತ್ತನೆಯ ಹೊಸ ಸಾಧ್ಯತೆಗಳನ್ನು ಸಾಹಿತ್ಯ ಮತ್ತು ತಂತ್ರಜ್ಞಾನದ ಮೂಲಕ ಕಂಡುಕೊಳ್ಳಬೇಕಿದೆ.

ಸಾಹಿತ್ಯ ಕ್ಷೇತ್ರದಲ್ಲಿ ತಂತ್ರಜ್ಞಾನದ ಬಳಕೆಯಿಂದ ಹಲವಾರು ಪ್ರಯೋಜನಗಳಿವೆ. ಅವುಗಳೆಂದರೆ

ಮಾಹಿತಿಯನ್ನು ಪರಿಣಾಮಕಾರಿಯಾಗಿ ಶೀಘ್ರವಾಗಿ ತಿಳಿಸಲು, ಸರಳ ಬಳಕೆ, ಸರಳ ಹಂಚಿಕೆ ಮುಂತಾದ ಪ್ರಯೋಜನಗಳಿವೆ.

**ಉಪಸಂಹಾರ**

ಹೊಸ ಓದುಗರನ್ನು ಸಾಹಿತ್ಯದ ಕಡೆಗೆ ಸೆಳೆಯಲು ಹಾಗೂ ಸಾಹಿತ್ಯ ಸೃಷ್ಟಿಯ ಕೆಲಸವನ್ನು ಸುಲಭ ಮಾಡಿಕೊಳ್ಳಲು ಕೂಡ ನಾವು ತಂತ್ರಜ್ಞಾನವನ್ನು ಬಳಸಿಕೊಳ್ಳಲು ಸಾಧ್ಯ. ಮೊಬೈಲಿನಲ್ಲಿ ಮುಳುಗಿರುವ ಹೊಸ ತಲೆಮಾರುಗೆ ಪುಸ್ತಕದ ರುಚಿ ಹತ್ತಿಸಲು ಇ–ಪುಸ್ತಕಗಳನ್ನು ನೀಡುವುದು ಈ ನಿಟ್ಟಿನಲ್ಲಿ ಒಂದು ಹೆಜ್ಜೆ. ವಿಶ್ವದ ಅತಿದೊಡ್ಡ ಇ–ಪುಸ್ತಕ ಪ್ರಕಾಶಕ ಅಮೆಜಾನ್ ತನ್ನ ಕಿಂಡಲ್ ವೇದಿಕೆಯಲ್ಲಿ ಕನ್ನಡಕ್ಕೆ ಬೆಂಬಲ ನೀಡಲು ಇನ್ನು ಮೀನಾಮೇಷ ಎಣಿಸುತ್ತದೆ. ಆದರೂ ಗೂಗಲ್ ಪ್ಲೇ ಬುಕ್ಸ್ ಹಾಗೂ ನಮ್ಮದೇ ದೇಶದ ಉದ್ಯಮಿಗಳು ಪ್ರಾರಂಭಿಸಿರುವ ಹಲವು ವ್ಯವಸ್ಥೆಗಳಲ್ಲಿ ಕನ್ನಡ ಇ–ಪುಸ್ತಕಗಳ ಪ್ರಕಟಣೆ ಮತ್ತು ಮಾರಾಟ ಈಗಾಗಲೇ ಸಾಧ್ಯವಾಗಿದೆ. ಹೊಸ ಬರಹಗಾರರಿಗೆ ದೊಡ್ಡ ಮಾರುಕಟ್ಟೆ ಒದಗಿಸುತ್ತದೆ.

ಹೆಚ್ಚು ಜನ ತಮ್ಮ ಮೊಬೈಲಿನಲ್ಲಿ ವೀಡಿಯೋ ವೀಕ್ಷಣೆಯನ್ನೆ ಹೆಚ್ಚಾಗಿ ಇಷ್ಟಪಡುತ್ತಾರೆ ಎನ್ನುವುದಾದರೆ ಅವರನ್ನು ತಲುಪಲು ಪುಸ್ತಕ ಪರಿಚಯಗಳನ್ನು ವೀಡಿಯೋ ರೂಪದಲ್ಲೇ ನೀಡಬಹುದು. ವಿಜ್ಞಾನ, ತಂತ್ರಜ್ಞಾನ, ಹಣಕಾಸು ಮುಂತಾದ ವಿಷಯಗಳ ಬಗ್ಗೆ ಓದುವಂತೆ ಪ್ರೇರೆಪಿಸವುದಕ್ಕೂ ಇದೊಂದು ಉತ್ತಮ ಮಾರ್ಗ. ಒಟ್ಟಾರೆಯಾಗಿ ಸಾಹಿತ್ಯ ಸೃಷ್ಟಿಯ ಸಹಾಯದಿಂದ ತಂತ್ರಜ್ಞಾನ ಸಂಶೋಧನೆ ಮಾಡಿ ಪರಿಣಾಮಕಾರಿಯಾಗಿ ಬಳಸಿಕೊಂಡು ಹೊಸ ಸಾಧ್ಯತೆಗಳನ್ನು ಕಂಡುಕೊಳ್ಳಲು ಸಾಧ್ಯ.

**ಪರಾಮರ್ಶನ ಗ್ರಂಥಗಳು**


- ಅನಂತರಾಮು. ಟಿ ಆರ್. (2015). *ವಿಜ್ಞಾನ ತಂತ್ರಜ್ಞಾನ.* ಕನ್ನಡ ಸಾಹಿತ್ಯ ಪರಿಷತ್ತು. ಸಂ–14.
- ಪ್ರಹ್ಲಾದ, ಕೆ. (2023). ಕನ್ನಡ, ಸಾಹಿತ್ಯ, ಮತ್ತು, ತಂತ್ರಜ್ಞಾನ. *ಕನ್ನಡ ಸಂಶೋಧನ ಪತ್ರಿಕೆ.* ಸಂಪುಟ 2. ಸಂಚಿಕೆ ಸೆಪ್ಟಂಬರ್.
- ಸಾಂಬಮೂರ್ತಿ. (ಸಂ.). (2009.). *ಭಾಷಾ ತಂತ್ರಜ್ಞಾನ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ.
- ಶ್ರೀಧರ ಎಸ್.ಎಮ್. (2005, ಸೆಪ್ಟಂಬರ 10). *ಕನ್ನಡದಲ್ಲಿ ಜನಪ್ರಿಯ ವಿಜ್ಞಾನ, ತಂತ್ರಜ್ಞಾನ ಸಾಹಿತ್ಯ*, ಕನ್ನಡ ಪ್ರಭ, ದಿನಪತ್ರಿಕೆ. 6.
- ಶ್ರೀನಿಧಿ ಟಿ ಜಿ. (2017). *ಕನ್ನಡ ತಂತ್ರಜ್ಞಾನ.* ಕಣಜ ಅಂತರಜಾಲ ಕನ್ನಡ ಜ್ಞಾನಕೋಶ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 56-60
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಸ್ತ್ರೀವಾದಿ ಸಾಹಿತ್ಯ ಸಂಶೋಧನೆ ನೆಲೆಯಲ್ಲಿ ಹೊಸ ಸಾಧ್ಯತೆಗಳು; ರಾಜಕೀಯ, ಆರ್ಥಿಕ, ಸಾಮಾಜಿಕ ನೆಲೆಯಲ್ಲಿ ಮೋಟಮ್ಮ ಅವರ ಆತ್ಮಕಥೆ

**ಸಿದ್ದನಾಗಪ್ಪ ಬಿ. ಬಿ**

ಸಂಶೋಧನಾ ವಿದ್ಯಾರ್ಥಿ, ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು.

***Abstract:***

*ಮಾನವನ ಜೀವನವು ನೋವು-ನಲಿವು, ಸುಖ-ದುಃಖ, ಒಳಿತು-ಕೆಡುಕುಗಳ ಮಿಶ್ರಣ. ದಿನನಿತ್ಯದ ಬದುಕು ಸಮತೋಲನವಾಗಿರದೆ ಅನೇಕ ಏರಿಳಿತಗಳಿಂದ ಕೂಡಿರುತ್ತದೆ. ವಿಶೇಷ ಎನಿಸಿದ ಅನೇಕ ಘಟನೆಗಳು ಸ್ಮೃತಿಪಟಲದಲ್ಲಿದ್ದು ಅವುಗಳನ್ನು ದಾಖಲಿಸುವ ಪ್ರಯತ್ನಗಳು ಕೂಡ ನಡೆಯುತ್ತಿದೆ. ಇವುಗಳ ಅಭಿವ್ಯಕ್ತಿಗಳೇ ಆತ್ಮಕಥೆ. ತನ್ನಾಳದ ನೋವು-ನಲಿವುಗಳ ಸಮತೋಲಿತ ಚಿತ್ರಣವೇ ಆತ್ಮಕಥೆ. ಒಬ್ಬ ವ್ಯಕ್ತಿ ತನ್ನ ಜೀವನದ ಚರಿತ್ರೆಯನ್ನು ತಾನೇ ಬರೆದರೆ ಅದೇ ಆತ್ಮಕಥೆ. ಅದೇ ವ್ಯಕ್ತಿಯ ಜೀವನದ ಘಟನೆಯನ್ನು ಕುರಿತು ಬೇರೊಬ್ಬ ವ್ಯಕ್ತಿ ಬರೆದಾಗ ಅದು ಜೀವನಚರಿತ್ರೆ. ಆತ್ಮಕಥೆಯು ಆಧುನಿಕ ಕನ್ನಡ ಗದ್ಯಸಾಹಿತ್ಯದ ಒಂದು ಪ್ರಕಾರವಾಗಿದೆ. ಸ್ತ್ರೀವಾದಿ ಸಾಹಿತ್ಯದಲ್ಲಿ ಮಹಿಳಾ ಆತ್ಮಕಥೆಗಳ ಅಧ್ಯಯನವೂ ಕೂಡ ಬಹು ಮುಖ್ಯವಾಗಿದೆ. ಹೀಗೆ ಬಂದಿರುವ ಮಹಿಳಾ ಆತ್ಮಕಥೆಗಳಲ್ಲಿ ಮೋಟಮ್ಮಅವರ 'ಬಿದಿರು ನೀನ್ಯಾರಿಗಲ್ಲದವಳು' ಎಂಬ ಆತ್ಮಕಥೆಯು ಒಂದಾಗಿದೆ. ವೀರಣ್ಣ ಕಮ್ಮಾರ ಅವರ ನಿರೂಪಣೆಯಲ್ಲಿ ಬಂದಿರುವ ಈ ಆತ್ಮಕಥೆಯನ್ನು ಪ್ರಸ್ತುತ ಪ್ರಬಂಧದಲ್ಲಿ ರಾಜಕೀಯ, ಆರ್ಥಿಕ, ಸಾಮಾಜಿಕ ಹಿನ್ನೆಲೆಯಲ್ಲಿ ನೋಡಲಾಗಿದೆ.*

***Keywords:*** *ಸ್ತ್ರೀವಾದಿ ಸಾಹಿತ್ಯ, ಸಂಶೋಧನೆ, ಮೋಟಮ್ಮ, ರಾಜಕೀಯ ನಾಯಕಿ, ಆತ್ಮಕಥೆ.*

**ಪೀಠಿಕೆ**

ಮೋಟಮ್ಮ ಅವರು ಮಲೆನಾಡಿನ ಪುಟ್ಟ ಊರಿನಿಂದ ಬಂದು ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಹೆಸರು ಮಾಡಿರುವ ಧೀಮಂತ ರಾಜಕೀಯ ನಾಯಕಿ ಎಂದು ಹೇಳಬಹುದು ಹಾಗೂ ಸ್ತ್ರೀ ಅಸ್ತಿತ್ವದ ಪ್ರತಿಬಿಂಬವಾಗಿಯೂ ಮೋಟಮ್ಮ ಅವರು ಕಾಣುತ್ತಾರೆ. ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲೂಕಿನ ಕೆಸವೂಳಲು ಗ್ರಾಮದಲ್ಲಿನ ಸಣ್ಣಯ್ಯ ಮತ್ತು ವಸಂತಮ್ಮ ದಂಪತಿಯ ನಾಲ್ಕು ಜನ ಮಕ್ಕಳಲ್ಲಿ ಮೋಟಮ್ಮ ಅವರು ಕೊನೆಯ ಪುತ್ರಿಯಾಗಿ 1951ರಲ್ಲಿ ಜನಿಸಿದರು. ತಂದೆಗೆ ನಾಲ್ಕನೇ ಮಗು ಗಂಡಾಗಬೇಕೆಂಬ ಆಸೆ ಇತ್ತು. ಈ ಕಾರಣದಿಂದಾಗಿ ಮೋಟಮ್ಮ ಅವರಿಗೆ ಹೆಸರನ್ನು ಇಡಲು ಇಚ್ಛಿಸಲಿಲ್ಲ. ಮೋಟಮ್ಮ ಅವರು ದುಂಡಗೆ, ದಪ್ಪಗೆ ಇದ್ದ ಕಾರಣ ಎಲ್ಲರೂ ಮೋಟು-ಮೋಟು ಅಂತಾನೇ ಕರೆಯುತ್ತಿದ್ದರಿಂದ ಮೋಟಮ್ಮ ಎಂಬ ಹೆಸರು ರೂಢಿಯಾಯಿತು. ಅಪ್ಪನಿಂದ ತಾತ್ಸಾರಕ್ಕೆ ಒಳಗಾದರೂ ಮನೆಯ ನೆರೆಹೊರೆಯವರ ಹಾಗೂ ಹಳ್ಳಿಯವರ ಪ್ರೀತಿಯಲ್ಲಿ ಬಾಲ್ಯವನ್ನು ಕಳೆದರು.

***Please cite this article as:*** ಸಿದ್ದನಾಗಪ್ಪ ಬಿ. ಬಿ. (2024). ಸ್ತ್ರೀವಾದಿ ಸಾಹಿತ್ಯ ಸಂಶೋಧನೆ ನೆಲೆಯಲ್ಲಿ ಹೊಸ ಸಾಧ್ಯತೆಗಳು; ರಾಜಕೀಯ, ಆರ್ಥಿಕ, ಸಾಮಾಜಿಕ ನೆಲೆಯಲ್ಲಿ ಮೋಟಮ್ಮ ಅವರ ಆತ್ಮಕಥೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವಲಪ್‌ಮೆಂಟ್*, 3(3), 56–60

ಓದಿನಲ್ಲಿ ಮತ್ತು ಕ್ರೀಡೆಯಲ್ಲಿ ಮುಂದೆ ಇದ್ದ ಇವರು ಬಿ.ಎ, ಎಂ.ಎ ಪದವಿಯನ್ನು ಪಡೆದರು. ನಂತರ 1976ರಲ್ಲಿ ಸಬ್‌ರಿಜಿಸ್ಟ್ರಾರ್ ಆಗಿ ನೇಮಕವಾದರು. ವಿದ್ಯಾರ್ಥಿ ಜೀವನದಲ್ಲಿಯೇ ವಸತಿನಿಲಯದ ಕುಂದುಕೊರತೆಗಳ ಬಗ್ಗೆ ಧ್ವನಿ ಎತ್ತುತ್ತಿದ್ದ ಅವರ ಮನದಲ್ಲಿ ಮೂಡುತ್ತಿದ್ದ ಸಾಮಾಜಿಕ ಕಳಕಳಿಯು ಮುಂದೆ ರಾಜಕೀಯದಲ್ಲಿ ಬೆಳೆಯಲು ಅವಕಾಶ ಮಾಡಿಕೊಟ್ಟಿತು.

ಭಾರತದಲ್ಲಿ ಇಂದಿರಾ ಕಾಂಗ್ರೆಸ್ ಮತ್ತು ಬ್ರಹ್ಮಾನಂದರೆಡ್ಡಿ ಕಾಂಗ್ರೆಸ್ ಎಂದು 1977ರಲ್ಲಿ ಕಾಂಗ್ರೆಸ್ ಇಬ್ಭಾಗವಾಯಿತು. ಕರ್ನಾಟಕದಲ್ಲಿ ಹೆಚ್.ಕೆ ಪಾಟೀಲರು ಬ್ರಹ್ಮಾನಂದರೆಡ್ಡಿ ಪರವಾಗಿದ್ದರೆ, ದೇವರಾಜು ಅರಸು ಅವರು ಇಂದಿರಾಗಾಂಧಿ ಅವರ ಪರ ಇದ್ದರು. ಮೂಡಿಗೆರೆಯ ಶಾಸಕ ಜಿ. ಪುಟ್ಟಸ್ವಾಮಿ ಅವರು ರೆಡ್ಡಿ ಕಾಂಗ್ರೆಸ್‌ಗೆ ಸೇರಿದರು. ಇಂದಿರಾಗಾಂಧಿ ಕಾಂಗ್ರೆಸ್ ಪರವಾಗಿ ಚುನಾವಣೆಯಲ್ಲಿ ಸ್ಪರ್ಧಿಸಲು ಸೂಕ್ತ ಅಭ್ಯರ್ಥಿಗಳಿಲ್ಲದ ಕಾರಣ ಮಾಜಿ ಶಾಸಕಿಯಾದ ಶ್ರೀಮತಿ ಬಿ.ಎಲ್. ಸುಬ್ಬಮ್ಮ ಅವರು ಮೋಟಮ್ಮ ಅವರ ಕಛೇರಿಗೆ ಬಂದು **"ಏನಮ್ಮಾ ನೀನ್ಯಾಕೆ ಚುನಾವಣೆಗೆ ನಿಲ್ಲಬಾರದು"**[1] ಎಂದು ಕೇಳಿದರು. ಮೋಟಮ್ಮ ಅವರಿಗೆ ಆಶ್ಚರ್ಯವಾಯಿತು. ಒಳ್ಳೆಯ ಆಫೀಸರ್ ಆಗಬೇಕೆಂಬ ಗುರಿ ಇಟ್ಟುಕೊಂಡಿದ್ದ ಅವರು ಆಲೋಚಿಸದೇ ಯಾವುದೇ ನಿರ್ಧಾರವನ್ನು ಆತುರಾತುರವಾಗಿ ತೆಗೆದುಕೊಳ್ಳುತ್ತಿರಲಿಲ್ಲ. ಕೆಲವು ನಿರ್ಧಾರವನ್ನಂತು ತೆಗೆದುಕೊಳ್ಳಲು ಬಹಳಷ್ಟು ಆಲೋಚಿಸುತ್ತಿದ್ದರು. ಅವರ ಸ್ಥಿರ ಆಲೋಚನೆ, ದೃಢನಿರ್ಧಾರವಿದ್ದರೂ ಒಮ್ಮೊಮ್ಮೆ ನಿರ್ಧಾರ ಕೈಗೊಳ್ಳುವಲ್ಲಿ ಗೊಂದಲದ ಮನಸ್ಥಿತಿಯನ್ನು ಹೊಂದಿರುತ್ತಿದ್ದನ್ನು ಕುರಿತು ಇಲಾಖೆಯ ಮೇಲಾಧಿಕಾರಿಯಾಗಿದ್ದ ತಿಮ್ಮಯ್ಯ ಅವರು ಈ ರೀತಿ ಹೇಳಿದ್ದಾರೆ, **"**ಏನಮ್ಮ ನೀನು ಚುನಾವಣೆಗೂ ನಿಲ್ಲು ಅಂದ್ರೆ ನಿಲ್ಲೋದಿಲ್ಲ ಅಂತೀಯ. ನಾವು ತೋರಿಸಿದ ಹುಡುಗನ್ನ ಮದುವೆಯಾಗು ಅಂದ್ರೆ ಆಗೋಲ್ಲ ಅಂತೀಯ. ಡಿಪಾರ್ಟ್‌ಮೆಂಟ್ ಪರೀಕ್ಷೆಗಳನ್ನು ಪಾಸು ಮಾಡೋದಿಲ್ಲ ಮತ್ತೆ ಏನಮ್ಮಾ ಮಾಡ್ತೀಯಾ**"**[2] ಎಂದು ಕೇಳುತ್ತಿದ್ದ ಪ್ರಶ್ನೆಗಳಿಗೆ ಮೋಟಮ್ಮನವರು 'ರಾಜಕೀಯದಲ್ಲಿ ಯಾವುದೇ ಆಸಕ್ತಿಯಿಲ್ಲ' ಎಂದು ಹೇಳಿದ್ದರು. ಬಡತನದಲ್ಲಿದ್ದ ಅವರ ಕುಟುಂಬವನ್ನು ನಿರ್ವಹಿಸಲು ಸರ್ಕಾರಿ ನೌಕರಿ ಅಗತ್ಯವೆಂದು ತಿಳಿದಿದ್ದರು. ಆದರೆ ಆಕಸ್ಮಿಕವಾಗಿ ಚುನಾವಣೆಗೆ ಸ್ಪರ್ಧಿಸುವಂತೆ ಶ್ರೀಮತಿ ಬಿ.ಎಲ್. ಸುಬ್ಬಮ್ಮ ಅವರು ಕೇಳಿಕೊಂಡರು. ಇದರ ಬಗ್ಗೆ ಚಿಂತಿಸುತ್ತಿದ್ದ ಮೋಟಮ್ಮ ಅವರಿಗೆ ಅವರ ಸಹೋದ್ಯೋಗಿಯಾದ ರಾಮಚಂದ್ರನಾಯಕ್ ಅವರು ಚುನಾವಣೆಗೆ ಸ್ಪರ್ಧಿಸುವಂತೆ ತಿಳಿ ಹೇಳಿದರು. ಶಾಸ್ತ್ರ ಸಂಪ್ರದಾಯವನ್ನು ಪಾಲಿಸುವವರು ಯಾವುದೇ ಕೆಲಸವನ್ನು ಕೈಗೊಳ್ಳುವ ಮೊದಲು ಜ್ಯೋತಿಷ್ಯರನ್ನು ಕೇಳುವ ಪದ್ಧತಿಯಿರುತ್ತದೆ. ಅದರಲ್ಲಿ ಮೋಟಮ್ಮ ಅವರ ರಾಜಕೀಯ ಪ್ರವೇಶ ಹೊರತೇನಲ್ಲ. ರಾಮಚಂದ್ರನಾಯಕ್ ಅವರು ಕೋಡಿಮಠದ ಶ್ರೀಗಳ ಸಮೀಪ ಕರೆದುಕೊಂಡು ಹೋದರು. ಮೊದಲೇ ಮೋಟಮ್ಮ ಅವರಿಗೆ ನಾಮಕರಣ ಮಾಡದ ಕಾರಣ ಒಂದು ಹೂವಿನ ಹೆಸರನ್ನು ಸೂಚಿಸಲು ಶ್ರೀಗಳು ತಿಳಿಸಿದರು. ಮಲ್ಲಿಗೆ ಹೂವನ್ನು ಆಯ್ಕೆ ಮಾಡಿದ ಮೋಟಮ್ಮ ಅವರಿಗೆ **"**ರಾಜಕೀಯಂರಜೇಕ ಬಂಧನಂ**"**[3] ಎಂದು ಬಂದಿದ್ದ ಕಾರಣ ನೀವು ರಾಜಕೀಯಕ್ಕಿಂತ ಸರ್ಕಾರಿ ಹುದ್ದೆಯಲ್ಲಿ ಮುಂದುವರಿಯುವಿರಿ ಎಂಬ ಸೂಚನೆಯ ಮೇರೆಗೆ ರಾಜಕೀಯ ಪ್ರವೇಶವು ಬೇಡ ಎಂದು ತಿರ್ಮಾನಿಸಿ ಮನಸ್ಸನ್ನು ನಿರಾಳವಾಗಿಸಿ ಕೊಂಡರು. ಆದರೆ ಚಂದ್ರೇಗೌಡರು ಅವರ ಮನೆಗೆ ಮತ್ತೊಬ್ಬ ಜ್ಯೋತಿಷಿಯನ್ನು ಕರೆಯಿಸಿ ಕೇಳಿದಾಗ ಮೊದಲು

[1] ಬಿದಿರು ನೀನ್ಯಾರಿಗಲ್ಲದವಳು, ಮೋಟಮ್ಮ (ನಿ.ವೀರಣ್ಣಕಮ್ಮಾರ) ವಿಕಾಸ ಪ್ರಕಾಶನ, ಬೆಂಗಳೂರು. 2022 ಪು.ಸಂ 117

[2] ಅದೇ. ಪುಟ. 118

[3] ಅದೇ.ಪುಟ. 123

ಕೇಳಿದ ಶಾಸ್ತ್ರಕ್ಕೂ ಇವರು ಹೇಳಿದ ಶಾಸ್ತ್ರಕ್ಕೂ ತದ್ವಿರುದ್ಧವಾಗಿತ್ತು. 'ರಾಜಕೀಯಂರಜೇಕ ಬಂಧನಂ' ಎಂದರೆ 'ರಾಜಕೀಯಕ್ಕೆ ಬಂಧಿಸಲ್ಪಡುವುದು' ಎಂಬ ಅರ್ಥವನ್ನು ನೀಡಿ ಅದರ ಬಗ್ಗೆ ಒಳ್ಳೆಯ ಭಾವನೆಯನ್ನು ನೀಡಿದರು. ಇದಕ್ಕೆ ಉತ್ತರವಾಗಿ ಮೋಟಮ್ಮ ಅವರು 1978ರ ಚುನಾವಣೆಯಲ್ಲಿ 18,232 ಮತಗಳ ಅಂತರದಿಂದ ಮೂಡಿಗೆರೆಯ ಕ್ಷೇತ್ರದಿಂದ ಆಯ್ಕೆಯಾದರು. ಹೀಗೆ ಮೋಟಮ್ಮ ಅವರ ರಾಜಕೀಯ ಪ್ರವೇಶ ಆಕಸ್ಮಿಕವಾದರೂ ಸೇವಾ ಮನೋಭಾವನೆಯಿಂದ ಅಭಿವೃದ್ಧಿಯನ್ನೆ ಮಾನದಂಡವಾಗಿಸಿಕೊಂಡು ರಾಜಕೀಯ ಪಟುವಾದರು.

ಮೋಟಮ್ಮ ಅವರು ಪುರುಷ ಪ್ರಧಾನ ಸಮಾಜದಲ್ಲಿ ಮಹಿಳೆಯರಿಗೆ ಹಲವಾರು ಯೋಜನೆಗಳನ್ನು ಜಾರಿಗೆ ತಂದರು. ಸ್ತ್ರೀಶಕ್ತಿ ಯೋಜನೆಯನ್ನು ಜಾರಿಗೆ ತಂದ ಸಂದರ್ಭದಲ್ಲಿ ಭಾರತದೇಶದ ಸ್ತ್ರೀಯರನ್ನು ಸಮಾಜದ ಮುಖ್ಯವಾಹಿನಿಗೆ ತರುವುದು ತೀರ ಕಷ್ಟದ ವಿಷಯವಾಗಿತ್ತು. ಹಾಗಾಗಿ ಸ್ತ್ರೀಯರನ್ನು ಆರ್ಥಿಕವಾಗಿ ಸಬಲರಾಗಿ ಮಾಡುವುದು ಮೋಟಮ್ಮ ಅವರ ಮೊದಲ ಉದ್ದೇಶವಾಗಿತ್ತು. ಈ ಕಾರಣದಿಂದ 'ಸಂತೆಗಾಗಿ ಸಾಲ' ಎಂಬ ಯೋಜನೆಯನ್ನು ಜಾರಿಗೆ ತಂದರು. ಇದರಿಂದ ಮಹಿಳೆಯರಿಗೆ ಸ್ವ ಉದ್ಯೋಗ ಮಾಡಲು ತಲಾ 'ಐವತ್ತು ಸಾವಿರ' ರೂಪಾಯಿಗಳ ಸಹಾಯಧನವನ್ನು ಕೊಡುವ ಮೂಲಕ ಪ್ರೋತ್ಸಾಹಿಸಿದರು. ಹಾಗೆಯೇ ಮಹಿಳೆಯರಲ್ಲಿ ಸಹಕಾರ, ಒಗ್ಗಟ್ಟಿನ ಮನೋಭಾವವನ್ನು ಮೂಡಿಸಲು ಸ್ವ-ಉದ್ಯೋಗ ಸಂಘಗಳ ಕಾರ್ಯಕ್ರಮವನ್ನು ಜಾರಿಗೆ ತರಲಾಯಿತು. ಇದರಿಂದ ಮಹಿಳೆಯರಲ್ಲಿ ಸ್ವಾವಲಂಬನೆ ಬೆಳೆಯಿತು. ಪ್ರಸ್ತುತ ಕರ್ನಾಟಕ ರಾಜ್ಯ ಸರ್ಕಾರವು ಮಹಿಳೆಯರ ಉದ್ಧಾರದಿಂದಲೇ ಸಮಾಜಕ್ಕೆ ಹಿತ ಎಂದು ತಿಳಿದು ಮಹಿಳೆಯರಿಗಾಗಿಯೇ ಕೆಲವು ಕಾರ್ಯಕ್ರಮಗಳನ್ನು ಜಾರಿಗೆತಂದಿದೆ. ಆರ್ಥಿಕ ಭದ್ರತೆಗಾಗಿ 'ಗೃಹಲಕ್ಷ್ಮಿ', 'ಗೃಹಜ್ಯೋತಿ' 'ಶಕ್ತಿ' ಮುಂತಾದ ಯೋಜನೆಗಳನ್ನು ಜಾರಿಗೆತಂದಿದೆ. ಇದರಿಂದ ಸ್ತ್ರೀಯರು ಪುರುಷರ ಮೇಲೆ ಅವಲಂಬಿತವಾಗದೇ ಸ್ವಾವಲಂಬಿಗಳಾಗಿ ಜೀವನ ನಡೆಸಲು ಸಹಕಾರಿಯಾಗಿದೆ. ರಾಜಕೀಯ ಕ್ಷೇತ್ರದಲ್ಲಿದ್ದ ಮೋಟಮ್ಮ ಅವರು ಮಹಿಳೆಯರ ಮೇಲೆ ನಡೆಯುತ್ತಿದ್ದ ಶೋಷಣೆ, ದಬ್ಬಾಳಿಕೆ, ದೌರ್ಜನ್ಯದ ವಿರುದ್ಧ ಧ್ವನಿ ಎತ್ತಿದ್ದಾಗ ಪುರುಷ ಕೇಂದ್ರಿತ ಸಮಾಜದಲ್ಲಿ ಹಲವಾರು ಕಷ್ಟದ ಸವಾಲುಗಳನ್ನು ಎದುರಿಸಬೇಕಾಯಿತು. ರಾಜಕೀಯದಲ್ಲಿ ಪ್ರಾಮಾಣಿಕತೆ ಮತ್ತು ಕರ್ತವ್ಯನಿಷ್ಠೆಯೂ ಮುಖ್ಯವಾಗಿರಬೇಕು. ಈ ಎರಡನ್ನು ಪಾಲಿಸಿಕೊಂಡು ನಿರಂತರ ಶ್ರಮ, ಅನುಭವವನ್ನು ಪಡೆಯುತ್ತ ರಾಜಕೀಯದಲ್ಲಿ ಉತ್ತುಂಗಕ್ಕೆ ಏರಬಹುದು. ನಮ್ಮ ಜೀವನದಲ್ಲಿ ಯಾವುದೇ ಕ್ಷೇತ್ರದಲ್ಲಾದರೂ ಗುರಿಯನ್ನು ಸಾಧಿಸಲು ಪ್ರಾಮಾಣಿಕತೆಯು ಬಲವಾದ ಅಡಿಪಾಯವಿದ್ದಂತೆ. ಈ ರೀತಿಯ ಬಲವಾದ ಅಡಿಪಾಯದ ಮೇಲೆ ನಿಂತಿರುವವರು ಮೋಟಮ್ಮ. ಇವರು ತಮ್ಮ ಪ್ರಾಮಾಣಿಕತೆಯನ್ನು ರಾಜಕೀಯದಲ್ಲಿ ಅಸ್ತ್ರವಾಗಿ ಬಳಸಿಕೊಂಡು ಶತ್ರುಗಳ ಪಿತೂರಿಯನ್ನು ವಿಚಾರವಂತಿಕೆಯಿಂದ ಎದುರಿಸುತ್ತಿದ್ದರು. ಚಿಕ್ಕಮಗಳೂರು ಜಿಲ್ಲೆಯಲ್ಲಿ 1991ರಲ್ಲಿ ದೇವರಗುಡ್ಡ ಎಂಬಲ್ಲಿದ್ದ ಸರ್ಕಾರಿ ಜಮೀನನ್ನು ಕೆಲವು ಕುಟುಂಬದವರ ಒತ್ತುವರಿ ಮಾಡಿಕೊಂಡಿದ್ದರು. ಆ ಸಂದರ್ಭದಲ್ಲಿ ಬೀಜ ಬಿಟ್ಟ ಕಾಫಿ ಗಿಡಗಳನ್ನು ಕಡಿದು ಹಾಕಿದ್ದಾರೆ. ಇದಕ್ಕೆ ಮೋಟಮ್ಮ ಅವರೇ ಕಾರಣ. ಅವರ ಆದೇಶದ ಮೇರೆಗೆ ಅರಣ್ಯ ಇಲಾಖೆ ಇಂಥ ಮನೆ ಹಾಳು ಕೆಲಸ ಮಾಡಿದೆ ಎಂಬ ವದಂತಿ ಎಲ್ಲಾಕಡೆ ಹಬ್ಬಿತು. ಇದರ ವಿರುದ್ಧವಾಗಿ ಪ್ರತಿಭಟನೆಗೆ ಅಲ್ಲಿನ ಜನರುಕರೆಕೊಟ್ಟರು. ಆದರೆ ಇದರಲ್ಲಿ ಯಾವುದೇ ತಪ್ಪು ಮಾಡಿಲ್ಲದ ಮೋಟಮ್ಮ ಅವರು ತಮ್ಮ ಕಾಯಕ ಮತ್ತು ಪ್ರಾಮಾಣಿಕತೆಯ ಮೇಲೆ ನಂಬಿಕೆ ಇಟ್ಟಿದ್ದರು. ಯಾರು ತಪ್ಪು ಮಾಡಿದ್ದಾರೋ ವಿಚಾರಣೆಯ ಮೂಲಕ ಸಾಬೀತಾಗಲಿ ಎಂದು

ಉತ್ತರಿಸಿದರು. ವಿಚಾರಣೆಯನ್ನು ಕೈಗೊಂಡ ಕಮಿಟಿಯು ಮೋಟಮ್ಮ ಅವರನ್ನು ನಿರ್ದೋಷಿ ಎಂದು ಹೇಳಿತು. ಈ ಘಟನೆಯ ನಂತರ ಮೋಟಮ್ಮ ಅವರು 'ಪ್ರಾಮಾಣಿ ಕತೆ ರಾಜಕಾರಣಿ' ಎಂಬ ಹೆಮ್ಮೆಯ ಹಣೆ ಪಟ್ಟಿಯೊಂದಿಗೆ ರಾಜ್ಯ ರಾಜಕೀಯದಲ್ಲಿ ಮಾದರಿಯಾಗಿ ಮುಂದುವರಿದರು.

ಬದುಕಿಗೆ ಗುರಿಯ ಜೊತೆ ಕನಸನ್ನು ಹೊಂದಿರಬೇಕು. ಕನಸನ್ನು ನನಸಾಗಿಸುವುದೇ ಗುರಿಯಾಗಿರುತ್ತದೆ. ಅದಕ್ಕೆ ಮಾನಸಿಕವಾಗಿ ಸದೃಢವಾಗಿರಬೇಕು. ದಿಟ್ಟತನ, ದಕ್ಷತೆ, ಪ್ರಾಮಾಣಿಕತೆಯಿಂದ ಯಶಸ್ಸನ್ನು ಗಳಿಸಲು ಸಾಧ್ಯ ಎಂಬುದು ಮೋಟಮ್ಮ ಅವರೇ ನಿದರ್ಶನ. ಮೋಟಮ್ಮ ಅವರು 1978ರಲ್ಲಿ ಎಂ.ಎಲ್.ಎ ಆಗಿ ಆಯ್ಕೆಯಾದರು. ನಂತರ 1989ರಲ್ಲಿ ಎರಡನೇ ಬಾರಿ ಎಂ.ಎಲ್.ಎ ಆಗಿ ಹಾಗೂ ಮೂರನೇ ಬಾರಿ 1999ರಲ್ಲಿ ಎಂ.ಎಲ್.ಎ ಆಗಿ ಮೂಡಿಗೆರೆ ಕ್ಷೇತ್ರದಿಂದ ಆಯ್ಕೆಯಾದರು. ಮೊದಲ ಬಾರಿಗೆ 1999ರಲ್ಲಿ ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆ ಸಚಿವೆಯಾಗಿ ನೇಮಕವಾದರು. 2006 ಮತ್ತು 2012ರಲ್ಲಿ ಎರಡು ಬಾರಿ ಎಂ.ಎಲ್.ಸಿ ಆಗಿ ಆಯ್ಕೆಯಾಗಿ 2010ರಲ್ಲಿ ವಿಧಾನ ಪರಿಷತ್ತಿನಲ್ಲಿ ವಿರೋಧಪಕ್ಷದ ನಾಯಕಿಯಾಗಿಯೂ ಕಾರ್ಯ ನಿರ್ವಹಿಸಿದ್ದಾರೆ.

'ಜೀವನ ಸಂಧ್ಯಾ ವೃದ್ಧಾಶ್ರಮ' ಮತ್ತು 'ಆಶಾಕಿರಣ ಅಂಧ ಮಕ್ಕಳ ಶಾಲೆ'ಗೆ ಅನುದಾನವು ಸಿಗದೆ ಇದ್ದ ಸಂದರ್ಭದಲ್ಲಿ ಇಲಾಖೆಯ ಮೂಲಕ ಅನುದಾನ ಸಿಗುವಂತೆ ಮಾಡಿದರು. ಇದರಿಂದ ವಿಕಲಚೇತನ ಮಕ್ಕಳ ಜೀವನ ಸುಧಾರಿಸಿತು. ಅವರಿಗೆ ಬಸ್ ಪಾಸ್ ಕೊಡಿಸಿದರು. ಮಾಸಾಶನದ ಹಣವನ್ನು ಏರಿಕೆ ಮಾಡಿದರು. ಅವರು ಸಮಾಜದಲ್ಲಿ ಆತ್ಮವಿಶ್ವಾಸದಿಂದ ಬದುಕಲು ಅನುವು ಮಾಡಿಕೊಟ್ಟರು. 1993ರಿಂದ 1994ರ ವರೆಗೆ 'ಮಲೆನಾಡುಅಭಿವೃದ್ಧಿ ಮಂಡಲಿ'ಯ ಅಧ್ಯಕ್ಷೆಯಾದರು.ಈ ಸಂದರ್ಭದಲ್ಲಿ ಮೂವತ್ತೈದು ಕೋಟಿ ರೂಪಾಯಿಗಳ ಅನುದಾನವನ್ನು ಬಿಡುಗಡೆ ಮಾಡಿ ರಸ್ತೆ ಸಂಪರ್ಕ, ಸೇತುವೆ ನಿರ್ಮಾಣದಂತಹ ಹಲವಾರು ಯೋಜನೆಗಳನ್ನು ಮಾಡಿದರು. 'ಆರಾಧನಾ' ಯೋಜನೆಯಡಿಯಲ್ಲಿ 36,000 ದೇವಾಲಯಗಳ ಪುನರುತ್ಥಾನ ಕಾರ್ಯಕ್ರಮಕ್ಕೆ ಚಾಲನೆ ನೀಡಿದರು. ಈ ಯೋಜನೆಯನ್ನು ಪ್ರಸ್ತುತ ಕೇಂದ್ರ ಸರ್ಕಾರ 'ಸ್ಕಿಲ್ ಇಂಡಿಯಾ' ಎಂಬ ಹೆಸರಿನಲ್ಲಿ ಉದ್ಯೋಗವಿಲ್ಲದ ಯುವಕರಿಗೆ ಕೌಶಲ್ಯ ತರಬೇತಿಯನ್ನು ನೀಡುತ್ತಿದೆ. ಈ ಯೋಜನೆಗಳು ಸಾಮಾಜಿಕವಾಗಿ ಜನಸಾಮಾನ್ಯರಿಗೆ ಉಪಯೋಗವಾಗುತ್ತಿದ್ದ ಹೊಸ ಯೋಜನೆಯನ್ನು ಅಭಿವೃದ್ಧಿ ಮಾಡಬೇಕಾದ ಕರ್ತವ್ಯ ಪ್ರಸ್ತುತ ಸರ್ಕಾರಕ್ಕಿದೆ.

ಹೀಗೆ ಗೊಂದಲದ ಮನಸ್ಸಿನಿಂದ ರಾಜಕೀಯ ಪ್ರವೇಶ ಮಾಡಿದ ಮೋಟಮ್ಮ ಅವರ ರಾಜಕೀಯ ಸಾಧನೆಯ ಗುರಿಯೂ ಸ್ಪಷ್ಟವಾಗಿತ್ತು. ಸಿಕ್ಕ ಅವಕಾಶವನ್ನು ಒಳ್ಳೆಯ ಕೆಲಸಕ್ಕೆ ಉಪಯೋಗಿಸಿಕೊಂಡರು. ರಾಜಕೀಯದಲ್ಲಿ ಬೆಳೆಯಬೇಕೆಂದರೆ ಮಿತ್ರರು ಹಾಗೂ ಶತ್ರುಗಳಿಂದ ಅನುಭವದ ಪಾಠ ಕಲಿತಾಗ ನಕಾರಾತ್ಮಕ, ಸಕಾರಾತ್ಮಕ ಆಲೋಚನೆ ಮತ್ತು ಕೆಲಸದ ಬಗ್ಗೆ ಅರಿವಾಗುತ್ತದೆ. ತಮ್ಮದೇ ಪಕ್ಷದವರ ಟೀಕೆಗಳು ಮತ್ತು ವಿರೋಧವನ್ನು ಎದುರಿಸಬೇಕಾಗುತ್ತದೆ ಸಾಮಾನ್ಯವಾಗಿ ಲಿಂಗ ತಾರತಮ್ಯವು ಕೌಟುಂಬಿಕ ಆದಿಯಾಗಿ ಸಮಾಜದ ಎಲ್ಲಕಡೆಯೂ ಹೆಣ್ಣನ್ನು ಶೋಷಣೆಗೆ ಗುರಿ ಮಾಡುತ್ತದೆ. ರಾಜಕೀಯ ಕ್ಷೇತ್ರವು ಇದಕ್ಕೆ ತೀರ ಹೊರತೇನಿಲ್ಲ. ಇಲ್ಲಿಯೂ ತಾರತಮ್ಯ, ಶೋಷಣೆ, ದೌರ್ಜನ್ಯ ಮುಂತಾದ ಪಿಡುಗುಗಳು ಹೆಣ್ಣನ್ನು ಪೀಡಿಸುತ್ತವೆ. ಇದೆಲ್ಲವನ್ನು ಸವಾಲಾಗಿಯೇ ಎದುರಿಸಿದ ಮೋಟಮ್ಮ ಅವರು ಪ್ರತಿಯೊಂದು ಸವಾಲುಗಳನ್ನು ತಮ್ಮ ರಾಜಕೀಯ ಜೀವನದ ಯಶಸ್ಸಿನ ಹಾದಿಯ ಮೆಟ್ಟಿಲುಗಳಾಗಿ ರೂಪಿಸಿಕೊಂಡರು.

ಪ್ರಸ್ತುತದಲ್ಲಿ ಮಹಿಳೆಯರ ಸಾಧನೆಗಳನ್ನು ಎಲ್ಲಾ ಕ್ಷೇತ್ರಗಳಲ್ಲೂ ಕಾಣಬಹುದು. ಪುರುಷಕೇಂದ್ರಿತ ಮುಷ್ಟಿಯಿಂದ ದೂರವಾಗಿ ಸ್ವ-ಇಚ್ಛೆಯಿಂದ ಕೆಲಸ ಮಾಡುವುಜರ ಜೊತೆಗೆ ಯಶಸ್ವಿಯಾಗುವುದು ಸುಲಭದ ಮಾತಲ್ಲ. ಆದರೆ ರಾಜಕೀಯ ಕ್ಷೇತ್ರವೂ ಸಾಧನೆಯ ಜೊತೆಗೆ ಸಮಾಜ ಸೇವೆಯನ್ನು ಮಾಡಲು ಉತ್ತಮ ವೇದಿಕೆಯಾಗಿದೆ. ಮಹಿಳೆ, ಪುರುಷ ಎಂಬ ಯಾವುದೇ ಲಿಂಗ ತಾರತಮ್ಯವಿಲ್ಲದೆ ಎಲ್ಲರೂ ಸಮಾನವಾಗಿ ಸೇವೆ ಮಾಡಲು ಅನುಕೂಲವಾಗುವಂತಹ ಕ್ಷೇತ್ರವೇ ರಾಜಕೀಯ ಕ್ಷೇತ್ರ. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ರಾಜಕೀಯ ಸಿದ್ಧಾಂತಗಳು ಸಾಮಾಜಿಕ, ಸಾಂಸ್ಕೃತಿಕ, ಶೈಕಣಿಕ ಕ್ಷೇತ್ರಗಳನ್ನು ನಿಯಂತ್ರಿಸುವ ಶಕ್ತಿಯುಳ್ಳದ್ದು. ಬಹುಮತ ಪಡೆದು ಸರ್ಕಾರ ರಚಿಸಿದ ಪಕ್ಷಗಳ ಕಾರ್ಯಸೂಚಿಗಳಾಧಾರಿತವಾಗಿ ಕೆಲವೊಮ್ಮೆ ಕಾನೂನುಗಳು ರಚಿತವಾಗುತ್ತವೆ. ಇನ್ನೂ ಕೆಲವೊಮ್ಮೆ ಜನಪರ ಕಾರ್ಯಗಳನ್ನು ಕುರಿತಂತೆ ರಚಿತವಾದ ಯೋಜನೆಗಳು ಸಮರ್ಥ ನಾಯಕತ್ವದ ಕೊರತೆಯಿಂದಲೋ ಅಥವಾ ಮಧ್ಯವರ್ತಿಗಳ ಹಾವಳಿಯಿಂದಲೋ ವಿಫಲವಾದ ಸನ್ನಿವೇಶಗಳು, ಸಂಗತಿಗಳು ಇವೆ. ಆದ್ದರಿಂದ ರಾಜಕೀಯ ಎನ್ನುವುದು ಯಾವುದೇ ದೇಶದ ಅಥವಾ ಯಾವುದೇ ಪ್ರದೇಶದ ಜನರ ಅಭಿವೃದ್ಧಿಯ ಮಾದರಿಯಾಗಿ ನಿಂತಾಗ ಅಲ್ಲಿ ಜನಸೇವೆಯೇ ಮುಖ್ಯಧ್ಯೇಯವಾಗಿರುತ್ತದೆ. ಒಂದು ಜನಾಂಗದ ಅಥವಾ ಒಂದು ವರ್ಗದ ಹಿತಾಸಕ್ತಿಗಾಗಿ ತೊಡಗಿದಾಗ ಅಸಮತೋಲನವುಳ್ಳ ಸಾಮಾಜಿಕ ವ್ಯವಸ್ಥೆ ನಿರ್ಮಾಣವಾಗುತ್ತದೆ. ಇದರಿಂದ ಅಸಮಾನ ಸಮಾಜಕ್ಕಾಗಿ ಮತ್ತೊಂದು ವರ್ಗ ಬೇಸತ್ತು ಸಾಮಾಜಿಕ ನ್ಯಾಯದ ಹೋರಾಟಕ್ಕೆ ಅವಕಾಶ ಕೊಡುತ್ತದೆ. ರಾಜ್ಯದ ಸರ್ವತೋಮುಖ ಅಭಿವೃದ್ಧಿಗೆ ಇರುವ ಸಂಪನ್ಮೂಲಗಳನ್ನು ಕ್ರೋಢೀಕರಿಸುವುದು ಒಂದು ಜಾಣ್ಮೆಯೇ ಆಗಿದೆ. ಜನರ ನಡುವೆ ಬೆಳೆದ ವ್ಯಕ್ತಿಗೆ, ಜನರಿಗೆ ಅಗತ್ಯವಾಗಿ ಬೇಕಾಗಿರುವ ಸವಲತ್ತುಗಳ ಬಗ್ಗೆ ಧ್ವನಿ ಎತ್ತುವ ಮೂಲಕ ಆ ಬಗ್ಗೆ ಗಮನ ಸೆಳೆಯುತ್ತಾರೆ.

ಒಟ್ಟಾರೆ ಮೋಟಮ್ಮನವರ ಜೀವನ ಪ್ರಾರಂಭದಿಂದಲೂ ಒಂದು ರೀತಿಯ ಸಮತೋಲಿತವಲ್ಲದ್ದು. ಕಾರಣ ಹುಟ್ಟಿದ ಮಗು ಗಂಡಲ್ಲ ಎಂಬ ಕಾರಣಕ್ಕೆ ಲಿಂಗ ತಾರತಮ್ಯ ಎದುರಿಸಿದರು. ರಾಜಕೀಯ ಪ್ರವೇಶವನ್ನು ಸ್ವಇಚ್ಛೇಯಿಂದಾಗದೆ ಪರರ ನಿರ್ಧಾರದಿಂದ ರಾಜಕೀಯ ಪ್ರವೇಶವಾದರು. ಅದಾಗ್ಯೂ ಒಳ್ಳೆಯ ರಾಜಕೀಯ ಪಟುವಾಗಿ ಸ್ತ್ರೀ ಏಳಿಗೆಯೊಂದಿಗೆ ಮಾದರಿಯಾದರು. ಪಕ್ಷಾತೀತವಾದಾಗಲೇ ಒಬ್ಬ ಹೆಣ್ಣು ಒಂದು ಯೋಜನೆಯ ಕಣ್ಣಾಗಿ ಶಕ್ತಿ ತುಂಬಲು ಸಾಧ್ಯ. ಈಗಾಗಿ ಮೋಟಮ್ಮ ಬರಿ ಹೆಸರಲ್ಲದೇ ಅವರು ರಾಜಕೀಯದಲ್ಲೊಂದು ಶಕ್ತಿಯಾದರು.

**ಆಕರ ಗ್ರಂಥ**


- ವೀರಣ್ಣಕಮ್ಮಾರ (ನಿರೂಪಣೆ). (2022). *ಶ್ರೀಮತಿ ಮೋಟಮ್ಮರವರ ಆತ್ಮಕಥನ-ಬಿದಿರು ನೀನ್ಯಾರಿಗಲ್ಲದವಳು*. ವಿಕಾಸ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 61-68
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಸಾಂಸ್ಕೃತಿಕ ಅಧ್ಯಯನದ ಹೊಸ ಸಾಧ್ಯತೆಗಳು

**ತಿಪ್ಪೇಶ ಬಿ[1] ಮತ್ತು ಡಾ. ಭೀಮಾಶಂಕರ ಜೋಷಿ[2]**

[1]ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಬೀಡಿ, ಬೆಳಗಾವಿ.

[2]ಸಹಾಯಕ ಪ್ರಾಧ್ಯಾಪಕರು, ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ದಾವಣಗೆರೆ ವಿಶ್ವವಿದ್ಯಾಲನಿಲಯ, ದಾವಣಗೆರೆ.

***Abstract:***

*'ಸಾಂಸ್ಕೃತಿಕ ಅಧ್ಯಯನ' ಎಂಬ ಪರಿಕಲ್ಪನೆ ಇತ್ತೀಚೆಗೆ ಹೆಚ್ಚು ಚರ್ಚಿತ ಮತ್ತು ಜನಪ್ರಿಯ ಸಂಶೋಧನಾ ವಿಧಾನವಾಗಿದೆ. 'ಸಂಸ್ಕೃತಿ'ಯ ಬಗೆಗಿನ ಜಿಜ್ಞಾಸೆ ಮತ್ತು ಬಹುಶಿಸ್ತೀಯ ವ್ಯಾಖ್ಯಾನಗಳು ಇದಕ್ಕೆ ಕಾರಣವಾಗಿರಬಹುದು. ಸಾಮಾನ್ಯವಾಗಿ 'ಸಾಂಸ್ಕೃತಿಕ ಅಧ್ಯಯನ' ಕ್ಕೆ ತೊಡಗುವ ಮೊದಲು ಎಲ್ಲಾ ಸಂಶೋಧಕರು 'ಸಂಸ್ಕೃತಿ'ಯ ಬಗ್ಗೆ ವ್ಯಾಖ್ಯಾನ ಮಾಡುವ ಕ್ರಮವನ್ನಿಟ್ಟುಕೊಂಡಿದ್ದಾರೆ. ಸಂಸ್ಕೃತಿಯ ಬಗ್ಗೆ ವ್ಯಾಖ್ಯಾನ ಮಾಡುವ ಪ್ರಯತ್ನವಾದರೂ ದೊಡ್ಡ ತೊಡಕಿನದಾಗಿದ್ದು ಕಾಲಕಾಲಕ್ಕೆ ಅರ್ಥ ವಿಸ್ತಾರಗೊಂಡಿರುವುದನ್ನು ಕಾಣಬಹುದಾಗಿದೆ. ಈಗಲೂ 'ಸಂಸ್ಕೃತಿ'ಯ ಬಗ್ಗೆ ಇದೇ ಅಂತಿಮ ವ್ಯಾಖ್ಯಾನವೆಂದು ಸಾಬೀತು ಪಡಿಸಲು ಸಾಧ್ಯವಾಗಿಲ್ಲ. ಇತಿಹಾಸಕಾರರ ಆದಿಯಾಗಿ ಮಾನವಿಕ ವಿಜ್ಞಾನಗಳೆಲ್ಲವೂ ಸಂಸ್ಕೃತಿಗೆ ಸಂಬಂಧಿಸಿದಂತೆ ವ್ಯಾಖ್ಯಾನವನ್ನು ನೀಡಿವೆ. ಆದ್ದರಿಂದ 'ಸಾಂಸ್ಕೃತಿಕ ಅಧ್ಯಯನ' ತೊಡಗಿಕೊಳ್ಳುವವರ ಮೇಲೆ ಅವರ ಬಹಶಿಸ್ತೀಯ ಹಿನ್ನೆಲೆ, ವೈಯಕ್ತಿಕತೆ ಮತ್ತು ಸೈದ್ಧಾಂತಿಕತೆ ಪ್ರಭಾವ ಬೀರುವ ಸಾಧ್ಯತೆ ಇರುತ್ತದೆ. ಅವನು, 'ಸಂಸ್ಕೃತಿ'ಯ ಬಗ್ಗೆ ಮಾಡಿಕೊಳ್ಳುವ ವಾಖ್ಯಾನದ ಮೇಲೆ 'ಸಾಂಸ್ಕೃತಿಕ ಅಧ್ಯಯನ'ಗಳು ನಿರ್ಧಾರವಾಗುತ್ತವೆ. ಆದ್ದರಿಂದ 'ಸಾಂಸ್ಕೃತಿಕ ಅಧ್ಯಯನ'ಗಳು ಹೆಚ್ಚು ನಿಖರವಾಗಿರುವುದಕ್ಕಿಂತ ಒಂದು ಊಹಾತ್ಮಕ ತಾರ್ಕಿಕ ವಿಶ್ಲೇಷಣೆಯನ್ನು ಅವಲಂಬಿಸಿರುತ್ತವೆ.*

***Keywords:*** *ಸಂಸ್ಕೃತಿ, ಸಾಂಸ್ಕೃತಿಕ ಅಧ್ಯಯನ, ಪಾಶ್ಚಿಮಾತ್ಯ, ಮಾನವಶಾಸ್ತ್ರ, ಭೌತಿಕ ಸಂಸ್ಕೃತಿ, ಅಭೌತಿಕ ಸಂಸ್ಕೃತಿ.*

## ಪೀಠಿಕೆ

'ಸಾಂಸ್ಕೃತಿಕ ಅಧ್ಯಯನ'ಗಳ ಇತಿಹಾಸ ಅಧಿಕೃತವಾಗಿ ಪ್ರಾರಂಭವಾದದ್ದು ಆಂಗ್ಲರಿಂದಲೇ ಎಂಬುದು ನಿರ್ವಿವಾದವಾಗಿದೆ. ಕರ್ನಲ್ ಮೆಕೆಂಜಿಯವರ ಹಸ್ತಪ್ರತಿ ಸಂಗ್ರಹ, ಬಿ. ಎಲ್ ರೈಸ್ ಮತ್ತು ಫ್ಲೀಟ್ ರವರ ಶಾಸನ ಸಂಗ್ರಹದ ಕಾರ್ಯಗಳನ್ನು ಈಗಿನ ಅರ್ಥದಲ್ಲಿ 'ಸಾಂಸ್ಕೃತಿಕ ಅಧ್ಯಯನ'ಗಳೆಂದು ಹೇಳಲು ಬಾರದಿದ್ದರೂ 'ಸಾಂಸ್ಕೃತಿಕ ಅಧ್ಯಯನ'ಗಳಿಗೆ ನಾಂದಿ ಹಾಡಿದವೆಂದು ಹೇಳಬಹುದು. ಮೊದಲ ಪ್ರಯತ್ನಗಳು ಅಧ್ಯಯನಕ್ಕೆ ಬದಲಾಗಿ ಸಂಗ್ರಹ ಮತ್ತು ಸಮೀಕ್ಷೆಗಳ ರೂಪದಲ್ಲಿಯೇ ಇದ್ದವು. ಜಾಗತಿಕವಾಗಿ 18 ಮತ್ತು 19 ನೇ ಶತಮಾನದಲ್ಲಿ ಸಂಸ್ಕೃತಿಯ ಆಳವಾದ ಮತ್ತು ವಿಶ್ಲೇಷಣಾತ್ಮಕವಾದ ಅಧ್ಯಯನ ಪ್ರಾರಂಭವಾದದ್ದು ಮಾನವಶಾಸ್ತ್ರಜ್ಞರಿಂದ. ಇವರ

***Please cite this article as:*** ತಿಪ್ಪೇಶ ಬಿ ಮತ್ತು ಭೀಮಾಶಂಕರ ಜೋಷಿ. (2024). ಸಾಂಸ್ಕೃತಿಕ ಅಧ್ಯಯನದ ಹೊಸ ಸಾಧ್ಯತೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್*, 3(3), 61–68

ಜೊತೆಗೆ ಸೇರಿಕೊಂಡವರು ಸಮಾಜಶಾಸ್ತ್ರಜ್ಞರು. ಇದಕ್ಕೂ ಮೊದಲು ಇತಿಹಾಸ ತಜ್ಞರು ಇತಿಹಾಸ ರಚನೆಯ ಭಾಗವಾಗಿ ಸಂಸ್ಕೃತಿ ಅಧ್ಯಯನದಲ್ಲಿ ತೊಡಗಿಕೊಂಡಿದ್ದರು. ಈ ಇತಿಹಾಸಕಾರರು ಆಧಾರಗಳಿಲ್ಲದೇ ಏನನ್ನು ಹೇಳದವರು. ಅದರಲ್ಲೂ ದಾಖಲು ಸಾಹಿತ್ಯವನ್ನು ಮಾತ್ರ ಸಂಸ್ಕೃತಿ ವಿಶ್ಲೇಷಣೆಗೆ ಬಳಸಿಕೊಂಡರು. ಅಲ್ಲದೇ ಕೆಲವೊಮ್ಮೆ ಅಂದಾಭಿಮಾನ, ರಾಷ್ಟ್ರೀಯತೆ ಮತ್ತು ಪ್ರಾಂತೀಯತೆಯಂತಹ ಅಂಶಗಳು ಇತಿಹಾಸಕಾರರಿಗೆ ಮಿತಿಯಾಗುವುದುಂಟು. ಗತಕಾಲದ ಒಂದು ಪಾರ್ಶ್ವಿಕ ನೋಟ ಮಾತ್ರ ಇತಿಹಾಸದಲ್ಲಿ ದೊರಕುತ್ತದೆ. ಪ್ರಾಚೀನ ಮಾನವನ ಸಂಪೂರ್ಣ ಜೀವನಕ್ರಮ ಇತಿಹಾಸದಲ್ಲಿ ದಾಖಲಾಗಿರುವುದಕ್ಕೆ ಸಾಧ್ಯವೇ ಇಲ್ಲ. ಆದ್ದರಿಂದ ಐತಿಹಾಸಿಕ ದಾಖಲೆಗಳನ್ನು ಆಧರಿಸಿದ 'ಸಾಂಸ್ಕೃತಿಕ ಅಧ್ಯಯನ'ಗಳು ಕೆಲವು ಮಿತಿಗಳಿಂದ ಕೂಡಿರಬಹುದು ಎನ್ನುವ ಅಭಿಪ್ರಾಯ ವ್ಯಕ್ತವಾಗಿದೆ.

ಇನ್ನೊಂದು ಸಮಸ್ಯೆ ಏನೆಂದರೆ 'ಸಂಸ್ಕೃತಿ'ಯ ಅಧ್ಯಯನದ ವಿಚಾರವು ರಾಜಕೀಯ ಹಿತಾಸಕ್ತಿಗಳಿಗೆ ಬಲಿಯಾಗಿರುವುದೂ ಉಂಟು. ಸ್ವಾತಂತ್ರ್ಯ ಪೂರ್ವದಲ್ಲಿ 'ಸಾಂಸ್ಕೃತಿಕ ಅಧ್ಯಯನ' ಮೂಲಕ ವಸಾಹತುಶಾಹಿ ರಾಷ್ಟ್ರಗಳು ಪ್ರತಿಪಾದಿಸಲುದ್ದೇಶಿಸಿದ ವಿಷಯವೇನೆಂಬುದು ಸ್ಪಷ್ಟ. 'ಸಂಸ್ಕೃತಿ' ಎಂಬುದಕ್ಕೆ ಅವರು ಕೊಟ್ಟುಕೊಂಡ ವ್ಯಾಖ್ಯಾನ ಕೂಡ ಅವರ 'ಸಾಂಸ್ಕೃತಿಕ ಅಧ್ಯಯನಗ'ಳ ಮೇಲೆ ಪ್ರಭಾವ ಬೀರಿದೆ. ವಸಾಹತುಶಾಹಿ ಹಿತಾಸಕ್ತಿಯ ಭಾಗವಾಗಿಯೇ ಅವರ ಅಧ್ಯಯನಗಳು ನಡೆದಿವೆ ಎಂಬುದರಲ್ಲಿ ಯಾವ ದ್ವಂದ್ವವಿಲ್ಲ. ಖ್ಯಾತ ವಿಮರ್ಶಕ ಕೀರ್ತಿನಾಥ ಕುರ್ತಕೋಟಿಯವರು ತಮ್ಮ 'ಭಾಷಾಂತರ' ಎಂಬ ಲೇಖನದಲ್ಲಿ ಈ ಬಗ್ಗೆ ದೀರ್ಘವಾಗಿ ವಿವೇಚಿಸಿದ್ದಾರೆ. 'ಭಾಷಾಂತರ'ವನ್ನು ಅವರು ನೋಡುವ ದೃಷ್ಟಿಕೋನವೇ ಭಿನ್ನವಾದುದು ಮತ್ತು ವ್ಯಾಪಕವಾದುದು. ಒಟ್ಟಾರೆ ಪೌರ್ವಾತ್ಯರ ಜೀವನಕ್ರಮವನ್ನೇ ಭಾಷಾಂತರಿಸಬೇಕೆಂದು ಪಾಶ್ಚಾತ್ಯರು ಬಯಸಿದರು. ಅವರ ಪ್ರತಿ ಅಧ್ಯಯನದ ಹಿಂದೆ ಈ ಉದ್ದೇಶ ಕೆಲಸ ಮಾಡಿದೆ. ಲೇಖನದ ಒಟ್ಟು ಸಾರಾಂಶದ ಪ್ರಕಾರ ಪಾಶ್ಚಾತ್ಯರ ಅಧ್ಯಯನದ ಉದ್ದೇಶ ಕೇವಲ ವ್ಯಾಪಾರಕ್ಕೆ ಪೂರಕ ವಾತಾವರಣ ಸೃಷ್ಟಿಸುವುದು ಮಾತ್ರವೇ ಆಗಿರದೇ ಎಲ್ಲಾ ರಂಗಗಳಿಗೆ ಅದನ್ನು ವಿಸ್ತರಿಸಿದರು.

'ಸಾಂಸ್ಕೃತಿಕ ಅಧ್ಯಯನ'ದಲ್ಲಿ ಪಾಶ್ಚಾತ್ಯರಿಗೆ ಎರಡು ಬಗೆಯ ದೃಷ್ಟಿಕೋನಗಳಿರುವುದು ಸ್ಪಷ್ಟ. ಒಂದು. ಪೌರ್ವಾತ್ಯರು ವಿಶೇಷವಾಗಿ ಭಾರತೀಯರಿಗೆ ತಮ್ಮದೇ ಆದ ಘನತೆಯುಳ್ಳ ಸಂಸ್ಕೃತಿಯೆಂಬುದು ಇಲ್ಲ. ನಾವು ಅವರನ್ನು ಸುಸಂಸ್ಕೃತರನ್ನಾಗಿ, ನಾಗರಿಕರನ್ನಾಗಿ ಮಾಡುವುದರ ಮೂಲಕ ಭಾರತೀಯರನ್ನು ಉದ್ಧಾರ ಮಾಡಬೇಕು ಎಂಬುದು. ಈ ದೃಷ್ಟಿಕೋನದವರು ಭಾರತೀಯರ ನಡೆ–ನುಡಿ, ಉಡುಪು, ಕಂದಾಚಾರಗಳನ್ನು ನೋಡಿ ಅನಾಗರಿಕರೆಂದು ಬಗೆದವರು. ಅಧ್ಯಯನಗಳ ಮೂಲಕ ಭಾರತೀಯರ ಈ ಸ್ಥಿತಿಗೆ ಕಾರಣವಾದ ಅಂಶಗಳನ್ನು ಶೋಧಿಸುವುದು ಮತ್ತು ಪರಿಹಾರವನ್ನು ಕೊಡುವುದು ಆಗಿತ್ತು. ಇನ್ನೊಂದು, ಭಾರತೀಯರ ಘನವಾದ ಸಂಸ್ಕೃತಿಯನ್ನು ಸೆಲೆಕ್ಟೀವ್ ಆಗಿ ಒಪ್ಪಿಕೊಂಡು ತಮ್ಮ ವಸಾಹತುಶಾಹಿ ಹಿತಾಸಕ್ತಿಗೆ ಪೂರಕವಾಗಿ ಬಳಸಿಕೊಳ್ಳುವುದಕ್ಕೆ ನೋಡಿದವರು. ಇವರು ತಮಗೆ ಪೂರಕವೆನಿಸಿದ ಕೆಲವು ಸಾಂಸ್ಕೃತಿಕ ಮೌಲ್ಯಗಳನ್ನು ವೈಭವೀಕರಿಸಿ ಭಾರತೀಯರ ಮನ ಗೆದ್ದು ತಮ್ಮ ಉದ್ದೇಶ ಸಾಧಿಸಿದವರು. ಹತ್ತನೆಯ ಶತಮಾನದಲ್ಲಿದ್ದ ಕ್ಷಾತ್ರ ಪರಂಪರೆ, ಸ್ವಾಮಿನಿಷ್ಠೆ, ಬಲಿದಾನಗಳನ್ನು ವೈಭವೀಕರಿಸಿ ಸಾಮ್ರಾಜ್ಯವಾದದ ತಮ್ಮ ಹಿತಾಸಕ್ತಿಗೆ ಪೂರಕವಾದ ಭಾರತೀಯ ಸಾಂಸ್ಕೃತಿಕ ರಂಗವನ್ನು ಸಜ್ಜುಗೊಳಿಸುವುದು ಇವರ ಉದ್ದೇಶವಿದ್ದಂತೆ ಕಾಣುತ್ತದೆ. ನಿದರ್ಶನಕ್ಕಾಗಿ ನೋಡುವುದಾದರೆ 12ನೇ ಶತಮಾನದಲ್ಲಿ ರಾಜಪ್ರಭುತ್ವವನ್ನು ವಿರೋಧಿಸಿದ ಜನಪರವಾದ ಶರಣ ಚಳುವಳಿಗಿಂತ 10ನೇ ಶತಮಾನದ ವೀರಪರಂಪರೆ, ಸ್ವಾಮಿನಿಷ್ಠೆ, ಬಲಿದಾನ, ಯುದ್ಧ

ಪ್ರೇರಣೆ. ರಾಜ ವೈಭವದ ಕಾಲವನ್ನು ಸಹಜವಾಗಿಯೇ ಒಪ್ಪಿಕೊಂಡರು. ಅಂದರೆ ಭಾರತೀಯ ನೆಲದಲ್ಲಿ ಯಾವತ್ತೂ ಏಕ ಪ್ರಕಾರದ ಸಾಂಸ್ಕೃತಿಕ ಪ್ರಸರಣವಿರಲಿಲ್ಲ. ಭಾರತೀಯ ಸಂಸ್ಕೃತಿಯಲ್ಲಿ ಗುಪ್ತಗಾಮಿನಿಯಾಗಿರುವ ಸೂಕ್ಷ್ಮವಾದ ಪ್ರತಿರೋಧಗಳನ್ನು ಅರಿಯದೇ ಹೋದರು. ಸಂಘರ್ಷ ಅಥವಾ ಬಹುತ್ವದ ಮಾದರಿಯನ್ನು ಗುರುತಿಸದೇ ಹೋದರು. ಸ್ವಾತಂತ್ರ್ಯೋತ್ತರ ಕಾಲದಲ್ಲಿಯ ಆರಂಭದಲ್ಲಿ ಇದೇ ಅಧ್ಯಯನ ಮಾದರಿ ಮುಂದುವರೆದಿರುವುದನ್ನು ಕಾಣಬಹುದಾಗಿದೆ. ಆಧುನಿಕೋತ್ತರ ಕಾಲಘಟ್ಟದಲ್ಲಿ 'ಸಂಸ್ಕೃತಿ'ಯ ಅಧ್ಯಯನ ಕುರಿತು ಹೊಸ ಒಳನೋಟಗಳು ದೊರೆತವು. ಮೌಖಿಕ ಪರಂಪರೆಯ ಸಾಮಗ್ರಿಗಳು ಅಧ್ಯಯನ ವ್ಯಾಪ್ತಿಯೊಳಗೆ ಬಂದವು.

ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರಗಳ ಬೆಳವಣಿಗೆಯಾದ ಮೇಲೆ 'ಸಾಂಸ್ಕೃತಿಕ ಅಧ್ಯಯನ' ಗಳ ಅಧ್ಯಯನಕ್ಕೆ ಹೊಸ ವ್ಯಾಪ್ತಿ ಮತ್ತು ದೃಷ್ಟಿಕೋನ ದೊರೆಯಿತು. ಮಾನವಶಾಸ್ತ್ರಜ್ಞರು ಮತ್ತು ಸಮಾಜಶಾಸ್ತ್ರಜ್ಞರು ಸಂಸ್ಕೃತಿಯನ್ನು ಪರಿಭಾವಿಸುವ ಮೂಲ ಗ್ರಹಿಕೆಯೇ ಬೇರೆ ತೆರನಾಗಿರುತ್ತದೆ. ಮಾನವಶಾಸ್ತ್ರಜ್ಞರಿಗೆ ಮಾನವನೇ ಪ್ರಮುಖ ಮತ್ತು ಪ್ರಥಮ. ರಾಷ್ಟ್ರ ಪ್ರಾಂತ್ಯ ಧರ್ಮಗಳಂತಹ ವಿಚಾರಗಳನ್ನು ದ್ವಿತೀಯವಾಗಿಯೇ ಕಂಡರು. ಪ್ರಪಂಚದಲ್ಲಿ ಮಾನವರು ದೇಶ, ಜನಾಂಗ, ಧರ್ಮ, ವರ್ಣ, ವರ್ಗಗಳ ದೃಷ್ಟಿಯಿಂದ ಭಿನ್ನವಾಗಿ ಕಂಡರೂ ಅವರ ಸಹಜ ಪ್ರವೃತ್ತಿಗಳು ಒಂದೇ ಆಗಿರುತ್ತವೆ. ಒಳ್ಳೆಯದು–ಕೆಟ್ಟದ್ದು, ನಾಗರಿಕ–ಅನಾಗರಿಕ, ಸ್ವಾರ್ಥ–ನಿಸ್ವಾರ್ಥ, ತ್ಯಾಗ–ಭೋಗ, ಸುಖ–ದುಃಖ ಹೀಗೆ ದ್ವಂದ್ವವೆನಿಸುವ ಸಂಗತಿಗಳು ಪ್ರಪಂಚದ ಎಲ್ಲಾ ಮನುಷ್ಯರಿಗೂ ಸಮಾನವಾಗಿವೆ ಎಂದು ಈ ಅಧ್ಯಯನಕಾರರು ಸಾರಿದರು. ಆದ್ದರಿಂದ ಸಾಂಸ್ಕೃತಿಕವಾಗಿ ಮುಂದುವರೆದಿರುವ ಮತ್ತು ಸಾಂಸ್ಕೃತಿಕವಾಗಿ ಹಿಂದುಳಿದವರು ಎಂಬ ವಿಭೇದವನ್ನು ಈ ಅಧ್ಯಯನಕಾರರು ತಿರಸ್ಕರಿಸಿದರು. ಇದು ಸಂಸ್ಕೃತಿ ಅಧ್ಯಯನದಲ್ಲಿ ಕ್ರಾಂತಿಕಾರಕ ದೃಷ್ಟಿಕೋನಗಳಿಗೆ ಕಾರಣವಾಯಿತು.

ಸ್ವಾತಂತ್ರ್ಯೋತ್ತರ ಕಾಲಘಟ್ಟದಲ್ಲಿ ವಸಾಹತುಶಾಹಿಗಳು ಹಾಕಿಕೊಟ್ಟ 'ಸಾಂಸ್ಕೃತಿಕ ಅಧ್ಯಯನ'ಗಳ ಮಾದರಿಗಳು ಮುಂದುವರೆದವು. ಇಲ್ಲಿ ಬದಲಾದ ಪರಿಸ್ಥಿತಿಯಲ್ಲಿ ಯುರೋಪಿನ ಅಥವಾ ಪಾಶ್ಚಾತ್ಯರ ಸಂಸ್ಕೃತಿಗೆ ಪ್ರತಿಯಾಗಿ ಭಾರತೀಯರಿಗೆ ತಮ್ಮ ಸಂಸ್ಕೃತಿಯ ಬಗ್ಗೆ ಅಭಿಮಾನ ಮತ್ತು ಶ್ರೇಷ್ಠತೆಯ ಬಗ್ಗೆ ಇರುವ ಹೆಮ್ಮೆಗಳು 'ಸಾಂಸ್ಕೃತಿಕ ಅಧ್ಯಯನ'ಗಳ ಮೇಲೆ ಪ್ರಭಾವ ಬೀರಿವೆ. ಸಂಸ್ಕೃತಿಗಳು ಭಿನ್ನವಾದರೂ ಅಧ್ಯಯನ ಮಾದರಿಗಳು ಒಂದೇ ಆಗಿರುವುದನ್ನು ಗಮನಿಸಬಹುದು. ಪ್ರಭುತ್ವದ ವೈಭವೀಕರಣ. ತ್ಯಾಗ ಬಲಿದಾನಗಳು, ಕಲೆ, ಸಂಗೀತ, ಸಾಹಿತ್ಯಗಳು ಶಾಸನಗಳಲ್ಲಿ ವ್ಯಕ್ತವಾದ ಜೀವನ ಕ್ರಮಗಳು ಬಹುತೇಕ ಅಧ್ಯಯನಗಳ ಮುಖ್ಯವಸ್ತುವಾಗಿವೆ. ಭಾರತದ ಸಾಂಸ್ಕೃತಿಕ ಚಿಂತಕರಲ್ಲಿ ಪ್ರಮುಖರಾದ ಆನಂದ ಕುಮಾರಸ್ವಾಮಿ ಯವರ ಪ್ರಭಾವವನ್ನು ಗುರುತಿಸಬಹುದು. ಇವರ ಪ್ರಭಾವ ಕನ್ನಡದ ಡಿ.ವಿ.ಜಿ, ಮಾಸ್ತಿ ಮತ್ತು ದೇವುಡು ರವರ ಬರೆಹಗಳಲ್ಲಿ ಕಾಣಬಹುದು. ರಾಷ್ಟ್ರೀಯತೆಯ ಉದಯ, ದೇಶಪ್ರೇಮ, ಸ್ವಾತಂತ್ರ್ಯ ಹೋರಾಟದ ಸ್ಫೂರ್ತಿಗಳು ಉದಯವಾದ ಕಾಲಘಟ್ಟದಲ್ಲಿ ಈ ರೀತಿಯ ಅಧ್ಯಯನಗಳ ಅವಶ್ಯಕತೆಯೂ ಭಾರತಕ್ಕಿತ್ತು.

ವಸಾಹತೋತ್ತರ ಕಾಲಘಟ್ಟದಲ್ಲಿ ಪ್ರಮುಖ ಪಾತ್ರವಹಿಸುವ ವಾಸ್ತವವಾದ, ಅಸ್ತಿತ್ವವಾದ, ಆಧುನಿಕತೆ, ನವ್ಯವಾದ, ಸಂರಚನಾವಾದ, ನಿರಚನವಾದ, ಮಾರ್ಕ್ಸ್‌ವಾದಗಳು ಪ್ರಚಲಿತಕ್ಕೆ ಬಂದಮೇಲೆ 'ಸಾಂಸ್ಕೃತಿಕ ಅಧ್ಯಯನ'ಗಳ ಮಾದರಿಗಳು ಬೇರೆಯದೇ ಸ್ವರೂಪ ಪಡೆದವು. ಆರಂಭದಲ್ಲಿದ್ದ ಆದರ್ಶವಾದ ಅಥವಾ ನೈತಿಕ ಉನ್ನತವಾದದಲ್ಲಿದ್ದ ಸಾಂಸ್ಕೃತಿಕ ಅಧ್ಯಯನಗಳ ಮಿತಿಗಳು ಸ್ಪಷ್ಟವಾಗಿ ಗೋಚರವಾಗತೊಡಗಿದವು. ಈ

ವೇಳೆಗಾಗಲೇ 'ಗ್ರಾಂಶಿಯೋ'ನ 'ಸಾಂಸ್ಕೃತಿಕ ಯಾಜಮಾನ್ಯ' ಪರಿಕಲ್ಪನೆಯು ಬೇರೆಯದೇ ಆದ ಸತ್ಯವನ್ನು ಪ್ರತಿಪಾದಿಸಿತು. ಭಾಷಾ ವಿಜ್ಞಾನದಲ್ಲಿ ನಡೆದ ಹೊಸ ಅವಿಷ್ಕಾರಗಳು ಸಾಂಸ್ಕೃತಿಕ ಅಧ್ಯಯನಗಳ ಬಗ್ಗೆ ಬೇರೆಯದೇ ಒಳನೋಟಗಳನ್ನು ನೀಡಿದವು. ಈಗಾಗಲೇ ಹೇಳಿದಂತೆ ಮಾನವಶಾಸ್ತ್ರ ಮತ್ತು ಸಮಾಜಶಾಸ್ತ್ರದಂತಹ ಶಾಖೆಗಳು 'ಸಾಂಸ್ಕೃತಿಕ ಅಧ್ಯಯನಗಳ' ಹೊಣೆ ತಮ್ಮದೆಂದು ಭಾವಿಸಿದವು.

**'ಸಾಂಸ್ಕೃತಿಕ ಅಧ್ಯಯನಗಳ' ಕಾಲ ಮುಗಿದು ಹೋಗಿದಿಯಾ?**

ಇಂತಹದ್ದೊಂದು ಅಭಿಪ್ರಾಯ ಅಕಾಡೆಮಿಕ್ ವಲಯದಲ್ಲಿ ಮೂಡಿದೆ. ಇದಕ್ಕೆ ಕಾರಣಗಳು ಹಲವು. ಸಾಂಸ್ಕೃತಿಕ ಅಧ್ಯಯನಗಳ ಮೇಲೆ ಹೊರಿಸಲಾದ ಆರೋಪಗಳಿವು.

- ಸಾಂಸ್ಕೃತಿಕ ಅಧ್ಯಯನಗಳು ಒಂದು ಸಿದ್ಧ ಮಾದರಿಯಲ್ಲಿ ನಡೆಯುತ್ತಾ ಸಾಗಿವೆ. ಇವುಗಳಲ್ಲಿ ವೈವಿಧ್ಯತೆಯಾಗಲಿ ನವೀನ ಸಂಶೋಧನಾ ವಿನ್ಯಾಸವಾಗಲಿ ಕಾಣಲಾಗುತ್ತಿಲ್ಲ.
- ಆರಂಭದಲ್ಲಿ ಅದ್ಭುತವೆನಿಸುವ ವಿಶ್ಲೇಷಣೆ ಮತ್ತು ಅಧ್ಯಯನಗಳು ನಡೆದವು. ಅವು ಪ್ರಸಿದ್ಧವೂ ಜನಪ್ರಿಯವೂ ಆದವು. ನಂತರ ಬಂದ ಅಧ್ಯಯನಗಳು ಅವುಗಳ ಚರ್ವಿತ ಚರ್ವಣ ಮಾದರಿಯನ್ನು ಅನುಸರಿಸಿದವು.
- ಇತಿಹಾಸಕಾರ ಮಾಡುವ ಕೆಲಸವನ್ನು ಸಾಂಸ್ಕೃತಿಕ ಅಧ್ಯಯನಕಾರ ವಹಿಸಿಕೊಂಡನು. ದಾಖಲಾದ ಸಾಹಿತ್ಯದ ಅಥವಾ ಸಾಮಗ್ರಿಗಳ ಆಧಾರದ ಮೇಲೆ ವರದಿ ಬರೆಯುವ ಮಟ್ಟಕ್ಕೆ ಸಾಂಸ್ಕೃತಿಕ ಅಧ್ಯಯನಗಳು ಸೀಮಿತವಾದುವು.
- ಸಾಂಸ್ಕೃತಿಕ ಅಧ್ಯಯನಗಳ ವ್ಯಾಪ್ತಿ ಕೂಡ ವಿಸ್ತಾರವಾದಂತೆ ಪ್ರತಿಯೊಂದು ಸಂಗತಿಯ ಮುಂದೆ 'ಸಾಂಸ್ಕೃತಿಕ ಅಧ್ಯಯನ' ಎಂಬ ಹೆಸರಿಟ್ಟು ಸಂಶೋಧನೆಗಳು ನಡೆಯುತ್ತಿವೆ. ಪ್ರದೇಶ, ಜನಾಂಗ, ಸಾಹಿತ್ಯ ಕೃತಿಗಳು, ಸಾಹಿತಿಗಳು, ಭಾಷೆ, ಮೌಖಿಕ ಆಚರಣೆಗಳು, ಧಾರ್ಮಿಕ ಆಚರಣೆಗಳು ಹೀಗೆ ಸಾಂಸ್ಕೃತಿಕ ಅಧ್ಯಯನಗಳಿಗೆ ಮಿತಿ ಎಂಬುದು ಇಲ್ಲವಾಗಿದೆ.
- 'ಸಾಂಸ್ಕೃತಿಕ ಅಧ್ಯಯನ'ಗಳಲ್ಲಿ ಊಹನಾತ್ಮಕ ವಿಶ್ಲೇಷಣೆಯ ಅವಲಂಬಿಸಿರುತ್ತದೆ. ಜನರ ಜೀವನಕ್ರಮ, ನಂಬಿಕೆ, ಆಚರಣೆಗಳನ್ನು ಅಧ್ಯಯನ ಮಾಡುವಾಗ ವೈಯಕ್ತಿಕತೆಯ ಅಂಶ ಪ್ರಭಾವ ಬೀರುತ್ತದೆ. ಒಂದೇ ಸಂಗತಿ ಸಂಶೋಧಕರಿಗೆ ಭಿನ್ನವಾದ ಯೋಚನೆಗೆ ಕಾರಣವಾಗಬಹುದು ಅಥವಾ ತಾವು ನಂಬಿಕೊಂಡಿರುವ ಸೈದ್ಧಾಂತಿಕ ವಿಚಾರಧಾರೆ ಪ್ರಭಾವ ಬೀರಬಹುದು.

ಉದಾಹರಣೆಗೆ ಕೊಟ್ಟೂರೇಶ್ವರ ಜಾತ್ರೆಯ ಸಂದರ್ಭದಲ್ಲಿ(ಬಹುತೇಕ ಜಾತ್ರೆಗಳಲ್ಲಿ) ತೇರಿಗೆ ಎಸೆಯುವ ಬಾಳೆಹಣ್ಣನ್ನು ಅದು ನೆಲಕ್ಕೆ ಬೀಳುವ ಮೊದಲೇ ಹಿಡಿದು ತಿಂದರೆ ಒಳ್ಳೆಯದಾಗುತ್ತದೆ ಎಂಬ ನಂಬಿಕೆ ಜನರಲ್ಲಿದೆ. ಅರುಣ್ ಜೋಳದ ಕೂಡ್ಲಿಗೆಯವರು ಈ ಆಚರಣೆಯ ಹಿಂದೆ ಇರುವ ಸಾಂಸ್ಕೃತಿಕ ಸೂಕ್ಷ್ಮವನ್ನು ಗುರುತಿಸಿರುವರು. ಜಾತ್ರೆಯಲ್ಲಿ ವರ್ಣಭೇದವಿಲ್ಲದೇ ಎಲ್ಲರೂ ಸೇರಿರುತ್ತಾರೆ. ಒಬ್ಬ ತಳ ಸಮುದಾಯದ ವ್ಯಕ್ತಿ ಎಸೆದ ಬಾಳೆಹಣ್ಣನ್ನು ಉನ್ನತ ವರ್ಣದ ವ್ಯಕ್ತಿ ಪ್ರಸಾದವೆಂದು ಸ್ವೀಕರಿಸುತ್ತಾನೆ. ಈ ಆಚರಣೆಯ ಮುಖಾಂತರ ವರ್ಣಸಂಘರ್ಷದ ತೀವ್ರತೆಯನ್ನು ಕಡಿಮೆ ಮಾಡುವ ಉದ್ದೇಶವಿತ್ತೆಂದು ತೋರುತ್ತದೆ.

- ಇಂದು ಜಗತ್ತಿನಾದ್ಯಂತ ಮಾನವರಲ್ಲಿಯೇ ಕಂಡುಬರುವ ವರ್ಗಸಂಘರ್ಷ, ವರ್ಣಸಂಘರ್ಷ,

ವರ್ಣಭೇದನೀತಿ, ತರ–ತಮಭಾವಗಳು, ಗುಲಾಮಿತನ, ಧರ್ಮ ಸಂಘರ್ಷ, ಭಾಷಾ ಸಂಘರ್ಷಗಳು, ಪ್ರಾಂತೀಯತೆ, ಜನಾಂಗವಾದ, ಸಾಮ್ರಾಜ್ಯವಾದ, ವಸಾಹತುಶಾಹಿ ಮನೋಸ್ಥಿತಿಗಳ ಹಿಂದಿನ ಪ್ರೇರಣೆ ಪ್ರಭಾವಗಳನ್ನು ಕಂಡುಕೊಳ್ಳಲು 'ಸಾಂಸ್ಕೃತಿಕ ಅಧ್ಯಯನ' ಗಳು ಮಹತ್ವವಾಗಿವೆ.

- ಮಾನವನನ್ನು ಇತರೆ ಜೀವರಾಶಿಗಳಿಂದ ಭಿನ್ನವಾಗಿಸಿಟ್ಟಿರುವುದು ಸಂಸ್ಕೃತಿ ಎಂದು ಹೇಳುತ್ತೇವೆ. ಈ ಸಂಸ್ಕೃತಿಯನ್ನು ಇತರೆ ಜೀವರಾಶಿಗಳಲ್ಲಿ ಕಾಣಲಾರೆವು. ಆದ್ದರಿಂದಲೇ ಆ ಜೀವರಾಶಿಗಳು ನಿಸರ್ಗದಲ್ಲಿ ಸಹಜವೆಂಬಂತೆ ಬದುಕಿವೆ. ಆದರೆ ಮನುಷ್ಯನು ಅಸಹಜವಾಗಿ ಬದುಕಲು ಎರಡು ಅಂಶಗಳು ಮುಖ್ಯವಾಗಿವೆ. ಒಂದು ಸಂಸ್ಕೃತಿ. ಇನ್ನೊಂದು ನಾಗರಿಕತೆ. ಈ ಎರಡು ಬೆಳೆದು ಬಂದ ಬಗೆ ಮತ್ತು ಮಾಡಿದ ಪರಿಣಾಮಗಳನ್ನು ಅಧ್ಯಯನ ಮಾಡಲು 'ಸಾಂಸ್ಕೃತಿಕ ಅಧ್ಯಯನ'ಗಳು ಮುಖ್ಯವಾಗಿವೆ.

- ಖ್ಯಾತ ಭಾಷಾಶಾಸ್ತ್ರಜ್ಞ ನೋಮ್ ಚಾಮ್ಸ್ಕಿ, ಅಲೆಗ್ಸಾಂಡರ್ ಗ್ರಾಶಿಯೋ, ಫರ್ಡಿನೆಂಡ್ ಡಿ ಸಸೂರು ಮುಂತಾದ ಭಾಷಾಶಾಸ್ತ್ರಜ್ಞರು ಪ್ರತಿಪಾದಿಸಿದ ವಿಚಾರಧಾರೆಗಳು 'ಸಾಂಸ್ಕೃತಿಕ ಅಧ್ಯಯನ'ಗಳ ಮೇಲೆ ಹೊಸ ಪ್ರಭಾವ ಬೀರಿವೆ. ಅವರ ವಿಚಾರಧಾರೆಗಳು ಭಾಷಾಶಾಸ್ತ್ರಕ್ಕೆ ಸೀಮಿತವಾಗದೇ ವಿಶಾಲಾರ್ಥದಲ್ಲಿ ಸಂಸ್ಕೃತಿ ಕ್ಷೇತ್ರವನ್ನು ಒಳಗೊಂಡಿವೆ.

- ಮೇಲ್ನೋಟಕ್ಕೆ ಕಾಣುವ ಸಮಾಜವೊಂದರ ಸಂಸ್ಕೃತಿಯ ಆಳದಲ್ಲಿ ಹಲವು ವೈರುಧ್ಯಗಳು, ಪ್ರತಿರೋಧಗಳು, ಪ್ರತಿಕ್ರಿಯೆಗಳು, ಐತಿಹಾಸಿಕ ಘಟನೆಗಳು ಸೂಕ್ಷ್ಮವಾಗಿ ಸೇರಿರುತ್ತವೆ. 'ಸಾಂಸ್ಕೃತಿಕ ಅಧ್ಯಯನ'ದ ಮೂಲಕ ಆ ಸೂಕ್ಷ್ಮತೆಗಳನ್ನು ಗುರುತಿಸಬೇಕಾಗುತ್ತದೆ.

- ಒಂದು ನಿರ್ದಿಷ್ಟ ಪ್ರದೇಶದ ಸಾಂಸ್ಕೃತಿಕ ಅಧ್ಯಯನವು ಆ ಪ್ರದೇಶದ ಚರಿತ್ರೆ ಮತ್ತು ಪೌರಾಣಿಕ ಅಂಶಗಳನ್ನು ಒಳಗೊಂಡಿರುವುದು ಸರ್ವೇ ಸಾಮಾನ್ಯವಾಗಿದೆ. ಬಹಳ ದಿನಗಳವರೆಗೆ ಈ ಎರಡೇ ಅಂಶಗಳು ಸಾಂಸ್ಕೃತಿಕ ಅಧ್ಯಯನದಲ್ಲಿ ಪ್ರಮುಖ ಪಾತ್ರ ವಹಿಸಿದ್ದನ್ನು ನೋಡುತ್ತೇವೆ. ಆರಂಭದಲ್ಲಿ ಈ 'ಸಾಂಸ್ಕೃತಿಕ ಅಧ್ಯಯನ'ವೆಂಬ ಪರಿಕಲ್ಪನೆ ಸಹ ನಿಸ್ಸಂಶಯವಾಗಿ ವಸಾಹತುಶಾಹಿ ಚಿಂತನೆಯ ಫಲಶ್ರುತಿಯೇ ಆಗಿದೆ. ಮ್ಯಾಥೋ ಅರ್ನಾಲ್ಡ್ ಮತ್ತಿತರರು ಸಂಸ್ಕೃತಿಯ ಅಧ್ಯಯನದ ಮೂಲಕ ಜಗತ್ತಿನಲ್ಲಿರುವ ಮಾನವ ಕಲ್ಯಾಣವನ್ನು ಸಾಧಿಸಲು, ಒಳ್ಳೆಯ ಮೌಲ್ಯಗಳನ್ನು ಪ್ರಸರಿಸಲು ಸಂಸ್ಕೃತಿಯನ್ನೇ ಆಯುಧವನ್ನಾಗಿ ಮಾಡಿಕೊಳ್ಳುವ ಚಿಂತನೆಯಲ್ಲಿದ್ದವರು. ಸಹಜವಾಗಿಯೇ ಸಂಸ್ಕೃತಿಯ ಅಧ್ಯಯನವೆಂದರೆ ವೀರ, ಬಲಿದಾನಗಳ ಕಥೆಯನ್ನು ಹೇಳುವುದು, ಸಹಜವಾಗಿಯೇ ಅದು ಭಾರತದ ಸಾಂಸ್ಕೃತಿಕ ಅಧ್ಯಯನಗಳ ಮೇಲೆ ಪ್ರಭಾವ ಬೀರಿದೆ. ಆದರೆ ಭಾರತದಂತಹ ಪೌರ್ವಾತ್ಯ ರಾಷ್ಟ್ರಗಳು ಚರಿತ್ರೆಯನ್ನು ಕಟ್ಟಿಕೊಡುವ ರೀತಿ ಪಾಶ್ಚಾತ್ಯರಿಗಿಂತ ಭಿನ್ನವಾದುದ್ದೇ ಆಗಿತ್ತು. ಪುರಾಣ ಇತಿಹಾಸದ ಜೊತೆ ಅಪಾರವಾದ ಮೌಖಿಕ ಪರಂಪರೆಯನ್ನು ಚರಿತ್ರೆಯ ರಚನೆಯಲ್ಲಿ ಬಳಸಿಕೊಳ್ಳುವಲ್ಲಿ ನಿರ್ಲಕ್ಷಿಸಿದವು. ಆದ್ದರಿಂದಲೇ ಪುರಾಣದೊಳಗೆ ಚಾರಿತ್ರಿಕ ಅಂಶಗಳು, ಚರಿತ್ರೆಯೊಳಗೆ ಪೌರಾಣಿಕ ಸಂಗತಿಗಳು ನುಸುಳಿಕೊಂಡುಬಿಡುವುದು ಸಾಮಾನ್ಯ ಸಂಗತಿ. ಆದ್ದರಿಂದಲೇ ಪಾಶ್ಚಾತ್ಯರು ಭಾರತೀಯರಿಗೆ ಐತಿಹಾಸಿಕ ಪ್ರಜ್ಞೆ ಇಲ್ಲವೆಂದು ಹೇಳುತ್ತಾ ಬಂದರು. ಹಾಗಾದರೆ ಭಾರತೀಯರಿಗೆ ಇತಿಹಾಸದ ಅರಿವೇ ಇರಲಿಲ್ಲವೇ ಎಂದರೆ ತಪ್ಪಾದೀತು. ಇತಿಹಾಸದ ವ್ಯಕ್ತಿ, ಸ್ಥಳ ಮತ್ತು ಘಟನೆಗಳನ್ನು ಹೇಗಾದರೂ ಮಾಡಿ ಪುರಾಣದೊಂದಿಗೆ ತಳುಕು ಹಾಕಿ ಕಥೆ ಹೇಳುವುದು ಭಾರತೀಯರ ಒಂದು ವಿಶಿಷ್ಟ ವಿಧಾನವಾಗಿದೆ. ಪಾಶ್ಚಾತ್ಯರು ಹೇಳುವ ವೈಜ್ಞಾನಿಕ ಇತಿಹಾಸದ ಮಾನದಂಡಗಳಿಗೆ ಇವು ನಿಲುಕುವುದಿಲ್ಲ. ಪಾಶ್ಚಾತ್ಯರ ದೃಷ್ಟಿಕೋನದ ಇತಿಹಾಸ ನಮಗೆ ತಿಳಿಸಿದ್ದು ಕಾಲುಬಾಗವಾದರೆ ತಿಳಿಸದೇ ಬಿಟ್ಟಿದ್ದು ಮುಕ್ಕಾಲು ಭಾಗವಾಗಿದೆ. ಈ ಮುಕ್ಕಾಲು ಭಾಗದ ಇತಿಹಾಸ ಶಾಸನ, ಸ್ಮಾರಕ, ದಸ್ತಾವೇಜುಗಳಲ್ಲಿ ಹುಡುಕಿದರೆ ಸಿಗಲಾರದು. ಅದನ್ನು ಜೀವಂತ ಮೌಖಿಕ ಪರಂಪರೆಯಲ್ಲಿ ಅಡಗಿ ಕುಳಿತ ಸಂಪ್ರದಾಯಗಳಲ್ಲಿ ಆಚಾರ ವಿಚಾರಗಳಲ್ಲಿ ಹುಡುಕಬೇಕಾದ ಅನಿವಾರ್ಯತೆ ಇದೆ. ಇದು ಸುಲಭದ ಮಾತಲ್ಲ.

ಯಾವ ವೈಜ್ಞಾನಿಕ ವಿಧಾನಗಳಿಂದಲೂ ಇದನ್ನು ಸಮರ್ಥಿಸಲು ಅಥವಾ ಗಣಿತದ ತಾರ್ಕಿಕತೆಯಂತೆ ನಿಖರವಾಗಿ ಹೇಳಲು ಸಾಧ್ಯವಾಗುವುದಿಲ್ಲ. ಆದರೆ ಜನ ಜೀವನ ವಿಧಾನದ ಒಳಗಿರುವ ಸಾಂಸ್ಕೃತಿಕ ಪ್ರತಿರೋಧಗಳನ್ನೋ, ಸಮನ್ವಯತೆಯನ್ನೋ, ಸಂಘರ್ಷಗಳನ್ನು ತಾರ್ಕಿಕವಾಗಿ ವಿಶ್ಲೇಷಿಸಬಹುದಷ್ಟೆ. ಈ ಲೇಖನದಲ್ಲಿ ಹರಿಹರ ತಾಲೂಕಿನ ಹರಿಯುವ ತುಂಗಭದ್ರಾ ನದಿಯನ್ನು ಹಿನ್ನೆಲೆಯಾಗಿಟ್ಟುಕೊಂಡು ನದಿಯ ಎರಡು ಬದಿಯ ಜನರ ಜೀವನ ಕ್ರಮಗಳ ತೌಲನಿಕ ಅಧ್ಯಯನವನ್ನು ಮಾಡುವ ಪ್ರಯತ್ನ ಮಾಡಿದ್ದೇನೆ. ಇತಿಹಾಸ ಮತ್ತು ಪುರಾಣಗಳನ್ನು ಪಕ್ಕಕ್ಕಿಟ್ಟು ಸಂಪ್ರದಾಯ ಮತ್ತು ಪರಂಪರೆಗಳನ್ನು ಕುರಿತು ವಿಶ್ಲೇಷಿಸಿದ್ದೇನೆ.

ಡಾ.ಎಚ್.ತಿಪ್ಪೇರುದ್ರಸ್ವಾಮಿಯವರ ಅಭಿಪ್ರಾಯ ದಂತೆ ನಾಗರಿಕತೆ ಮತ್ತು ಸಂಸ್ಕೃತಿ ಭಿನ್ನವಾದವುಗಳು. ನಾಗರಿಕತೆ ಭೌತಿಕವಾದುದ್ದಾದರೆ ಸಂಸ್ಕೃತಿ ಮಾನವನ ಆಂತರಿಕವಾದ ನಡವಳಿಕೆ ಆಚಾರ–ವಿಚಾರಗಳಿಗೆ ಸಂಬಂಧಿಸಿದ್ದಾಗಿದೆ. ನಾಗರಿಕತೆ ಮಾನವ ನಿರ್ಮಿತ ಭೌತಿಕ ರಚನೆಗಳನ್ನು ಅಥವಾ ವಿಜ್ಞಾನದ ಕೊಡುಗೆಗಳಿಗೆ ಸಂಬಂಧಿಸಿದ್ದರೆ ಸಂಸ್ಕೃತಿಯು ಸೈದ್ಧಾಂತಿಕತೆ ಮತ್ತು ತಾತ್ವಿಕತೆಗೆ ಸಂಬಂಧಿಸಿದೆ. ಇವೆರೆಡೂ ಪ್ರಭಾವಶಾಲಿಗಳಾಗಿವೆ. ಈ ಪ್ರಭಾವಗಳನ್ನು ಗುರುತಿಸಲು 'ಸಾಂಸ್ಕೃತಿಕ ಅಧ್ಯಯನ' ಅಗತ್ಯವಾಗಿದೆ.

### 'ಸಾಂಸ್ಕೃತಿಕ ಅಧ್ಯಯನ'ಗಳ ಹೊಸ ಸಾಧ್ಯತೆಗಳು

'ಸಾಂಸ್ಕೃತಿಕ ಅಧ್ಯಯನ'ವನ್ನು ಕೇವಲ ಇತಿಹಾಸದ ಸಂರಚನೆಯ ಮಟ್ಟಕ್ಕೆ ಇಳಿಸದೆ ಸಮಾಜಶಾಸ್ತ್ರ ಮತ್ತು ಮಾನವಶಾಸ್ತ್ರಗಳ ಅಗತ್ಯ ನೆರವು ಪಡೆದುಕೊಂಡು ಅಚಿತರ್ ಶಿಸ್ತೀಯ ಅಧ್ಯಯನ ಮಾಡುವುದು ಇಂದಿನ ಅಗತ್ಯವಾಗಿದೆ. ಮೌಖಿಕ ಪರಂಪರೆಯ ಹಲವು ಪಳೆಯುಳಿಕೆಗಳು ಇನ್ನೂ ಕೆಲವು ಜೀವಂತವಾಗಿದ್ದು ಸಾವಯವ ಸಮಾಜದ ಗತಕಾಲದ ಜೀವನದ ದರ್ಶನವನ್ನು ನೀಡುತ್ತವೆ. ಚರಿತ್ರೆಯು ಹೇಳದ ಅನೇಕ ನಿಗೂಢತೆಗಳನ್ನು 'ಸಾಂಸ್ಕೃತಿಕ ಅಧ್ಯಯನ'ಗಳು ಹೇಳುತ್ತವೆ. ಕೆಲವು ಅಧ್ಯಯನ ಮಾದರಿಗಳನ್ನು ಗಮನಿಸಬಹುದು.

### 1. ನದಿಪಾತ್ರಗಳ ಇಕ್ಕೆಲಗಳಲ್ಲಿ ಬೆಳೆದು ಬಂದ ಸಂಪ್ರದಾಯಗಳು

ನದಿಯೊಂದು ಮಾನವನ ಸಾಂಸ್ಕೃತಿಕ ಜೀವನದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ. ನಾಗರಿಕತೆಯ ವಿಕಾಸದಲ್ಲಿ ನದಿಗಳ ಪಾತ್ರವನ್ನು ಗುರುತಿಸಲಾಗಿದೆ. ಈಗ ನದಿಗಳ ಎರಡು ದಡಗಳಲ್ಲಿ ಬೆಳೆದು ಬಂದ ಕೆಲವು ವಿಶಿಷ್ಟ ಸಂಪ್ರದಾಯಗಳನ್ನು ಅಧ್ಯಯನ ಮಾಡುವ ಅಗತ್ಯತೆ ಇದೆ. ಉದಾ:

- **ತುಂಗಭದ್ರಾ ನದಿಯ ಇಕ್ಕೆಲಗಳಲ್ಲಿ ಬೆಳೆದು ಬಂದ ಸಂಪ್ರದಾಯಗಳು**: (ಹರಿಹರ ತಾಲೂಕಿಗೆ ಸಂಬಂಧಿಸಿದಂತೆ) ತುಂಗಭದ್ರಾ ನದಿಯು ಮಧ್ಯೆ ಕರ್ನಾಟಕದಲ್ಲಿ ಹರಿಯುತ್ತಿರುವ ಕರ್ನಾಟಕದ ಪ್ರಮುಖ ನದಿಯಾಗಿದೆ. ಈ ನದಿ ಪಾತ್ರಗಳಲ್ಲಿ ಕೆಲವು ಆಚರಣೆಗಳು ಚಾಲ್ತಿಯಲ್ಲಿವೆ. ಹರಿಹರ ತಾಲೂಕಿನ ಬಿಳಸನೂರು ಗ್ರಾಮದಲ್ಲಿರುವ ಚೌಡಮ್ಮ ಮತ್ತು ಹೊಳೆ ಆಚೆಯ ದಡದಲ್ಲಿರುವ ರಾಣೆಬೆನ್ನೂರು ತಾಲೂಕಿನಲ್ಲಿರುವ ನಾಗೇನಹಳ್ಳಿ ಗ್ರಾಮದ ಚೌಡಮ್ಮರಿಬ್ಬರೂ ಅಕ್ಕ ತಂಗಿಯರು ಎಂಬ ಅಭಿಪ್ರಾಯವಿದೆ. ಈ ಇಬ್ಬರೂ ಅಕ್ಕ ತಂಗಿಯರ ತವರುಮನೆ ಬಿಳಸನೂರಿನ ಗೌಡರ ಮನೆಯಾಗಿದೆ. ಈಗಲೂ ಹೊಳೆ ಆಚೆಯ ಗ್ರಾಮದವರು ತಮ್ಮೂರಿನ ಚೌಡಮ್ಮನವರ ಉತ್ಸವದಂದು ಬಿಳಸನೂರಿಗೆ ಬಂದು ಉಡಕ್ಕಿ(ಮಡಿಲಕ್ಕಿ) ತೆಗೆದುಕೊಂಡು ಹೋಗುತ್ತಾರೆ. ಇನ್ನೂ ವಿಶೇಷವೆಂದರೆ ಹೊಳೆ ಆಚೆಯ ಚೌಡಮ್ಮನವರಿಗೆ ನೈವೇದ್ಯ ಸಂಪೂರ್ಣವಾಗಿ ಸಸ್ಯಾಹಾರವಾಗಿದ್ದರೆ ಬಿಳಸನೂರು ಊರಿನಲ್ಲಿರುವ ಚೌಡಮ್ಮನಿಗೆ ಕೋಳಿ ಕುರಿ ಬಲಿದಾನ ನಡೆಯುತ್ತದೆ. ಒಂದೇ ತವರು ಮನೆಯ ದೈವಗಳು ಹೀಗೆ ಭಿನ್ನವಾದ ಪೂಜಾಪದ್ಧತಿಯನ್ನು ಹೊಂದಿವೆ. ಇದರ ಕುರಿತು ಅಧ್ಯಯನ ಅಗತ್ಯವಿದೆ.

• ತುಂಗಭದ್ರಾ ನದಿಯ ಉತ್ತರಕ್ಕಿರುವ ಜನರ ನಂಬಿಕೆಯಂತೆ ದಕ್ಷಿಣದವರು ಹೆಚ್ಚು ಆಧುನಿಕರು ಮತ್ತು ಅವರ ಭಾಷೆಯಲ್ಲಿ ಹೇಳುವುದಾದರೆ ಹೆಚ್ಚು ಜೋರು(ಫಾಸ್ಟ್) ಇರೋ ಜನ. ಹೊಳೆ ಆ ಕಡೆ ಹೆಣ್ಣು ಕೊಡೋಕೆ ಹಿಂದೇಟು ಹಾಕುತ್ತಾರೆ(ಒಂದೇ ಜಾತಿಯವರಾಗಿದ್ದರೂ ಕೂಡ). ದಕ್ಷಿಣದವರು ಹೊಳೆ ಆಚೆಯ ಜನರನ್ನು ಅವಿದ್ಯಾವಂತರೆಂದೇ ಬಗೆದಿದ್ದಾರೆ. ನದಿ ಪಾತ್ರಗಳ ಇಕ್ಕೆಲಗಳಲ್ಲಿರುವ ಜನರ ಈ ಭಿನ್ನ ಭಾವನೆಗೆ ಪ್ರಮುಖ ಕಾರಣವನ್ನು ಹೀಗೆ ಊಹಿಸಬಹುದು. ಮೈಸೂರು ರಾಜರ ದೂರದೃಷ್ಟಿಯ ಪರಿಣಾಮವಾಗಿ ಆಧುನಿಕತೆಯೆಂಬುದು ತುಂಗಭದ್ರಾ ನದಿಯ ದಕ್ಷಿಣಕ್ಕೆ ಬಹುಬೇಗ ಬಂದಿತು. ಆದರೆ ಉತ್ತರ ಕರ್ನಾಟಕ ಈ ವಿಷಯದಲ್ಲಿ ಸ್ವಲ್ಪ ಹಿಂದುಳಿಯಿತು. ದಕ್ಷಿಣ ಕರ್ನಾಟಕ ಜನರ ಈ ಪ್ರಗತಿಶೀಲತೆಯ ಬಗ್ಗೆ ಉತ್ತರದವರಿಗೆ ಒಂದು ರೀತಿಯ ಆತಂಕಕ್ಕೆ ಕಾರಣವಾಗಿರಬೇಕು.

## 2. ನಾಮ ವಿಜ್ಞಾನದ ಮೂಲಕ ಸಾಂಸ್ಕೃತಿಕ ಅಧ್ಯಯನ

• ನದಿ ಪಾತ್ರದ ಇಕ್ಕೆಲಗಳಲ್ಲಿ ಆಗಲಿ ಅಥವಾ ಇತರೆ ಯಾವುದೇ ನಿರ್ದಿಷ್ಟ ಭೂಪ್ರದೇಶದ ಅಧ್ಯಯನ ಕೈಗೊಳ್ಳುವಾಗ ಸ್ಥಳಗಳ ಹೆಸರುಗಳು ಸಾಂಸ್ಕೃತಿಕ ಅಧ್ಯಯನಗಳಲ್ಲಿ ಪ್ರಮುಖ ಪಾತ್ರ ವಹಿಸುತ್ತವೆ. ಖ್ಯಾತ ವಿದ್ವಾಂಸರಾದ ಶಂ.ಭಾ. ಜೋಶಿಯವರು ಈ ಬಗ್ಗೆ 'ಎಡೆಗಳು ಹೇಳುವ ಕಂನ್ನಾಡ ಕಥೆ' ಯಲ್ಲಿ ಸೋದಾಹರಣವಾಗಿ ವಿವರಿಸಿದ್ದಾರೆ. ಅವರು ಸ್ಥಳಗಳ ಹೆಸರುಗಳ ಬಗ್ಗೆ ತಮ್ಮ ಗಮನವನ್ನು ಕೇಂದ್ರೀಕರಿಸಿದ್ದಾರೆ. ನಂತರದ ಅಧ್ಯಯನಗಳಲ್ಲಿ ಈ ಬಗ್ಗೆ ಚರ್ಚೆಗಳು ಹೆಚ್ಚಾಗಿ ನಡೆದಿಲ್ಲವೆಂದು ತೋರುತ್ತದೆ. ಡಾ.ಎಂ.ಎಂ. ಕಲ್ಬುರ್ಗಿಯವರು 'ಅಡ್ಡ ಹೆಸರುಗಳು' ಎಂಬ ಲೇಖನದಲ್ಲಿ ಜನರ ಅಡ್ಡ ಹೆಸರುಗಳನ್ನು ಕುರಿತು ವಿಶ್ಲೇಷಿಸಿದ್ದಾರೆ. ಅವರ ದೃಷ್ಟಿಕೋನ ವ್ಯಕ್ತಿಯ ಅಡ್ಡ ಹೆಸರನ್ನು ಕುರಿತದ್ದಾಗಿದೆ. ಜನರ ಹೆಸರುಗಳನ್ನು ಕುರಿತು ಸಾಮಾಜಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲು ಸಾಧ್ಯವಿದೆ. ಉದಾ: ಅಶೋಕ ಎಂಬ ಹೆಸರಿನ ವಿಶಿಷ್ಟತೆಯನ್ನು ಗುರುತಿಸಬಹುದು. ಹರಿಹರ ತಾಲೂಕಿನ ಹಳ್ಳಿಗಳಲ್ಲಿ ಜಾತಿಭೇದವಿಲ್ಲದೇ ಸಾಮಾನ್ಯವಾಗಿ ಹೆಚ್ಚು ಪ್ರಚಲಿತವಾದ ಹೆಸರು ಇದಾಗಿದೆ. ಸಾಮಾನ್ಯವಾಗಿ ದೇವರ ಹೆಸರುಗಳನ್ನು ಇಡುವುದು ರೂಢಿಯಲ್ಲಿದೆ. ಒಂದು ಕ್ಷೇತ್ರದ ದೈವವನ್ನು ಹೆಸರನ್ನಿಕ್ಕಲು ಹೆಚ್ಚು ಬಳಸುತ್ತಾರೆ. ಬಸಪ್ಪ, ಕೊಟ್ರಪ್ಪ, ರುದ್ರಪ್ಪ ಎನ್ನುವ ಹೆಸರುಗಳನ್ನು ಗುರುತಿಸಬಹುದು. ಆದರೆ ಅಶೋಕ ಎನ್ನುವ ಹೆಸರು ಹರಿಹರ ತಾಲೂಕಿನಲ್ಲಿ ಹೆಚ್ಚು ಪ್ರಚಾರಕ್ಕೆ ಬರಲು ಕಾರಣವೇನಿರಬಹುದು ಎಂಬುದು ಅಧ್ಯಯನದ ವಿಷಯವಾಗುತ್ತದೆ. ಏಕೆಂದರೆ ಅಶೋಕ ಎನ್ನುವ ಹೆಸರು ಪುರಾಣದಲ್ಲಿ ಅಥವಾ ದೈವ ಸಂಬಂಧಿತ ಕಥೆಗಳಲ್ಲಿ ಕಂಡುಬರುವುದಿಲ್ಲ. ಇದು ಸಾಮ್ರಾಟ ಅಶೋಕನ ಪ್ರಭಾವವಿರಬಹುದೇ ಎಂಬುದು ಅಧ್ಯಯನದ ವಸ್ತುವಾಗುತ್ತದೆ.

## 3. ಸಾಮಾಜಿಕ ಸಂರಚನೆಯ ವಿನ್ಯಾಸ

• ಭಾರತೀಯ ಸಮಾಜದ ಸಂರಚನೆಯ ಪ್ರಮುಖ ಲಕ್ಷಣವನ್ನು ಗುರುತಿಸುವಾಗ ವರ್ಣಾಧಾರಿತ ಸಾಮಾಜಿಕ ರಚನೆಯನ್ನು ಗುರುತಿಸುತ್ತೇವೆ. ಈ ಸಂರಚನೆ ಇಡೀ ಭಾರತದಲ್ಲಿ ಒಂದೇ ರೀತಿಯಾಗಿತ್ತೇ ಎಂಬುದನ್ನು ಗಮನಿಸಿದರೆ ಇಲ್ಲವೆಂದೇ ಹೇಳಬೇಕಾಗುತ್ತದೆ. ಪ್ರತಿಯೊಂದು ಪ್ರದೇಶಕ್ಕೂ ಇದು ಭಿನ್ನವಾಗಿರುವುದನ್ನು ಕಾಣುತ್ತೇವೆ. 'ಅಸ್ಪೃಶ್ಯತೆ'ಯ ಆಚರಣೆಯ ಭಿನ್ನ ಭಿನ್ನ ಮಾದರಿಗಳನ್ನು ಭಿನ್ನ ಭಿನ್ನ ಪ್ರದೇಶಗಳಲ್ಲಿ ಗುರುತಿಸಲು ಸಾಧ್ಯವಿದೆ. ಇದನ್ನು ಮೌಖಿಕ ನಂಬಿಕೆಗಳಲ್ಲಿ ಗುರುತಿಸಬಹುದು. ಉದಾ: ತಳ ಸಮುದಾಯದ ವ್ಯಕ್ತಿಯೊಬ್ಬ ಮೇಲ್ವರ್ಗದ ಮನೆ ಒಳಗೆ ಹೋದರೆ ಆಗುವ ಪ್ರತಿಕ್ರಿಯೆಗಳು ಎಲ್ಲಾ ಕಡೆ ಒಂದೆಯಾಗಿಲ್ಲ. ಕೆಲವು ಕಡೆ ಸಂಪ್ರದಾಯಸ್ಥ ಮೇಲ್ವರ್ಗದ ಜನರಿಗೆ ಅದು ಮೈಲಿಗೆಯ ಆಗಿ ಕಂಡುಬಂದರೆ ಕೆಲವು ಕಡೆ ಇದಕ್ಕೆ ಭಿನ್ನವಾದ ನಂಬುಗೆಯಿದೆ. ಈ ರೀತಿ ಅಸ್ಪೃಶ್ಯನೊಬ್ಬ ಮನೆ ಒಳಗೆ

ಬಂದರೆ ಅದು ಲಕ್ಷ್ಮಿ ಬಂದಂತೆ ಎಂಬ ನಂಬುಗೆ ಇದೆ. ಮೇಲ್ವರ್ಗದ ಜಾತಿಗಳಲ್ಲಿಯೇ ಭಿನ್ನ ಭಿನ್ನವಾದ ಪ್ರತಿಕ್ರಿಯೆಗಳಿವೆ. ಇದಕ್ಕೆ ಕಾರಣಗಳನ್ನು ಅಧ್ಯಯನ ಮಾಡಬಹುದಾಗಿದೆ.

**4. ಧಾರ್ಮಿಕ ನಂಬುಗೆಗಳ ಬಗ್ಗೆ ಅಧ್ಯಯನ**

- ಧರ್ಮ ಮತ್ತು ದೇವರ ವಿಚಾರಗಳಲ್ಲಿರುವ ಭಿನ್ನ ನಂಬುಗೆಗಳನ್ನು ಕೂಡ ತುಲನಾತ್ಮಕವಾಗಿ ಅಧ್ಯಯನ ಮಾಡಲು ಸಾಧ್ಯವಿದೆ. ಹೆಣ್ಣು ಮತ್ತು ಗಂಡು ದೈವಗಳ ಕುರಿತು ತುಲನಾತ್ಮಕವಾಗಿ ಅಧ್ಯಯನ ಮಾಡಬಹುದು. ಸಾಮಾನ್ಯವಾಗಿ ಹೆಣ್ಣು ದೈವಗಳ ಉತ್ಸವಗಳು ಹುಣ್ಣಿಮೆಯಂದು ನಡೆದರೆ ಗಂಡು ದೈವಗಳ ಆಚರಣೆಗಳು ಅಮವಾಸ್ಯೆ ಹಿಂದೆ–ಮುಂದೆ ಇರುತ್ತವೆ. ಗಂಡು ದೈವಗಳು ಹೆಚ್ಚು ಗ್ರಾಂಥಿಕವಾದ ಆಚರಣೆಗಳನ್ನು ಹೊಂದಿದ್ದು ಹಬ್ಬಗಳ ರೂಪದಲ್ಲಿದ್ದರೆ ಹೆಣ್ಣು ದೈವಗಳ ಆಚರಣೆಗಳು ಜಾತ್ರೆಗಳ ರೂಪದಲ್ಲಿರುತ್ತವೆ ಮತ್ತು ಜಾನಪದೀಯವಾಗಿರುತ್ತವೆ. ಈ ಕುರಿತು ಅಧ್ಯಯನಕ್ಕೆ ಅವಕಾಶಗಳಿವೆ.

'ಸಾಂಸ್ಕೃತಿಕ ಅಧ್ಯಯನ'ದ ವ್ಯಾಪ್ತಿಯನ್ನು ವಿಸ್ತರಿಸಿಕೊಳ್ಳುವ ಅವಶ್ಯಕತೆ ಈಗ ಅನಿವಾರ್ಯವಾಗಿದೆ. ಹಳೆಯ ಮಾದರಿಗಳನ್ನು ಸಂಪೂರ್ಣವಾಗಿ ನಿರ್ಲಕ್ಷಿಸದೇ ಹೊಸ 'ಸಾಂಸ್ಕೃತಿಕ ಅಧ್ಯಯನ'ದ ಮಾದರಿಗಳನ್ನು ರೂಢಿಸಿಕೊಂಡು ಅಧ್ಯಯನಕ್ಕೆ ತೊಡಗಬೇಕಾದ ಅವಶ್ಯಕತೆಯಿದೆ. ನಾನು ಚರ್ಚಿಸಿರುವುದು ಕೆಲವು ಮಾದರಿಗಳನ್ನು ಮಾತ್ರ. 'ಸಾಂಸ್ಕೃತಿಕ ಅಧ್ಯಯನ'ಗಳಿಗೆ ಯಾವುದೇ ಒಂದು ಸಿದ್ಧಾಂತ ಅನ್ವಯಿಸದೇ ಸಮಗ್ರ ಅಧ್ಯಯನಕ್ಕೆ ಪೂರಕವಾಗುವ ಅಂತರ್‌ಶಿಸ್ತೀಯ ಅಧ್ಯಯನದ ಮಾನದಂಡಗಳನ್ನು ಬಳಸಿಕೊಂಡು ವಿಶ್ಲೇಷಣಾತ್ಮಕವಾಗಿ ಅಧ್ಯಯನ ಮಾಡಬೇಕಾಗಿದೆ. ಪ್ರಾದೇಶಿಕ, ಜನಾಂಗೀಯ, ಭಾಷಿಕ ಅಧ್ಯಯನಗಳ ಜೊತೆ ಜಾನಪದೀಯ ಅಧ್ಯಯನಗಳನ್ನು ಸೇರಿಸಿಕೊಂಡು ಅಧ್ಯಯನ ಮಾದರಿಯನ್ನು ನಿರ್ಮಿಸಿಕೊಳ್ಳುವುದು ಇಂದಿನ ಅಗತ್ಯತೆಯಾಗಿದೆ. ಈಗಾಗಲೇ ನಡೆದಿರುವ ಅಧ್ಯಯನ ಮಾದರಿಗಳನ್ನು ಹಿನ್ನೆಲೆಯಾಗಿಟ್ಟುಕೊಂಡು ಹೊಸದಾಗಿ ಮಾದರಿಗಳನ್ನು ಗುರುತಿಸಿಕೊಳ್ಳಬೇಕಾಗಿದೆ. ನನ್ನ ಪ್ರಯತ್ನ ಈ ದಿಸೆಯಲ್ಲಿ ಸಾಗಿದೆ.

**ಪರಾಮರ್ಶನ ಗ್ರಂಥಗಳು**


- ಚಿದಾನಂದಮೂರ್ತಿ ಎಂ. (1979). *ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ.* ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ.
- *ಹರಿಹರ ತಾಲ್ಲೂಕಿನ ಗೆಜೆಟಿಯರ್.* (2018). ಕರ್ನಾಟಕ ಗ್ಯಾಸೆಟಿಯರ್ ಇಲಾಖೆ.
- ಜೋಶಿ. ಶಂ.ಭಾ. (1947). *ಎಡೆಗಳು ಹೇಳುವ ಕಂನ್ನಾಡ ಕಥೆ.* ಮಾಧವ ಬಲ್ಲಾಳ ಬಂಧುಗಳು.
- ಕಲ್ಬುರ್ಗಿ, ಎಂ.ಎಂ. (2008). ಅಡ್ಡ ಹೆಸರು. ***ಈ ಗ್ರಂಥದಲ್ಲಿ,*** ಲಿಂಗಯ್ಯ ಡಿ., ಚಕ್ಕೆರೆ ಶಿವಶಂಕರ್. (ಸಂ.). *ಸ್ಥಳನಾಮಗಳ ಅಧ್ಯಯನ.* ಕರ್ನಾಟಕ ಜಾನಪದ ಪರಿಷತ್ತು.
- ತಿಪ್ಪೇರುದ್ರಸ್ವಾಮಿ ಎಚ್. (2015). *ಕರ್ನಾಟಕ ಸಂಸ್ಕೃತಿ ಸಮೀಕ್ಷೆ.* ಡಿ.ವಿ.ಕೆ.ಮೂರ್ತಿ.
- ರಹಮತ್ ತರಿಕೆರೆ. (2017). *ಸಾಂಸ್ಕೃತಿಕ ಅಧ್ಯಯನ.* ಅಭಿನವ ಪ್ರಕಾಶನ

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 69-73
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಬಿ.ಎಲ್. ವೇಣು ಅವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರ ಚಿತ್ರಣ

**ಬಿ. ಆರ್. ಅಶ್ವಿನಿ[1] ಮತ್ತು ಡಾ. ವಿಜಯಕುಮಾರ್ ಹೆಚ್. ಜಿ[2]**

[1]ಸಂಶೋಧನಾ ವಿದ್ಯಾರ್ಥಿ, [2]ಸಹಾಯಕ ಪ್ರಾಧ್ಯಾಪಕರು

ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ.

***Abstract:***

*ಮನುಷ್ಯ ಅದೆಷ್ಟೇ ವೈಯಕ್ತಿಕ ಜೀವನ ನಡೆಸಿದರೂ ಸಮಾಜದಿಂದ ಹೊರಗೆ ಉಳಿಯಲು ಸಾಧ್ಯವಿಲ್ಲ. ವ್ಯಕಿ ಯಾವಾಗಲೂ 'ಸಮಾಜದ ಕೂಸು'. ಮನುಷ್ಯನಿಗೆ ಸಮಾಜವೇ ಬದುಕಿನ ಪಾಠಶಾಲೆ. ಸಮಾಜದಲ್ಲಿ ದೊರೆತ ಪ್ರತಿ ಅನುಭವದ ಪಾಠವನ್ನೇ ದಾಖಲಿಸಿ ಬರೆಹದ ರೂಪದಲ್ಲಿ ಬರೆದಿರುವ ಕಾರ್ಯವನ್ನು ಸಾಹಿತ್ಯ ಎಂದು ಕರೆಯಲಾಗುತ್ತದೆ. ಬದುಕಿನ ಒಂದೊಂದು ಅನುಭವವನ್ನು ಪದಗಳಲ್ಲಿ ಕೂಡಿಡುವ ವ್ಯಕ್ತಿಯೇ 'ಸಾಹಿತಿ'ಯಾಗುತ್ತಾನೆ. ಇಂತಹ ಪರಿಸರದ ಕೂಸಾದ ಸಾಹಿತಿ ಆಯಾ ಕಾಲದ ಅವಶ್ಯಕತೆ ಹಾಗೂ ಅನಿವಾರ್ಯತೆ ಅಗತ್ಯತೆಗಳಿಗೆ ಅನುಗುಣವಾಗಿ ಸ್ಪಂದಿಸುವವನಾಗಿರುತ್ತಾನೆ. ಇಂತಹ ಪ್ರಜ್ಞಾವಂತನನ್ನ ಸಮಾಜವೇ ಕಾಲಕ್ಕೆ ತಕ್ಕಂತೆ ದುಡಿಸಿಕೊಳ್ಳುತ್ತದೆ. ಹಾಗೆಯೇ ಸಾಹಿತಿ ಕೂಡ ಜವಾಬ್ದಾರಿಯುತ ಸ್ಥಾನದಲ್ಲಿದ್ದು ತನ್ನ ಸುತ್ತಮುತ್ತಲಿನ ಸಮಾಜದ ಧೋರಣೆಗಳಿಗೆ ತನ್ನನ್ನು ತಾನು ಅರ್ಪಿಸಿಕೊಂಡು ಒಬ್ಬ ಜವಾಬ್ದಾರಿಯುತ ವ್ಯಕ್ತಿಯಾಗಿ ತನ್ನ ಬದುಕಿನ ಗತಅನುಭವಗಳನ್ನು, ಭವಿಷ್ಯದ ಭವಿಷ್ಯವನ್ನು, ಆಶಾಕಿರಣಗಳನ್ನ ತನ್ನ ಸಮಾಜದ ಬಗೆಗಿರುವ ಆಲೋಚನೆಗಳನ್ನ ಪ್ರತಿ ಬರೆಹದಲ್ಲಿ ಇಡಿದಿಡುವಕಾರ್ಯವನ್ನು ನಡೆಸುತ್ತಾನೆ. ಇಂಥ ಪ್ರಜ್ಞಾವಂತ ವ್ಯಕ್ತಿಗಳ ಪಟ್ಟಿಯಲ್ಲಿ ನಮ್ಮಕನ್ನಡ ಸಾಹಿತ್ಯ ಲೋಕದ ಅನೇಕ ಪಂಡಿತ ಪಾಮರರು ಕಾಣಸಿಗುತ್ತಾರೆ ಅಂತಹ ಪ್ರತಿಭಾವಂತ ಸಾಹಿತಿಯಾಗಿ ಚಿತ್ರದುರ್ಗದ ಇತಿಹಾಸಕಾರ ಕಾದಂಬರಿಕಾರದ 'ಬಿ.ಎಲ್. ವೇಣು' ಒಬ್ಬರಾಗಿದ್ದಾರೆ. ಸಾಮಾಜಿಕ ಪ್ರಕ್ರಿಯೆಯನ್ನು ಮೈಗೂಡಿಸಿಕೊಂಡ ಬಿ ಎಲ್ ವೇಣು ಅವರ ಕಾದಂಬರಿಗಳಲ್ಲಿ ಬಹು ಮುಖ್ಯವಾದ ನೆಲೆಯಾಗಿ 'ಸ್ತ್ರೀವಾದಿ ಗುಣ' ಕಂಡು ಬರುತ್ತದೆ. ತಮ್ಮ ಬಹುತೇಕ ಕಾದಂಬರಿಗಳಲ್ಲಿ ಹೆಣ್ಣನ್ನು ಜೀವಪರ ನೆಲೆಯಾಗಿ, ಪ್ರತಿಭಟನೆಯ ಶಕ್ತಿಯಾಗಿ ಚಿತ್ರಿಸುವಲ್ಲಿ ಇವರು ಸಿದ್ಧ ಹಸ್ತರಾಗಿದ್ದಾರೆ. ಇಲ್ಲಿ ಅದೆಷ್ಟು ಸ್ತ್ರೀ ಪಾತ್ರಗಳು ಪುರುಷ ಪಾತ್ರದ ಸರಿ ಸಮಾನವಾಗಿ ನಿಲ್ಲುತ್ತವೆ. ಸಾಮಾಜಿಕ ಹಾಗೂ ಆರ್ಥಿಕ ಪರಾವಲಂಬಿತನದಲ್ಲಿ ಗಟ್ಟಿತನವನ್ನು ತೋರುತ್ತವೆ.*

***Keywords:*** *ಕನ್ನಡ ಸಾಹಿತ್ಯ, ಕನ್ನಡ ಕಾದಂಬರಿ, ಬಿ.ಎಲ್. ವೇಣು, ಸ್ತ್ರೀ ಪಾತ್ರ ಚಿತ್ರಣ.*

**ಪೀಠಿಕೆ**

ಬಿ.ಎಲ್.ವೇಣು ಅವರ ಅರ್ಥಪೂರ್ಣವಾದ ಮಹತ್ವವಾದ ಪ್ರಾದೇಶಿಕ ಸಾಮಾಜಿಕ ಕಾದಂಬರಿ '*ಮೊಬ್ಬಳ್ಳಿಯೋರ ಬೆತ್ತಲೆ ಸೇವೆ*' ಸಾಮಾಜಿಕ ಅನ್ಯಾಯಗಳ ಬಗ್ಗೆ ಧ್ವನಿಸುತ್ತದೆ. ಸಾಮಾಜಿಕವಾಗಿ ಸಂಕಷ್ಟಗಳಿಗೆ ಸಿಲುಕಿದವರ ಬಗ್ಗೆ ಅನುಕಂಪ, ಸಹಾನುಭೂತಿ ಸ್ತ್ರೀ ಬದುಕಿನ ಬಹುಮುಖ

***Please cite this article as:*** ಅಶ್ವಿನಿ ಬಿ. ಆರ್. ಮತ್ತು ವಿಜಯಕುಮಾರ್ ಹೆಚ್. ಜಿ. (2024). ಬಿ.ಎಲ್. ವೇಣು ಅವರ ಕಾದಂಬರಿಗಳಲ್ಲಿ ಸ್ತ್ರೀ ಪಾತ್ರ ಚಿತ್ರಣ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್*, 3(3), 69–73

ಆಯಾಮಗಳನ್ನು ಅತ್ಯಂತ ಅಂತಃಕರಣದಿಂದ ಹಾಗೂ ಆತ್ಮೀಯ ನೋಟದಿಂದ ವಿಮರ್ಶಿಸಿರುವುದು ಕಂಡು ಬರುತ್ತದೆ. ಅಸಹಾಯಕತೆ, ಅಸಮಾನತೆಯನ್ನೇ ಧರ್ಮವೆಂದು, ಅಂಧಾಚರಣೆಗಳು ನೀತಿ ನಿಯಮಗಳು ಕೇವಲ ಕೆಳವರ್ಗದ ಹೆಣ್ಣಿಗೆ ಮಾತ್ರವೇ ಎಂಬ ನೀತಿಯನ್ನು ಸೃಷ್ಟಿಸಿ, ಹೆಣ್ಣಿನ ಒಳ ಮನಸ್ಸನ್ನು ಅರಿಯದೆ ಸಾಂಪ್ರದಾಯದ ಬಿಗಿ ಮುಷ್ಟಿಯಲ್ಲಿಡಿದು ಹೆಣ್ಣಿನ ಬದುಕನ್ನು ಗಂಡು ತನಗೆ ಬೇಕಾದ ರೀತಿಯಲ್ಲಿ ಬಳಸಿಕೊಳ್ಳಲು ಹೊರಟ ಕಥೆಯಾಗಿದೆ. ಈ ಕಾದಂಬರಿಯಲ್ಲಿ ಗ್ರಾಮೀಣ ಪ್ರದೇಶದಲ್ಲಿ ನಡೆಯುವ ರಾಜಕೀಯ ಕುತಂತ್ರಗಳು ಜಾತಿಯ ಹೆಸರಲ್ಲಿ ನಡೆಯುವ ಶೋಷಣೆಗಳು, ಅದರೊಟ್ಟಿಗೆ ಜಮೀನ್ದಾರಿ ವ್ಯವಸ್ಥೆಯ ಗೌರವವನ್ನು ಬಿ.ಎಲ್.ವೇಣು ಅವರು ಪರಿಣಾಮಕಾರಿಯಾಗಿ ಅಭಿವ್ಯಕ್ತಪಡಿಸಿದ್ದಾರೆ. ಹಲವು ಕಡೆ ಬಿ.ಎಲ್.ವೇಣು ಅವರು ಮಾರ್ಕ್ಸ್‌ವಾದಿಯಾಗಿಯೂ ಕಂಡುಬರುವುದುಂಟು. ಉಳ್ಳವರು ಮತ್ತು ಇಲ್ಲದವರ ನಡುವಿನ ಹೋರಾಟವನ್ನು, ವರ್ಗ ಪರಿಕಲ್ಪನೆಯನ್ನು ಶ್ರೀಮಂತ–ಬಡವರ, ಬಂಡವಾಳಶಾಹಿಗಳ ಶ್ರಮಿಕರ ನಡುವೆ ಸದಾ ಕಾಲ ನಡೆಯುವ ಸಂಘರ್ಷಣೆಯನ್ನು ಇಲ್ಲಿ ವಿವರಿಸಿದ್ದಾರೆ. ವೇಣು ಅವರ ಬಹುತೇಕ ಕಾದಂಬರಿಗಳಲ್ಲಿ ಬರುವ ಜಮೀನ್ದಾರಿ ಮತ್ತು ಅಧಿಕಾರಶಾಹಿ ವರ್ಗದ ವರ್ತನೆಗಳು ಕೆಳವರ್ಗದವರ ಅದರಲ್ಲಿಯೂ ಕೆಳವರ್ಗದ ಹೆಣ್ಣಿನ ಮೇಲೆ ಅನೇಕ ರೀತಿಯಲ್ಲಿ ವರ್ಗಬಲ, ಜಾತಿ ಬಲದ ಆಧಾರದ ಮೇಲೆ ಒಳಪಡಿಸುತ್ತಾರೆ. ಇಲ್ಲಿ ಎಲ್ಲಾ ಕಥೆಗಾರರು, ಕಾದಂಬರಿಕಾರರು, ಅಸಹಾಯಕ ದುರ್ಬಲ ಹೆಣ್ಣಿನ ಸ್ವಭಾವವನ್ನ ವರ್ಣಿಸುವ ರೀತಿಯಲ್ಲಿಯೇ ವೇಣುಕೂಡ ಬಹುಮುಖವಾಗಿಯೇ ಕಟ್ಟಿಕೊಟ್ಟಿದ್ದಾರೆ. ಮೇಲ್ವರ್ಗದವರ ಸ್ವಭಾವಗಳು ಶೋಷಿಸುವ ಗುಣವನ್ನೇ ವರ್ಣಿಸಿದ್ದಾರೆ. ಇದು ವೇಣು ಅವರ ಬರಹದ ಮಿತಿಯು ಆಗಿದೆ. ಇವರ ಬಹುತೇಕ ಐತಿಹಾಸಿಕ ಕಾದಂಬರಿಗಳಲ್ಲಿ ಚಿತ್ರತವಾಗಿರುವ ಶೌರ್ಯ, ಪರಾಕ್ರಮ, ಹಿಂಸೆಯ ಜೊತೆಗೆ ಮಾನವ ಸಂಬಂಧಗಳಿಗೆ ಪಡೆಯುವ ಭಾವೈಕ್ಯತೆಯನ್ನ ಮುಖ್ಯವಾಗಿ ಸೂಚಿಸುತ್ತದೆ. ಇದರ ಜೊತೆ ಜೊತೆಗೆ ಒಳಗೆ ಹೂತಿರುವ ಸಾಂಪ್ರದಾಯಿಕ ಮೂಢನಂಬಿಕೆ ಸಾಮಾನ್ಯ ಸ್ತ್ರೀಯರ ಮೇಲೆ ಗಂಡಿನಕ್ರೌರ್ಯ, ಬದುಕಿನ ದ್ವಂದ್ವಗಳನ್ನ ಉಪೇಕ್ಷಿತ ಜನಾಂಗದ ಸಂಕಟಗಳನ್ನ ಅಲ್ಲಲಿ ತಾಜಾ ಉದಾಹರಣೆಗಳ ಮೂಲಕ ಅಭಿವ್ಯಕ್ತಿಪಡಿಸಿದ್ದಾರೆ. ಪ್ರಜಾಪ್ರಭುತ್ವದೊಳಗೆ ಇರುವ ಕೆಲವು ಸೌಕರ್ಯಗಳನ್ನು ಕಾನೂನಿನ ಅಡಿಯಲ್ಲಿ ಪ್ರತಿಯೊಂದು ಚರಾಚರ ವಿಷಯ ವಸ್ತು ಪ್ರಕೃತಿ ಸಹಜ ಬದಲಾವಣೆಗೆ ನಿರಂತರವಾಗಿ ಒಳಗಾಗುತ್ತಲೇ ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳಲು ಪ್ರಯತ್ನಿಸುತ್ತದೆ.

ಸ್ತ್ರೀವಾದ ಎನ್ನುವುದು ಒಂದು ಸಾಮಾಜಿಕ ರಾಜಕೀಯ ಸಿದ್ಧಾಂತ ಇದು ಸ್ತ್ರೀ ಪುರುಷರ ನಡುವಿನ ಲಿಂಗಧಾರಿತ ತಾರತಮ್ಯಗಳ ವ್ಯವಸ್ಥೆಯನ್ನ ಬದಲಾಯಿಸಲು ಹಕ್ಕೋತ್ತಾಯಿಸುತ್ತದೆ ಹಾಗೂ ಸಾಮಾಜಿಕ ರಾಜಕೀಯ ಆರ್ಥಿಕ ಮೊದಲಾದ ಬದುಕಿನ ನೆಲೆಗಳಲ್ಲಿ ಸ್ತ್ರೀ ಪುರುಷನ ಸಮವಾಗಿ ಸ್ಥಾಪಿಸಬಲ್ಲ ವ್ಯವಸ್ಥೆಗಾಗಿ ನಡೆಯುವ ಹೋರಾಟವೇ ಇದರ ಮುಖ್ಯಕಾರ್ಯ ವಿಧಾನವಾಗಿದೆ. ಸ್ತ್ರೀವಾದ ಪಾಶ್ಚಿಮಾತ್ಯರಿಂದ ಭಾರತಕ್ಕೆ ಆಮದಾಗಿ ಬಂದಿರುವ ಅನೇಕ ವಿಚಾರಧಾರೆಗಳ ಸಾಲಿಗೆ ಸೇರುತ್ತದೆ. ಇದರ ಪ್ರಾಥಮಿಕ ಗುರಿ ಕೇವಲ ಬೌದ್ಧಿಕ ಚಿಂತನ ಸೂತ್ರಾವಸ್ಥೆ ಆಗಿರದೆ ಇದು ವರ್ತಮಾನದ ಜನಜೀವನಕ್ರಮವನ್ನು ರೂಪಿಸುವಂತ ಸಂಸ್ಕೃತಿಯ ಸ್ವರೂಪವನ್ನು ಪರಿಶೀಲನೆಗೆ ಗುರಿ ಮಾಡುತ್ತ ಜನರಲ್ಲಿ ಪ್ರಜ್ಞ ಜಾಗೃತಿಗಾಗಿ ಪ್ರಯತ್ನಿಸುತ್ತದೆ. ಇಂಥ ಪ್ರಜ್ಞ ಜಾಗೃತಿಯ ಹರಿಕಾರರಾಗಿ ಬಿ.ಎಲ್.ವೇಣು ಕಂಡುಬರುತ್ತಾರೆ.

ಸ್ತ್ರೀವಾದ ಎಂಬುದು ಒಂದು ಪ್ರಯೋಗ ಪ್ರಕ್ರಿಯೆಯಾಗಿದೆ ಎಂಬ ಅಂಶವನ್ನು ಬಿ.ಎಲ್.ವೇಣು ಅವರ ಸಾಮಾಜಿಕ ಮತ್ತು ಐತಿಹಾಸಿಕ ಕಾದಂಬರಿಗಳಲ್ಲಿ ಸಂದರ್ಭಗಳಸಹಿತ

ವಿವರಿಸಿರುವುದನ್ನ ಮನಗಾಣಬಹುದು. ಪಾಶ್ಚಿಮಾತ್ಯದಲ್ಲಿ ಸ್ತ್ರೀವಾದವು ಹುಟ್ಟಿರುವುದರ ಹಿಂದೆ ಸುದೀರ್ಘವಾದ ಹೋರಾಟದ ಚರಿತ್ರೆಯುಂಟು. ಯುರೋಪ್ ಖಂಡ, ಜರ್ಮನಿ, ನೆದರ್‌ಲ್ಯಾಂಡ್, ಫ್ರಾನ್ಸ್, ಇಟಲಿ ಮೊದಲಾದ ಅನೇಕ ದೇಶಗಳಲ್ಲಿ ಮತ್ತು ಇಟಲಿ ಹಾಗೂ ಉತ್ತರ ಅಮೇರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಆಯಾ ದೇಶದ ಸಾಂಸ್ಕೃತಿಕ ಹಿನ್ನೆಲೆಗೆ ಅನುಸಾರವಾಗಿ ಸ್ತ್ರೀಯರ ಸ್ಥಾನಮಾನ, ಸ್ತ್ರೀಯರೇ ಹೋರಾಟ ಮಾಡುತ್ತಾ ಬಂದಿರುವ ಚರಿತ್ರೆ ಸುಮಾರು 200 ವರ್ಷಗಳಷ್ಟು ಸುದೀರ್ಘವಾದದ್ದು. ಆದರೆ ಅರವತ್ತು–ಎಪ್ಪತ್ತರ ದಶಕದಲ್ಲಿ ವ್ಯಾಪಕವಾದ ಮಹಿಳಾ ಚಳುವಳಿಗಳು ನಡೆದವು. ಪಶ್ಚಿಮದ ಸ್ತ್ರೀಯರ ಈ ಸಂಘಟಿತ ಹೋರಾಟಗಳು ಅಂತಿಮವಾಗಿ ಸ್ತ್ರೀಯರ ಬಿಡುಗಡೆಯ ಗುರಿಯನ್ನು ಹೊಂದಿದ್ದರಿಂದ ಅರವತ್ತು–ಎಪ್ಪತ್ತರ ದಶಕಗಳ ಹೋರಾಟವನ್ನು ಮಹಿಳಾ ವಿಮೋಚನಾ ಚಳುವಳಿ ಎಂದು ಗುರುತಿಸಲಾಗುತ್ತದೆ. ಇಂತಹ ಮಹಿಳಾಪರ ಧ್ವನಿಯಾಗಿ ಬಿ.ಎಲ್. ವೇಣು ಕಂಡುಬರುತ್ತಾರೆ.

ವೇಣು ಅವರು ತಮ್ಮ ಸ್ತ್ರೀ ಪರ ಧ್ವನಿಯಲ್ಲಿ ಹೀಗೆ ಹೇಳುವುದುಂಟು, 'ಸ್ತ್ರೀಯರು ಪುರುಷನಿಂದ ದೈಹಿಕ ಹಿಂಸೆಗೆ ಒಳಗಾಗುವುದು ಮತ್ತು ಪುರುಷನಿಂದ ಮಾನಸಿಕ ಹಿಂಸೆಗೆ ಗುರಿಯಾಗುವುದು' ಎಂಬ ಎರಡು ಬಗೆಯ ಹಿಂಸೆಗೆ ಸ್ತ್ರೀಯರು ಒಳಗಾಗುತ್ತಾರೆ. ಎಂಬುದನ್ನು ತಮ್ಮ ಅನೇಕ ಕಾದಂಬರಿಗಳಲ್ಲಿ ವಿಶ್ಲೇಷಿಸಿದ್ದಾರೆ.

*'ಮೊಬ್ಬಳ್ಳಿಯೋರ ಬೆತ್ತಲೆ ಸೇವೆ'* ಕಾದಂಬರಿಯಲ್ಲಿ ಊರಗೌಡ ಪೂಜಾರ್ಯ ಕುತಂತ್ರದಿಂದ ಹೆಣ್ಣಿನ ಬೆತ್ತಲೆ ಸೇವೆ ಎಂಬ ಸಂಪ್ರದಾಯ ಆರಂಭವಾಗಿ ಅದು ಮುಂದೆ ಸಂಘರ್ಷದ ಹಾದಿ ಹಿಡಿಯುತ್ತ ಸಾಗುವ ಕಾದಂಬರಿ. ಬೆತ್ತಲೆ ಸೇವೆ ಎಂಬುದು ಕೇವಲ ಕೆಳಜಾತಿಯ ಸ್ತ್ರೀಯರಿಗೆ ಮಾತ್ರವೇ ಎಂಬ ಕಾನೂನು, ಈ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಮೇಲ್ವರ್ಗದ ಪುರುಷ ಮಾಡಿರುವುದು ಸಂಘರ್ಷಕ್ಕೆ ಕಾರಣವಾಗುತ್ತದೆ. ದಮಯಂತಿ ಕಾಫಿಕ್ಲಬ್ ಎಂಬ ಹೋಟೆಲ್ ಕೆಳಜಾತಿಯ ಗಂಡಸರಿಗೆ ನಿಷೇಧಿಸಿತ್ತು. ಆದರೆ ಅದೇ ಕೆಳಜಾತಿಯ ಹೆಣ್ಣು ಮಕ್ಕಳಿಗೆ ತಮ್ಮ ಮನೆ ಹೋಟೆಲ್ಗಳಲ್ಲಿ ಕೆಲಸ ಮಾಡಿಸಿಕೊಳ್ಳುವ ನೆಪದಲ್ಲಿ ಅವರನ್ನು ಒಳಗೆ ಬಿಟ್ಟುಕೊಂಡು ತಮ್ಮ ಮನೆಯ ಕೆಲಸದ ಜೊತೆಗೆ ಅವರ ಆಸೆಯನು ಈಡೇರಿಸಿಕೊಳ್ಳುವ ಒಳ ಸಂಚು ನಡೆಯುತ್ತದೆ. ಮೊಬ್ಬಳ್ಳಿ ಹಾಗೂ ಆ ಊರ ಸುತ್ತಮುತ್ತಲ ಹಳ್ಳಿಗಳ ಜನರಿಗೆ ಗೌಡರು ತಮ್ಮ ಸ್ವಾರ್ಥಕ್ಕಾಗಿ ಸಾಲ ನೀಡಿ ಅದರ ವಸೂಲಿ ನೆಪದಲ್ಲಿ ಅಸಹಾಯಕ ಹೆಣ್ಣು ಮಕ್ಕಳ ಮೇಲೆ ತಮ್ಮ ಕಾಮದೃಷ್ಟಿ ಬೀರುತ್ತಿದ್ದರು. ಸಾಂಪ್ರದಾಯಸ್ಥ ಕುಟುಂಬದಿಂದ ಬಂದಂತ 'ಮೆಟ್ಟಿಲುಗಳು' ಕಾದಂಬರಿಯ 'ದಿವ್ಯ' ಮತ್ತು 'ಮಹಾನದಿ' ಕಾದಂಬರಿಯ ಗಾಯತ್ರಿ ಎಂಬ ಸ್ತ್ರೀ ಪಾತ್ರಗಳು ಶಿಕ್ಷಣ ಕಲಿತ ಮಹಿಳೆಯರಾಗಿದ್ದಾರೆ. ಜೊತೆಗೆ ವೈಚಾರಿಕ ಮನೋಭಾವನೆಯನ್ನು ಬೆಳೆಸಿಕೊಂಡವರು ಇದೇ ಇವರ ಜೀವನದಲ್ಲಿ ಪಲ್ಲಟಗೊಳಿಸುವ ಮತ್ತು ಸಮಸ್ಯೆಗಳಿಗೆ ಸಿಲುಕುವ ಸನ್ನಿವೇಶಕ್ಕೆ ಸಾಕ್ಷಿಯಾಗುತ್ತದೆ.

ದಿವ್ಯ ಸಾಂಪ್ರದಾಯದ ವಿರೋಧಿಯಾಗಿ ಕೆಳಜಾತಿಯ ಹುಡುಗನನ್ನು ಪ್ರೀತಿಸಿದ್ದು ಇದು ಹೆಣ್ಣಿಗೆ ತಾನು ಬಯಸಿದ ಬಾಳ ಸಂಗಾತಿಯನ್ನು ಪಡೆಯಲು ಸ್ವತಂತ್ರವಿಲ್ಲ ಎಂಬುದನ್ನು 21ನೇ ಶತಮಾನದ ಈ ದಿನದಲ್ಲಿಯೂ .. ಅದುಎಷ್ಟೇ ಆಧುನಿಕತೆಯನ್ನು ಮೈಗೂಡಿಸಿಕೊಂಡ ಪೋಷಕರಾಗಿದ್ದರು ಕೂಡ ತಮ್ಮ ಮಗನ ಮದುವೆ ಸಂದರ್ಭದಲ್ಲಿ ಮಗನಿಗೆ ತನ್ನ ಬಾಳ ಸಂಗಾತಿಯ ಆಯ್ಕೆಗೆ ನೀಡುವ ಸ್ವತಂತ್ರವನ್ನು ಅದೇ ತಮ್ಮ ಹೆಣ್ಣು ಮಗಳಿಗೆ ನೀಡಲಾರರು ಎಂಬುದು ವಿಷಾಧನೀಯ ಸಂಗತಿ. ಮಹಾನದಿ ಕಾದಂಬರಿಯ ಗಾಯತ್ರಿ ಪಾತ್ರವೂ ಕೂಡ ಇಂತಹದ್ದೇ ನೋವನ್ನು ಅನುಭವಿಸಿ, ಆ ನಂತರ ಎಲ್ಲರ ಮನಸ್ಸನ್ನು ಗೆಲ್ಲುವಲ್ಲಿ ಸಫಲವಾಗುತ್ತಾಳೆ. ಪ್ರೀತಿ, ಸಹನೆ, ಜಾಣ್ಮೆ ಎಲ್ಲವನ್ನೂ ಇಲ್ಲಿ ಕಾಣಬಹುದಾಗಿದೆ. ಹಾಗೆ

'ಕುಣಿಯಿತು ಹೆಜ್ಜೆ ನಡೆಯಿತು ಗೆಜ್ಜೆ' ಎಂಬ ಕಾದಂಬರಿಯ 'ಕಲ್ಯಾಣಿ' ಪಾತ್ರ, 'ಹೃದಯರಾಗ' ಕಾದಂಬರಿಯ 'ಶಾರದೆ' ಪಾತ್ರ ಮೌಲ್ಯಗಳಿಗೆ ಎದುರಾಗಿ ಪರಂಪರಾಗತವಾಗಿ ಬಂದ ಕಲೆಯನ್ನು ಸ್ಥಿತ್ಯಂತರಗೊಳಿಸುತ್ತಾರೆ. 'ಪ್ರೇಮ ಪರ್ವ' ಕಾದಂಬರಿಯ ಮಲತಾಯಿ ಧೋರಣೆಯಿಂದ 'ಸರಸ್ವತಿ' ಎಂಬ ಪಾತ್ರ ಜೀವನವಿಡಿ ನೋವಿನಲ್ಲಿ ಇರಬೇಕಾಗುತ್ತದೆ. ಕೊನೆಗೆ ಯಾರೊಬ್ಬರ ಬದುಕು ಸುಖ ಕಾಣುವುದಿಲ್ಲ. 'ಕೆಂಡ ಸಂಪಿಗೆ' ಕಾದಂಬರಿಯಲ್ಲಿ ಒಂದು ಹೆಣ್ಣಿನಿಂದ ಮತ್ತೊಂದು ಹೆಣ್ಣಿಗೆ ಆಗುವ ಶೋಷಣೆಯನ್ನು ಮಾರ್ಮಿಕವಾಗಿ ಬಿ.ಎಲ್. ವೇಣು ಅವರು ಚಿತ್ರಿಸಿರುವುದನ್ನು ಕಾಣಬಹುದು. ಸ್ತ್ರೀ ಪುರುಷ ಇಬ್ಬರನ್ನು ಎಚ್ಚರಿಸುವ ಕೃತಿ ಇದಾಗಿದೆ.

ಪುರುಷನ ಬದುಕಿಗೆ ಕಾಮ ಒಂದೇ ಆಹಾರವಲ್ಲ. ಹೆಣ್ಣುಗಳು ಕೇವಲ ಭೋಗದ ವಸ್ತುಗಳಲ್ಲ. ಹೆಣ್ಣಿಗೂ ಅವಳದ್ದೇ ಆದ ಸ್ವತಂತ್ರ ಆಸೆ ಆಕಾಂಕ್ಷೆಗಳಿವೆ ಎಂಬ ಸಂದೇಶವನ್ನು ಈ ಕಾದಂಬರಿಯಲ್ಲಿ ಮನಗಾಣಬಹುದು. ರಾಷ್ಟ್ರೀಯ ಭಾವೈಕ್ಯತೆ ಪ್ರಶಸ್ತಿ ಪಡೆದ ಕಾದಂಬರಿ 'ಕಲ್ಲರಳಿ ಹೂವಾಗಿ' ಇದು ಹಿಂದೂ ಮುಸ್ಲಿಂ ಧರ್ಮಗಳ ನಡುವಿನ ಸಾಮರಸ್ಯ ಬಿಂಬಿತವಾದದ್ದು. ಪ್ರೀತಿ ಪ್ರೇಮ ಪ್ರಣಯ ವಸ್ತುಗಳನ್ನೊಳಗೊಂಡಂತಹ ಕಾದಂಬರಿ ಇದಾಗಿದೆ. ಶತ್ರು ಹೈದರಾಲಿ ಪಡೆಯ ಸೇನಾಪತಿ ತನ್ನ ಪತ್ನಿಯೊಂದಿಗೆ ರಣಕಣದಲ್ಲಿ ಸತ್ತು ಬಿದ್ದಾಗ ಆತನ ಮಗಳು ಹಸೀನಾ ಚೂರಿ ಇರಿತದಿಂದ ಪ್ರಾಣ ಬಿಡುವ ಸ್ಥಿತಿಯಲ್ಲಿದ್ದಳು ಆಗ ಅರಮನೆಯ ವೈದ್ಯನಾಗಿದ್ದ ಬಸಯ್ಯನ ಮಗ ವೀರಣ್ಣ. ಹಸೀನಾಳನ್ನು ತನ್ನ ಮನೆಗೆ ಕರೆತಂದು ಪ್ರಾಣಾಪಾಯದಿಂದ ಕಾಪಾಡುತ್ತಾನೆ. ಇಲ್ಲಿ ಧರ್ಮಕ್ಕಿಂತ ಜೀವನ ಪ್ರೀತಿ ಮುಖ್ಯ ಎಂದು ಸಾಬೀತು ಮಾಡಲಾಗಿದೆ. ಮಾಸ್ತಿ ಪ್ರಶಸ್ತಿ ದೊರೆತ ಕಾದಂಬರಿ 'ಓಬಳವ್ವ ನಾಗತಿ' ದುರ್ಗದ ಪಾಳೇಗಾರ ಪರಂಪರೆಯಲ್ಲಿ 'ಮಹಾ ಮಾತೃಶ್ರೀ' ಎಂದು ಕರೆಸಿಕೊಳ್ಳುವ ಹಿರೇ ಮದಕರಿ ಕಸ್ತೂರಿ ರಂಗಪ್ಪನಾಯಕನ ಮಡದಿ ಓಬಳವ್ವ ನಾಗತಿ ತನ್ನ ಪತಿಯ ಮರಣದ ನಂತರ ದುರ್ಗದ ದೊರೆ ಯಾರು ಎನ್ನುವ ಪ್ರಶ್ನೆಗೆ ತನ್ನ ಚಾಣಾಕ್ಷತನದಿಂದ ಉತ್ತರ ನೀಡಿದವಳು. ಇವಳು ಜಾಣ್ಮೆ, ಯುದ್ಧ ಕಲೆ, ಮಹಾ ತಂತ್ರಗಾರಿಕೆಗೆ, ತಾಳ್ಮೆಗೆ ಹೆಸರಾದವಳು ಹಾಗೂ ಪ್ರೌಢಿಮೆಯನ್ನು ಮೈಗೂಡಿಸಿಕೊಂಡ ಹೆಣ್ಣು.

ಇತಿಹಾಸಕಾರರು ಓಬಳವ್ವ ನಾಗತಿಯನ್ನು 'ಗಂಡು ಓಬಳೇ' ಎಂದು ಕರೆದರೆ, ಕಾದಂಬರಿಕಾರರಾದ ಬಿ.ಎಲ್. ವೇಣು ಅವರು ಆ ಕಾಲದ 'ಇಂದಿರಾಗಾಂಧಿ' ಎಂದು ಕರೆಯುತ್ತಾರೆ. ಪತಿಯ ಅಣ್ಣನ ಮಗನಾದ ದೊಡ್ಡ ಮದಕರಿಯನ್ನು ದತ್ತು ಪಡೆದು, ಅವನನ್ನ ಪೌಜು ದೊರೆಯಾಗಿ ಮಾಡಿ, ನಾಡಿನ ಹಿತಕ್ಕಾಗಿ ಕೆರೆಗೆ ಹಾರವಾದ ಚಿಕ್ಕಸಿದ್ದವ್ವ ನಾಗತಿಯ ಮಗನನ್ನು ಕರೆತಂದು ಅವನಿಗೆ ದುರ್ಗದ ಪಟ್ಟವನ್ನ ಕಟ್ಟುವ ತಂತ್ರ, ಸ್ವತಃ ತಾನೇ ಶತ್ರು ಸೈನ್ಯದ ಮೇಲೆ ಯುದ್ಧ ಮಾಡಿ ಗೆದ್ದು ದುರ್ಗವನ್ನ ಕಾಪಾಡಿದವಳು, ಇಂತಹ ಓಬಳವ್ವ, ಪುರುಷ ಸಮಾಜದ ಕೆಂಗಣ್ಣಿಗೆ ಬಿದ್ದು ರಾಣಿಯಾಗಿದ್ದರೂ ಜಂಪಣ್ಣ ನಾಯಕರಿಂದ ಲೈಂಗಿಕ ಕಿರುಕುಳಕ್ಕೆ ಒಳಗಾಗುವುದು ಪುರುಷ ಸಮಾಜ ಅವಳನ್ನು ಸಾಮಾನ್ಯ ಸ್ತ್ರೀ ಆಗಿ ಮಾಡುತ್ತದೆ. ಸುರಪುರದ ವೆಂಕಟಪ್ಪ ನಾಯಕ 'ಕಾದಂಬರಿಯ ರಾಣಿ' ಈರಮ್ಮ 'ಬ್ರಿಟಿಷ್ ಅಧಿಕಾರಿ ಒಬ್ಬನ ವಿರುದ್ಧ ಹೋರಾಡಿ ವೀರ ಮರಣ ಹೊಂದಿದ ವೀರ ಮಾತೆಯಾಗಿದ್ದಾಳೆ. ಹೀಗೆ ಬಿ.ಎಲ್.ವೇಣು ಅವರ ಸಾಮಾಜಿಕ ಮತ್ತು ಐತಿಹಾಸಿಕ ಕಾದಂಬರಿಗಳಲ್ಲಿ ಸ್ತ್ರೀವಾದಿ ಮನೋಧೋರಣೆಯ ಸ್ತ್ರೀ ಪಾತ್ರಗಳನ್ನು ಸೃಷ್ಟಿಸಿದ್ದಾರೆ. ಇಂತಹ ಸ್ತ್ರೀ ಪಾತ್ರಗಳು ಪ್ರಸ್ತುತ ಸಮಾಜಕ್ಕೆ ಅನುಕರಣೆಯವಾದವು ಎಂಬ ಸಂದೇಶ ಸಾರಿದ್ದಾರೆ.

**ಆಧಾರ ಗ್ರಂಥಗಳು**


- ಮಲ್ಲಿಕಾಘಂಟಿ. (2020). *ನಮ್ಮ ಕಣ್ಣಲ್ಲಿ ನೀವು.* ಕರ್ನಾಟಕ ಸಾಹಿತ್ಯ ಅಕಾಡೆಮಿ.
- ನೇಮಿಚಂದ್ರ. (1984). *ಮಹಿಳಾ ಅಧ್ಯಯನ.* ಮಂಗಳ ಭಾರತಿ ಪ್ರಕಾಶನ.
- ಶಂಕರಪ್ಪ, ಆರ್. (2020). *ಮಹಿಳಾ ಸಬಲೀಕರಣ.* ಅನುಜನ ಪ್ರಕಾಶನ.
- ವೇಣು, ಬಿ.ಎಲ್. (2023). *ರಾಜಸುರಪುರದ ವೆಂಕಟಪ್ಪ ನಾಯಕ.* ಗೀತಾಂಜಲಿ ಪುಸ್ತಕ ಪ್ರಕಾಶನ.
- ವೇಣು, ಬಿ.ಎಲ್. (2023). *ಸಮರ್ಥರು.* ಗೀತಾಂಜಲಿ ಪುಸ್ತಕ ಪ್ರಕಾಶನ.
- ವೇಣು, ಬಿ.ಎಲ್. (2020). *ರಾಜಮಾತೆ ಓಬಳವ್ವನಾಗತಿ.* ಗೀತಾಂಜಲಿ ಪುಸ್ತಕ ಪ್ರಕಾಶನ.
- ವೇಣು, ಬಿ.ಎಲ್. (2018). *ಗಂಡುಗಲಿ ಮದಕರಿ ನಾಯಕ.* ಗೀತಾಂಜಲಿ ಪುಸ್ತಕ ಪ್ರಕಾಶನ.
- ವೇಣು, ಬಿ.ಎಲ್. (1981). *ಮೊಬ್ಬಳ್ಳಿಯೋರ ಬೆತ್ತಲೆ ಸೇವೆ.* ಪಾಂಚಜನ್ಯ ಪಬ್ಲಿಕೇಷನ್ಸ್.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 74-77
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಹೊನ್ನಾಳಿ ಸೀಮೆಯ ಕಥನ ಸಾಹಿತ್ಯದ ಭಾಷಿಕ ನಿರೂಪಣೆ

**ರಾಧ ಎಚ್.ಎಂ**
ಸಂಶೋಧನಾ ವಿದ್ಯಾರ್ಥಿ, ಕನ್ನಡ ಭಾರತಿ, ಕುವೆಂಪು ವಿಶ್ವವಿದ್ಯಾಲಯ, ಶಂಕರಘಟ್ಟ.

***Abstract:***
*ಕರ್ನಾಟಕದ ಜನ ಸಮುದಾಯದ ಸಂಸ್ಕೃತಿಗಳು ತನ್ನದೇ ಆದ ನಾಡು-ನುಡಿಯ ಸಂಪತ್ತನ್ನು ಒಳಗೊಂಡಿದೆ. ಜ್ಞಾನ ಪರಂಪರೆಗಳು ಈ ನೆಲದ ಪ್ರಜ್ಞೆಯನ್ನು ಪದರು ಪದರಾಗಿ ಬಿಡಿಸುವ ಕೆಲಸವನ್ನು ಸಾವಿರಾರು ವರ್ಷಗಳ ಹಿಂದಿನಿಂದಲೂ ಮಾಡುತ್ತಲೆ ಬಂದಿವೆ. ಕನ್ನಡಿಗರು ನೆಲೆಸಿರುವ ಈ ನೆಲಕ್ಕೆ ಮತ್ತು ಕನ್ನಡಿಗರಿಗೆ ಇಲ್ಲಿನ ಭಾಷೆಯ ಹಿರಿಮೆ ಇದೆ. ಕೆರೆ, ಬಾವಿ, ನದಿ, ದೇಗುಲ, ಮಸೀದಿ, ಹಸ್ತಪ್ರತಿ, ಶಾಸನ, ಮಠಗಳು ಆಯಾ ಪ್ರದೇಶದ ಭೌಗೋಳಿಕ, ಸಾಮಾಜಿಕ, ಧಾರ್ಮಿಕ, ಆರ್ಥಿಕ, ರಾಜಕೀಯ ವಿಷಯಗಳನ್ನು ಹೇಳುತ್ತವೆ. ಇಲ್ಲಿಂದಲೇ ಇತಿಹಾಸ ತಿಳಿಯಲು ದಾರಿ ಸ್ಪಷ್ಟವಾಗುತ್ತದೆ. ಕೆಲವರು ಇರುವುದನ್ನು ತಿರುವುಮುರುವಾಗಿ ಬರೆದಿರುವುದುಂಟು ಆದರೆ ಮುಂದೊಮ್ಮೆ ಕಾಲದ ಸತ್ಯಗಳು ಒಂದಲ್ಲ ಒಂದು ಬಾರಿ ಸರಿದಾರಿಗೆ ಹೆಜ್ಜೆಯಾಗುವ ಕೆಲಸ ಮಾಡುತ್ತಾ ಬರುತ್ತಲಿವೆ. ಪ್ರಸ್ತುತ ಲೇಖನದಲ್ಲಿ ಹೊನ್ನಾಳಿ ಸೀಮೆಯ ಕಥನ ಸಾಹಿತ್ಯದ ಭಾಷಿಕ ನಿರೂಪಣೆಯನ್ನು ಕುರಿತು ಅಧ್ಯಯನ ಮಾಡಲಾಗಿದೆ.*

***Keywords:*** *ಕಥನ ಸಾಹಿತ್ಯ, ಕೆಂಚ ಶಿವುಗರು, ಮರ್ಯಾದಸ್ಥರು, ಚೌಡಿಹುಟ್ಟು, ಗಿಡ್ಡಜ್ಜಿಯ ಬಯಲು, ಭಾಷಿಕ ನಿರೂಪಣೆ.*

**ಪೀಠಿಕೆ**

ಕಾನೂನು, ನ್ಯಾಯಾಲಯ, ಪೊಲೀಸ್ ಸ್ಟೇಷನ್ ಇತ್ತೀಚಿನ ನ್ಯಾಯ ತೀರ್ಮಾನಕ್ಕೂ ಮುಂಚೆ ಹೊನ್ನಾಳಿ ಸೀಮೆಯ ಸುತ್ತಮುತ್ತಲಿನ ಅಂದರೆ ಇಂದಿನ ಬಳ್ಳಾರಿ ಜಿಲ್ಲೆಯ ಸಂಡೂರು ಪ್ರದೇಶದವರೆಗೂ ಹೊನ್ನಾಳಿಯ ಹಿರೇಕಲ್ ಮಠದ ನ್ಯಾಯ ಪಂಚಾಯಿತಿ ನಡೆಯುತ್ತಿತ್ತು ಎಂಬ ದಾಖಲೆಗಳು ಸಿಗುತ್ತವೆ. ಮಾತು, ಭಾಷೆ ಎಂಬುದು ಜನರ ಬದುಕಿನ ಸಂಕಷ್ಟಗಳನ್ನು ಹೀಗೆ ಆಯಾ ಮಠಮಾನ್ಯಗಳ ಮೂಲಕ ವ್ಯಕ್ತಿಯ ಆತ್ಮಸಾಕ್ಷಿಗೆ ಅನುಗುಣವಾಗಿ ನ್ಯಾಯ ಪಂಚಾಯ್ತಿ ನಡೆಸುತ್ತಿರುವ ರೂಢಿ ಈ ಹೊತ್ತಿಗೂ ಚಾಲ್ತಿಯಲ್ಲಿರುವುದು ಮಠದ ವಿಶೇಷತೆ.

ಎಚ್.ದೇವಿರಪ್ಪ ಬರೆದ 'ಕೆಂಚ ಶಿವುಗರು' ಕಥೆಯಲ್ಲಿ ಜಾತಿಯಲ್ಲಿ ಅಸ್ಪೃಶ್ಯನಾದ ಕೆಂಚನಿಗೆ ಮೇಲ್ವರ್ಗದ ಶಿವುಗ (ದಕ್ಷ ಪಾತ್ರದಾರಿ) ರಂಗದ ಮೇಲೆ ನಿಜವಾಗಲೂ ಬೇಕಂತಲೇ ಕತ್ತಿಯಿಂದ ತಿವಿಯುತ್ತಾನೆ. ಸಾಯುವ ಕೊನೆಯಲ್ಲಿ ಕೆಂಚ "ಪಾಪ ಶಿವಣ್ಣ ತಾನೇ ಏನು ಮಾಡುತ್ತಾನೆ ಆವೇಶ ಬಂದುಬಿಡ್ತು" ಎನ್ನುತ್ತಾನೆ. ಬೆಳೆಯುವ ಮಕ್ಕಳಲ್ಲಿ ಜಾತಿ ತಾರತಮ್ಯ ತುಂಬುವ ಹಿರಿಯರು ಇಂತದ್ದೊಂದು ಅನಾಹುತಕ್ಕೆ ಕಾರಣವಾಗುತ್ತಾರೆ.

***Please cite this article as:*** ರಾಧ ಎಚ್.ಎಂ. (2024). ಹೊನ್ನಾಳಿ ಸೀಮೆಯ ಕಥನ ಸಾಹಿತ್ಯದ ಭಾಷಿಕ ನಿರೂಪಣೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವಲಪ್‌ಮೆಂಟ್*, 3(3), 74–77

ತನ್ನ ಸಾವನ್ನು ಆಕಸ್ಮಿಕವೆಂದು ತಿಳಿಯುವ ಕೆಂಚನ ಮಾತು ಆತನ ಮುಗ್ಧತೆ ಮಾತ್ರವಲ್ಲ ವ್ಯವಸ್ಥೆಯು ಹುನ್ನಾರವನ್ನು ಹೇಳುತ್ತದೆ. ಈ ಕತೆಯ ಕೊನೆಯಲ್ಲಿ ಶಿವುಗ ಪಶ್ಚಾತ್ತಾಪದಿಂದ ಆತನೇ ಊರಿಂದ ಕಣ್ಮರೆಯಾಗುವಂತೆ ಮಾಡಲಾಗಿದೆ. ಒಂದು ಎಳೆ ಹುಡುಗನ ಸಾವಿನ ನಂತರ ಇಂತದ್ದೊಂದು ಬದಲಾವಣೆಗೆ ದಾರಿಯಾಗುವ ಮೂಲಕ ಕತೆಗಾರರು ಪ್ರಗತಿಪರವಾಗಿ ಆಲೋಚನೆ ಮಾಡಿದ್ದಾರೆ ಎನ್ನಬಹುದು. ಇತ್ತೀಚೆಗೆ ಜನವರಿ 8, 2023 ರಂದು ಜನ ಸಾಹಿತ್ಯ ಸಮ್ಮೇಳನದಲ್ಲಿ ಮಾತನಾಡುವಾಗ ಬಾನು ಮುಷ್ತಾಕ್ ಅವರು ಹೇಳುತ್ತಾರೆ. ಸಾಯುವವನಿಗೆ ನಾನ್ಯಾಕೆ ಸಾಯ್ತಾ ಇದ್ದೀನಿ ಅಂತ ಗೊತ್ತಿಲ್ಲ, ಸಾಯಿಸುವವನಿಗೆ ನಾನ್ಯಾಕೆ ಸಾಯಿಸ್ತಾ ಇದೀನಿ ಅಂತ ಗೊತ್ತಿಲ್ಲ ಅನ್ನೋ ಸಂದರ್ಭದಲ್ಲಿ ನಾವಿದ್ದೇವೆ. ಈ ಕಾಲದ ಕಡು ವಾಸ್ತವವನ್ನು ಕುರಿತು ಹೇಳುವ ಈ ಆತಂಕ ಕೆಂಚ ಶಿವುಗರು ಕಥೆಯಲ್ಲಿಯೂ ನಡೆದು ಬಿಡುತ್ತದೆ ಎಂಬುದು ಸತ್ಯ. ಕಾಲಾಂತರದಲ್ಲಿ ಇಂತಹ ಸಾವುಗಳನ್ನು ದಿನೇ ದಿನೇ ಹೆಚ್ಚು ಮಾಡುತ್ತಾ ಲಾಭಕ್ಕಾಗಿ ಬಳಸಿಕೊಳ್ಳುವ ರಾಜಕಾರಣದ ಹುನ್ನಾರವನ್ನು ಅರಿಯುವಂತೆ ಮಾಡುತ್ತದೆ. ಇದಕ್ಕೆ ಬಲಿಯಾಗುತ್ತಿರುವುದು ದೇಶದ ಯುವಕರ ಭವಿಷ್ಯವೇ ಆಗಿದೆ ಎಂಬುದು ನಮ್ಮ ದೌರ್ಭಾಗ್ಯ.

ಡಾ. ಕೊಟ್ರೇಶ್ ಉತ್ತಂಗಿ ಬರೆದ 'ಚೌಡಿಹುಟ್ಟು' ಕಥೆಯಲ್ಲಿ ಒಂದು ದೇವಸ್ಥಾನ ರೂಪುಗೊಂಡ ಬಗ್ಗೆ ನಿರೂಪಕರೆ ಸಾಕ್ಷಿಯಾಗಿದ್ದರ ಕುರಿತು ಹೇಳುತ್ತದೆ. ಜೊತೆಗೆ ಇಲ್ಲಿ ಮೌಢ್ಯವನ್ನು ಒಡೆಯುವ ಕೆಲಸ ಕೂಡ ಮಾಡಲಾಗಿದೆ. "ಕರ್ಪೂರದ ದೀಪ ಅಂದ್ಕೂಡ್ಲೆ ಜನರು ಮಕ್ಕಳಿಗೆ ಕೊಡಿಸ್ಲಿಕ್ಕೆ ಬಿಸ್ಕೆಟ್ ಗೆ ರೊಕ್ಕ ಇಲ್ಲದಿದ್ದರೂ ದೀಪದ ತಟ್ಟೆಗೆ ಹಾಕ್ಲಿಕ್ಕೆ ರೊಕ್ಕ ಇರ್ತಿತ್ತು" ಈ ಮಾತು, ಬದುಕನ್ನ ಹಸನು ಮಾಡುತ್ತಾ ಹಸಿವು, ಬಡತನವನ್ನು ದೂರ ಮಾಡುವ ಬದಲು ದೈವದ ಆಚರಣೆ ಮುಗ್ಧ ಜನರ ಬದುಕನ್ನ ಇನ್ನಷ್ಟು ಬಡವಾಗಿಸುತ್ತಿವೆ ಎಂಬುದನ್ನು ತಿಳಿಸುತ್ತದೆ. ಅಲ್ಲಿನ ಪೂಜಾರಿಯ ಬದುಕು ಸಂಪನ್ನವಾಗುವಾಗ ಅಲ್ಲಿನ ಭಕ್ತರ ಹದಗೆಟ್ಟ ಆರ್ಥಿಕ ಪರಿಸ್ಥಿತಿ ಇಲ್ಲಿ ತೆರೆದು ಕೊಳ್ಳುತ್ತದೆ. ಶ್ರಮ ಸಮುದಾಯದ ದೈವಗಳನ್ನೇ ಬಳಸಿಕೊಂಡು ತಮ್ಮ ಜಾತಿ, ವರ್ಗದ ಪ್ರಾಬಲ್ಯವನ್ನು ಬಲಪಡಿಸಿಕೊಳ್ಳುವ ಮೇಲ್ವರ್ಗದ ಜನರ ಮೂಲವನ್ನೇ ಅಲ್ಲಾಡಿಸಿ ದೈವದ ಹುಸಿ ನಂಬಿಕೆಯನ್ನು ಕಥೆಗಾರರು ಬಯಲುಗೊಳಿಸುತ್ತಾರೆ. ಧಾರ್ಮಿಕ ಆಚರಣೆಗಳು ಮನುಷ್ಯನನ್ನು ಬೇರ್ಪಡಿಸದೆ ಮುಕ್ತವಾಗಿ ಬೆರೆತು ಸಮತೆಯನ್ನು ಕಾಯ್ದುಕೊಳ್ಳುವ ಕೆಲಸ ಮಾಡಬೇಕು ಎಂಬುದು ಕಥೆಯ ಒಟ್ಟು ನಿಲುವಾಗಿದೆ. ಇಲ್ಲಿ ಬದುಕಿಗೆ ಮನುಷ್ಯ ಪ್ರೀತಿಯೇ ದೇವರು ಮಿಕ್ಕಿದ್ದೆಲ್ಲ ಮುಖ್ಯವಲ್ಲ. ಎಂತದ್ದೇ ದೈವದ ಆಚರಣೆಗಳು ಮನುಕುಲಕ್ಕೆ ಮಾರಕವಾಗಿದ್ದರೆ ಮಾತ್ರ ಅವು ಪ್ರಶ್ನಾರ್ಹವೇ ಆಗಿರುತ್ತವೆ ಎಂಬ ತಿಳಿವು ಕಥೆಯ ಓದಿನ ಮೂಲಕ ಅರ್ಥವಾಗುತ್ತದೆ.

ಕೆ.ಪಿ. ದೇವೇಂದ್ರಪ್ಪನವರ 'ಮರ್ಯಾದಸ್ಥರು' ಕಥೆಯ ಶೀರ್ಷಿಕೆ ಮರ್ಯಾದಸ್ಥರು ಅಂದರೆ ಯಾರು? ಅವರ ಅನೈತಿಕ ಕೆಲಸಗಳಿಗೆ ಸಮಾಜ ಸಭ್ಯ ಎಂಬ ಕಿರೀಟ ಕೊಟ್ಟದ್ದು ಹೇಗೆ? ಅನ್ಯಾಯಕ್ಕೊಳಗಾದ ಹೆಣ್ಣು ಮರ್ಯಾದೆ ಇಲ್ಲದ ಊರ ಗೌಡನ ದೌರ್ಜನ್ಯವನ್ನು ಸಹಿಸಿಕೊಳ್ಳುವುದು ಯಾಕೆ? ಹಾಲಮ್ಮ ಮತ್ತು ಆನಂದನ ಪರಿಶುದ್ಧ ಸ್ನೇಹ ಸಲುಗೆಗೆ ಮರ್ಯಾದೆ ಇಲ್ಲವೇ? ಊರಿನ ಸುಳ್ಳು ಸುದ್ದಿಗೆ ಅಂಜಿ ಅನಂತ ತಾನೇ ಆತ್ಮಹತ್ಯೆ ಮಾಡಿಕೊಳ್ಳುವಂತೆ ಮಾಡಿದ್ದು ಸರಿಯೇ? ಕೊಳಕು ಮನಸ್ಥಿತಿಯ ಆಚಾರ್ಯ ಮತ್ತು ರುದ್ರೇಗೌಡನ ಮರ್ಯಾದೆಗೆ ಸಲ್ಲಬೇಕಾದ ಬೆಲೆ ಏನು? ಹೀಗೆ ಹತ್ತಲವು ಪ್ರಶ್ನೆಗಳು ಈ ಕಥೆಯ ನಿರೂಪಣೆಯಿಂದಲೇ ಹೊರಬರುತ್ತದೆ. ಉದಾಹರಣೆ... ರುದ್ರೇಗೌಡ : 'ಏನೇ ಚಿನಾಲಿ, ಅಲೆ ಏನು ಹುಂದ್ರಾ ಕಟ್ತಾ ಇದ್ದೀಯ ಅವ್ನ ಜೊತೆಗೆ ಎನ್ನುತ್ತಾ ಹಾಲವ್ವನಿಗೆ ಸಿಕ್ಕ ಸಿಕ್ಕ ಕಡೆ ವದ್ದರು.' ಮೂರು ಮಕ್ಕಳು ಎಚ್ಚರಾಗಿ ಗೋಳೋ ಎಂದು

ಅತ್ತರು ಕನಿಕರವಿಲ್ಲದ ಈ ದಾಷ್ಟ್ಯತೆ, ಜಾತಿ, ಹಣ, ಅಧಿಕಾರ, ಅಂತಸ್ತು ಮಾತ್ರವಲ್ಲ ಗಂಡಿನ ದರ್ಪವು ಸೇರಿದಂತೆ ಇಲ್ಲಿನ ಭಾಷಿಕ ನಿರೂಪಣೆಯಲ್ಲಿ ಕಂಡುಬರುತ್ತದೆ. ಮದುವೆ ಮತ್ತು ಪ್ರೀತಿ ಇವೆರಡನ್ನು ಹೊರತುಪಡಿಸಿ ಹೆಣ್ಣು ಇಂತದ್ದೊಂದು ಹಸಿವಿನ ಅನಿವಾರ್ಯತೆಗೆ ತನ್ನನ್ನೇ ತೆತ್ತುಕೊಳ್ಳುತ್ತ ಎರಡನೇ ದರ್ಜೆಯವಳಾಗಿ ಉಳಿದುಬಿಡುವ ಹಾಲಮ್ಮನ ಜೀವನ ಓದುಗರಲ್ಲಿ ಕರುಣೆಯನ್ನು ಹುಟ್ಟಿಸುತ್ತದೆ. ಅವಳ ಬದುಕಿನ ಮರ್ಯಾದೆಗೆ ಇರುವ ಪ್ರಾಮಾಣಿಕ ಬೆಲೆ ಏನು ಎಂಬುದಾಗಿ ವ್ಯಂಗ್ಯ ಪ್ರಶ್ನೆಯನ್ನು ಎಸೆದು ಬಿಡುತ್ತದೆ. ಇದಕ್ಕೆ ಹಾಲಮ್ಮನ ಕಣ್ಣೀರು ಮಾತ್ರ ಪ್ರತಿಕ್ರಿಯೆ ಆಗುವುದು ಅವಳ ಅಸಹಾಯಕತೆಯನ್ನು ಹೇಳುತ್ತದೆ.

ಕೃಷ್ಣ ಮಾಸಡಿ ಅವರ 'ಗ್ಯಾನಿ ಮತ್ತು ಗುಲಾಬಿ' ಕತೆಯಲ್ಲಿ ಗ್ಯಾನಿ ತನ್ನ ಹೆಂಡತಿಗೆ ಬಳಸುವ ಭಾಷೆ ಕೂಡ ಒರಟುತನದ್ದೆ ಆಗಿದೆ. ಹೆಂಡತಿಯ ದೇಹ ಮತ್ತು ಮನಸ್ಸು ಗಂಡನ ಹಕ್ಕು ಮಾತ್ರ ಎಂಬುದಾಗಿ ಚಿತ್ರತವಾಗಿದೆ. "ಮುಟ್ಟಿಲ್ಲವಂತೆ ಮುಚ್ಚು ಬಾಯಿ ಮಾದರ ಚೋದ್" ಎಂದು ಬಯ್ಯುವ ಅಧಿಕೃತ ಹಕ್ಕು ಗ್ಯಾನಿಗೆ ಮಾತ್ರ ಸ್ವಂತದ್ದು. ಇನ್‌ಸ್ಪೆಕ್ಟರ್ ಮಾದೇವಣ್ಣನ ಪ್ರೀತಿಗೆ ಒಲಿದು ಗುಲಾಬಿ ಮದುವೆಗೂ ಮುನ್ನ ಮೂರು ತಿಂಗಳ ಮಗುವನ್ನು ಹೊತ್ತು ಗ್ಯಾನಿಯನ್ನ ಮದುವೆಯಾಗಿ, ಮೆರವಣಿಗೆಯಲ್ಲಿ ಅಚಾನಕ್ಕಾಗಿ ಮಗುವನ್ನು ಕಳೆದುಕೊಳ್ಳುತ್ತಾಳೆ. ಆನಂತರ ಮತ್ತೆ ಮಾದೇವಣ್ಣನನ್ನು ಸೇರುತ್ತಾಳೆ. ಕೊನೆಗೆ ಊರಿಂದಲೇ ಕಣ್ಮರೆಯಾಗುವ ಗ್ಯಾನಿ ಮಾಡಿದ ತಪ್ಪಾದರೂ ಏನು ಎಂಬ ಪ್ರಶ್ನೆ ಓದುಗರನ್ನು ಕಾಡುತ್ತದೆ. ಗಂಡುಗಳಿಬ್ಬರ ಸಹವಾಸದಲ್ಲಿ ವ್ಯವಸ್ಥೆಯೊಂದರ ಚೌಕಟ್ಟಿನಲ್ಲಿ ಗುಲಾಬಿಯ ಸುತ್ತಲಿನ ಕಥೆಯ ವಾಸ್ತವದ ಅರಿವನ್ನು ಓದುಗರಿಗೆ ಪರಿಚಯಿಸುತ್ತಾರೆ ಕಥೆಗಾರರು.

ಡಿ.ಬಿ.ಶಂಕರಪ್ಪನವರು ಬರೆದ 'ಗಿಡ್ಡಜ್ಜಿಯ ಬಯಲು' ಕಾದಂಬರಿಯಲ್ಲಿಯೂ ಉಡಳ್ಳಿಗೆ ಗುದ್ದಮ್ಮನ ಬ್ಯಾನೆ ಹೆಮ್ಮಾರಿ ರೋಗಕ್ಕೆ ಕೆಳಗೇರಿಯ ಅನಕ್ಷರಸ್ಥ ಮಂಜಿ ಭೇದಭಾವ ಮಾಡದೆ ಔಷಧಿ ನೀಡಿ ಜನರ ಜೀವ ಕಾಪಾಡುತ್ತಾಳೆ. ಸ್ವಾತಂತ್ರ್ಯ ಪೂರ್ವದ ಗೌಡಿಕೆಯನ್ನು ಮೇಲ್ವರ್ಗದ ದೇವಿರಕ್ಕ ಕೂಡ ಪ್ರಶ್ನಿಸಿ ಎದುರಾಡುತ್ತಾಳೆ. ನೋಡು ಮಾವ ಹಟ್ಟಿಜನ ಏನು ಮಾತಾಡಲ್ಲ, ಇವರು ಭಿಕ್ಷೆ ಬೇಡಿ ನಿಮ್ಮಿಂದ ಪಡೆಯೋದೇನಿಲ್ಲ ನೀವೇ ತೀರ್ಮಾನಿಸಿ ಎಂದು ದಿಟ್ಟವಾಗಿ ಮಾತನಾಡಿದಾಗ ಜನರೇ ತಬ್ಬಿಬ್ಬುಗೊಳ್ಳುತ್ತಾರೆ. ತನ್ನ ಗಂಡ ಬಸಲಿಂಗಪ್ಪಗೌಡನಿಗೆ ಅಂಗಿ ಮ್ಯಾಲಂಗಿ ಚೆಂದನೋ ನನ್ನರಾಯ ಎಂದು ಗಂಡನನ್ನು ತಿದ್ದುವ ಕೆಲಸ ಮಾಡುತ್ತಾಳೆ. ಆರಂಭದಲ್ಲಿ ಅಳುಕು ಮನಸ್ಥಿತಿಯಿಂದ ನಂತರ ಗಟ್ಟಿಗಿತ್ತಿಯಾಗಿ ನಿಲ್ಲುವ ದೇವಿರಕ್ಕನ ಪಾತ್ರ ಪ್ರಗತಿಪರವಾಗಿ ಮುನ್ನಡೆಯುತ್ತದೆ. ಜೀನಹಳ್ಳಿ ಸಿದ್ದಲಿಂಗಪ್ಪನವರ 'ಪ್ರಿಯೇ ರಾಣಿ' ಕಥೆಯೊಳಗೆ ಪ್ರೀತಿ, ಪ್ರೇಮ ಅನ್ನೋದರ ಅರ್ಥ ಮನಸುಗಳನ್ನ ಬೆಸೆದುಕೊಳ್ಳುವ ಪ್ರಕ್ರಿಯೆ ಎಂಬ ನಿಲುವನ್ನು ದಾಟಿಸುತ್ತದೆ. ಪ್ರೀತಿ ಅನ್ನೋದರ ಅರ್ಥ ಎರಡು ಜೀವಿ ಕೂಡಿ ಚೆನ್ನಾಗಿ ಬದುಕೋದಲ್ವೇ? ಈ ಮಾತು ವ್ಯಕ್ತಿಯ ಭಾವಲೋಕ ಪ್ರೀತಿಯ ಭಾಷಾಲೋಕವೇ ಆಗುವುದನ್ನು ಕಾಣಬಹುದಾಗಿದೆ. ಬಾಳಿನ ಏಕತಾನತೆಗೆ ಅದರ ಲಯಕ್ಕೆ ಹೆಣ್ಣು ಗಂಡು ಇಬ್ಬರು ಜೊತೆಯಾಗಿಯೇ ಸ್ವರವಾಗಿ ಮಿಡಿಯುವ ಕ್ರಮದಲ್ಲಿ ಬದುಕಿನ ಅರ್ಥ ನೆಲೆಯೂರುತ್ತದೆ ಎಂಬ ಕಥಾ ನಿರೂಪಣ ಕ್ರಮ ಬಹಳ ಮುಖ್ಯವಾಗುತ್ತದೆ. ಊರಿನ ರೋಗ ವಾಸಿ ಮಾಡುವುದು ಮಾತ್ರವಲ್ಲ ಅಲ್ಲಿನ ಜನರ ಕೊಳಕು ಮನಸ್ಥಿತಿಯನ್ನು ವಾಸಿಮಾಡುವ ಮಂಜಿ ಏಕಕಾಲಕ್ಕೆ ಎರಡು ಕಾಯಿಲೆಗಳಿಗೆ ಚಿಕಿತ್ಸೆ ಕೊಡುವ ಪ್ರಯತ್ನ ಮಾಡುತ್ತಾಳೆ.

ಭಾರತದ ಜಾತಿ ರಾಜಕಾರಣ ಎಂಬುದು ಉಡಹಳ್ಳಿಯಲ್ಲಿ ದಟ್ಟವಾಗಿದ್ದರೂ ಸಹ ಅಲ್ಲೊಂದು ಹೆಣ್ಣು ಜೀವ ತಾಯ್ತನದ ಆರೈಕೆಯಲ್ಲಿ ಮುಳುಗಿ ಸುತ್ತಲಿನ ಸಮಾಜದ ಮಲಿನತೆಯನ್ನು ತೊಳೆಯುವ ಕೆಲಸ ಮಾಡುತ್ತದೆ. ಕಾಲರದಂತ ಕಾಯಿಲೆಗಳು ಧಿಡೀರ್ ಅಪ್ಪಳಿಸಿದಾಗ, ಗ್ರಾಮದ ಸ್ಥಳೀಯ ದೈವದ

ನಂಬಿಕೆಯಲ್ಲಿ ಔಷಧಿ ಮಾಡಿಕೊಳ್ಳುತ್ತಾ ಬದುಕನ್ನು ಉಳಿಸಿಕೊಳ್ಳುವ ಕ್ರಮ ಹಳ್ಳಿಯ ಅಥವಾ ಕೇರಿಗಳ ಸಹಜ ಬದುಕಿನ ನೋಟವನ್ನು ಹೇಳುತ್ತದೆ. ಈ ಸೀಮೆಯ ಹಬ್ಬ, ಆಚರಣೆ, ಕುಲದೈವ, ನಂಬಿಕೆ, ನ್ಯಾಯ ಪಂಚಾಯ್ತಿ, ಲೋಕರೂಢಿ ಪದ್ಧತಿಗಳು ಸ್ಥಳೀಯ ಸಾಮಾಜಿಕ ತಿಳಿವನ್ನು ಕಥನದೊಳಗೆ ಹೇಳುತ್ತವೆ. ಹಾಗೆಯೇ ಕತೆ, ಕಾದಂಬರಿಗಳಲ್ಲಿ ಬರುವ ಪಾತ್ರಗಳ ಮೂಲಕ ಮನುಷ್ಯನ ಮನಸ್ಸಿನ ತಾಕಲಾಟಗಳನ್ನು ಸೂಕ್ಷ್ಮ ನೋಟದಲ್ಲಿ ಕಾಣಿಸುತ್ತವೆ. ಇಲ್ಲಿನ ಭಾಷೆಯ ಸೊಗಡಿನ ಕಾರಣಕ್ಕೆ ಮತ್ತೆಮತ್ತೆ ಮರು ಓದನ್ನು ಬಯಸುವ ಹೊನ್ನಾಳಿ ಸೀಮೆಯ ಕಥನ ಸಾಹಿತ್ಯದ ನಿರೂಪಣಾ ಕ್ರಮವೂ ಬಹಳ ಮಹತ್ವದ್ದಾಗಿದೆ.

**ಆಕರ ಗ್ರಂಥಗಳು**


- ಚನ್ನೇಶ್ ಹೊನ್ನಾಳಿ (ಸಂ.). (2015). *ಹೊನ್ನಾಳಿ ಹೊಡ್ತ.* ಗೀತಾಂಜಲಿ ಪುಸ್ತಕ ಪ್ರಕಾಶನ.
- ಕೊಟ್ರೇಶ್ ಉತ್ತಂಗಿ, ನಾ. (2021). *ವಕ್ರಸುಳಿ.* ಸಿವಿಜಿ ಬುಕ್ಸ್.
- ಕೃಷ್ಣ ಮಾಸಡಿ. (2022). *ಸಮಗ್ರ ಕಥೆಗಳು.* ಶಶಿ ಪಬ್ಲಿಕೇಷನ್.
- ಶಂಕರಪ್ಪ, ಡಿ.ಬಿ. (2013). *ಗಿಡ್ಡಜ್ಜಿಯ ಬಯಲು.* ಮಾಯಮ್ಮ ಪ್ರಕಾಶನ.
- ಶೇಖರ್ ಕತ್ತಿಗೆ (ಸಂ.) (1986). *ಹಸಿದ ಕಣ್ಣುಗಳು.* ನಾಲ್ಕುಮುಖಿ ಪ್ರಕಾಶನ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 78-82
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಕನ್ನಡ ರಂಗ ಪಠ್ಯ ಸಾಹಿತ್ಯಿಕ ಅಧ್ಯಯನದ ಸ್ವರೂಪ

**ಶ್ರೀ ಶ್ರೀಹರಿ ಧೂಪದ**

ಸಂಶೋಧನಾ ವಿದ್ಯಾರ್ಥಿ, ಬಸವೇಶ್ವರ ವೀರಶೈವ ವಿದ್ಯಾವರ್ಧಕ ಸಂಘ (ಕನ್ನಡ ವಿಶ್ವವಿದ್ಯಾಲಯ ಸಂಶೋಧನಾ ಮಾನ್ಯತಾ ಕೇಂದ್ರ), ಬಾಗಲಕೋಟೆ.

**Abstract:**

*"ಅಸ್ತು ವಸ್ತುಷು ಮಾವಾ ಭೂತ್ ಕವಿನಾಚಿ ಸ್ವ ತೋ ರಸಃ" (ಕಾವ್ಯ ಮೀಮಾಂಸೆ – ರಾಜಶೇಖರ)*

*ಭಾರತೀಯ ಸಾಂಸ್ಕೃತಿಕ ಜಗತ್ತನ್ನು ವಿಸ್ತರಿಸಿದ ಅನೇಕ ಬಗೆಯ ಮೀಮಾಂಸೆ ಮತ್ತು ಸಾಹಿತ್ಯಿಕ ಚರಿತ್ರೆಗಳನ್ನು ನಾವು ಈ ತನಕ ಗಮನಿಸಿದ್ದೇವೆ. ಉದಾಹರಣೆಗೆ ಸಾಹಿತ್ಯ ಮೀಮಾಂಸೆ, ಸಾಹಿತ್ಯ ಚರಿತ್ರೆ, ಜಾನಪದ ಮೀಮಾಂಸೆ, ಜಾನಪದ ಚರಿತ್ರೆ, ನೃತ್ಯ ಮೀಮಾಂಸೆ, ನೃತ್ಯ ಚರಿತ್ರೆ, ಸಂಗೀತ ಮೀಮಾಂಸೆ, ಸಂಗೀತ ಚರಿತ್ರೆ ಹೀಗೆ ಹಲವು ಕವಲುಗಳನ್ನು ಇತಿಹಾಸದುದ್ದಕ್ಕೂ ಕಾಣುತ್ತೇವೆ ಆದರೆ ಕನ್ನಡ ಸಾಂಸ್ಕೃತಿಕ ಜಗತ್ತಿನ ಅವಿಭಾಜ್ಯ ಅಂಗವಾದ ರಂಗಭೂಮಿ ವಸ್ತು ಅಥವಾ ಪಠ್ಯ ಕುರಿತು ಈ ತನಕ ಅತ್ಯಂತ ಉಪೇಕ್ಷೆ ಮತ್ತು ಅಸಡ್ಡೆ ತಲೆದೋರಿದ್ಯಾಕೆ? ಎಂಬುದು ಮಾತ್ರ ಇಂದಿಗೂ ಸೋಜಿಗದ ವಿಚಾರ ಕನ್ನಡ ರಂಗಭೂಮಿಗೆ ಶತಮಾನಗಳ ಇತಿಹಾಸವಿದೆಯಾದರೂ ಈ ತನಕ ಕೇವಲ ನಾಟಕ ರಚನೆಕಾರರು ಮತ್ತು ನಾಟಕ ಕಂಪನಿಗಳ ಕುರಿತು ಒಂದಷ್ಟು ಸುಧೀರ್ಘ ಎನ್ನಬಹುದಾದ ಅಧ್ಯಯನಗಳು ಜರುಗಿವೆಯೇನೊ ನಿಜ. ಆದರೆ ನಾಟಕದ ಜೀವಾಳ ಅಥವಾ ಅದರ ಆತ್ಮದಂತಿರುವ ನಾಟಕ ವಸ್ತುವನ್ನಷ್ಟೇ ಪ್ರಧಾನ ವಿಷಯವನ್ನಾಗಿ ಆಯ್ದು ಅಧ್ಯಯನಗಳು ನಡೆದೇ ಇಲ್ಲ. ಪಾಶ್ಚಾತ್ಯ ಸಾಹಿತ್ಯ ಕ್ಷೇತ್ರ ಹಾಗಲ್ಲ ಅಲ್ಲಿ ನಾಟಕದ ಮುಖೇನವೇ ಸಾಹಿತ್ಯ ಮತ್ತು ಸಾಂಸ್ಕೃತಿಕ ಜಗತ್ತು ತನ್ನನ್ನು ತಾನು ತೆರೆದುಕೊಳ್ಳುವುದರಿಂದ ಅಲ್ಲಿ ನಾಟಕ ಮಿಮಾಂಸೆಯಿಂದಲೇ ಎಲ್ಲವೂ ಆರಂಭಗೊಳ್ಳುತ್ತದೆ. ಆದರೆ ಈ ತನಕ ನಾಟಕ ಅಥವಾ ರಂಗಭೂಮಿ ಎನ್ನುವುದನ್ನು ನಾವು ಕೇವಲ ಸಾಂಸ್ಕೃತಿಕ ಆಯಾಮಗಳ ಒಂದು ಭಾಗವನ್ನಾಗಿ ಗಮನಿಸಿದ್ದರಿಂದ ಈ ಬಗೆಯ ಅಧ್ಯಯನದ ಹಿಂಜರಿಕೆ ಉಂಟಾಗಿರಬಹುದೇನೊ.*

**Keywords:** *ಕನ್ನಡ ಸಾಹಿತ್ಯ, ರಂಗಭೂಮಿ, ರಂಗಪಠ್ಯ, ಸಾಹಿತ್ಯಕ ಅಧ್ಯಯನ, ನಾಟಕ ಮಿಮಾಂಸೆ.*

**ಪೀಠಿಕೆ**

ನಾಟಕವೆಂಬುದು ಕೇವಲ ವಾಚಿಕ ಕಾಯಕವಷ್ಟೇ ಆಗಿರದೆ ಏಕಕಾಲಕ್ಕೆ ನೋಡುವ, ಅರಿಯುವ ಅನುಭೂತಿ ಪಡೆಯುವ ಪ್ರಕ್ರಿಯೆಯಾಗಿದ್ದು ಎಲ್ಲ ಸಾಂಸ್ಕೃತಿಕ ಆಯಾಮಗಳ ತಾಯಿ ಎಂದರೂ ತಪ್ಪಾಗಲಿಕ್ಕಿಲ್ಲ. ಅಂತಹ ತಾಯ್ತನವನ್ನು ಅನೇಕ ದಶಕಗಳಿಂದ, ಶತಮಾನಗಳಿಂದ ನಾಟಕವೆಂಬುದು ನೀಡುತ್ತಲೇ ಬಂದಿದೆ ಆದರೆ ಚರಿತ್ರೆ ಮತ್ತು ಮಿಮಾಂಸಕಾರರು ಸಂಸ್ಕೃತ ಅಧ್ಯಯನಗಳ ಪ್ರಭಾವದಿಂದಲೋ ಅಥವಾ ಹೊಸಗನ್ನಡದ ಆರಂಭದ ಕವಿಗಳು ಮಿಮಾಂಸೆ ಎಂದರೆ ಸಾಹಿತ್ಯ ಮತ್ತು ಅದರ ಕುರಿತಾಗಿ ಮಾತ್ರ ಇರಬೇಕೆಂಬ ಸ್ವ–ಹಿತಾಸಕ್ತಿ ಹಾಕಿಕೊಂಡ ಕಟ್ಟಳೆಗಳಿಂದಲೋ ಏನೋ

***Please cite this article as:*** ಶ್ರೀ ಶ್ರೀಹರಿ ಧೂಪದ. (2024). ಕನ್ನಡ ರಂಗ ಪಠ್ಯ ಸಾಹಿತ್ಯಿಕ ಅಧ್ಯಯನದ ಸ್ವರೂಪ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್*, 3(3), 78–82

ಇಂದಿಗೂ ಸಾಹಿತ್ಯದ ಹಲವು ಆಯಾಮಗಳಲ್ಲಿ ನಡೆದ ಮಿಮಾಂಸೆಯ ಕಿಂಚಿತ್ ಕೆಲಸವೂ ನಾಟಕದ ಪಠ್ಯವನ್ನು ಕೇಂದ್ರೀಕರಿಸಿ ನಡೆದೇ ಇರುವುದಕ್ಕೆ ಕಾರಣವಿರಬಹುದು. ಈ ಹಿನ್ನೆಲೆಯಲ್ಲಿ ನಾಟಕ ಪಠ್ಯವನ್ನೇ ಮೂಲ ಅಧ್ಯಯನದ ಸರಕನ್ನಾಗಿಸಿಕೊಂಡು ಅಧ್ಯಯನಕ್ಕೆ ತೊಡಗಿದ್ದೇ ಆದರೆ ಭಾರತೀಯ ಅದರಲ್ಲೂ ಕನ್ನಡ ಸಾಹಿತ್ಯದ ಹೊಸ ಬಗೆಯ ಅಧ್ಯಯನದ ಸಾಧ್ಯತೆಗೆ ಎಡೆ ಮಾಡಿ ಕೊಟ್ಟಂತಾಗುತ್ತದೆ ಎಂಬ ಗಟ್ಟಿಯಾದ ಅಭಿಪ್ರಾಯ ನನ್ನದು. ಈ ಹಿನ್ನೆಲೆಯಲ್ಲಿ ಕನ್ನಡ ರಂಗಪಠ್ಯದ ಸ್ವರೂಪವನ್ನು ಅರಿಯುವ ದೃಷ್ಟಿಯಿಂದ ಅಧ್ಯಯನದ ಅನುಕೂಲಕ್ಕಾಗಿ ಈ ಕೆಳಗಿನಂತೆ ಅವಸ್ಥಾ ಭೇದಗಳನ್ನಾಗಿ ವಿಂಗಡಿಸಕೊಳ್ಳಬಹುದು ಎಂಬ ಅಭಿಪ್ರಾಯ ನನ್ನದು.

**ವಿಭಾಗೀಯ ಕ್ರಮ**

ಕನ್ನಡ ರಂಗ ಪಠ್ಯಗಳನ್ನು ಅಧ್ಯಯನದ ಕ್ರಮಗಳನ್ನಾಗಿ ವಿಭಾಗಿಸಿಕೊಂಡು ವಿಸ್ತರಿಸಿಕೊಳ್ಳುವ ಬಗೆಯಲ್ಲಿ ಒಂದಷ್ಟು ತೊಡಕುಗಳು ಕಾಣಸಿಗುವ ಸಾಧ್ಯತೆಯನ್ನು ತಳ್ಳಿ ಹಾಕಲಾಗುವುದಿಲ್ಲ. ಏಕೆಂದರೆ ಸಾಹಿತ್ಯ ಕ್ಷೇತ್ರದಂತೆ ರಂಗ ಪಠ್ಯ ಚರಿತ್ರೆಗೆ ಏಕಮುಖವೆಂಬುದಿಲ್ಲ. ಆದರೂ ಪ್ರಯತ್ನದ ಮೂಲಕ ಅದನ್ನು ಈ ಕೆಳಗಿನಂತೆ ಸರಳೀಕರಿಸಿಕೊಳ್ಳು ಸಣ್ಣ ಪ್ರಯತ್ನಕ್ಕೆ ಮುಂದಾಗಿದ್ದೇನೆ. ನಾಟಕ ಅಥವಾ ರಂಗಭೂಮಿಯನ್ನು ಆರಂಭದಲ್ಲಿ ಪ್ರಭಾವಿಸಿ, ಪ್ರೇರಿಪಿಸಿದ ಅಂಶಗಳ ಮೂಲಕ ವಿಭಾಗಿಸಿಕೊಳ್ಳುವುದು ಸೂಕ್ತ ಎಂಬ ಊಹೆ ನನ್ನದು.

**1. ಮರಾಠಿ ರಂಗ ಪಠ್ಯ**

ಮರಾಠಿ ನಾಟಕಗಳು ಕನ್ನಡ ನಾಟಕಗಳ ಮುಂಗೋಳಿ ಇದ್ದ ಹಾಗೆ. ಬಹುತೇಕ ಆಧುನಿಕ ಕನ್ನಡ ರಂಗಭೂಮಿ ಆರಂಭಗೊಂಡಿರುವುದೇ ಮರಾಠಿ ನಾಟಕಗಳ ಪ್ರಭಾವದಿಂದ. ಈ ಕಾರಣಕ್ಕಾಗಿಯೇ ಕನ್ನಡ ನಾಟಕಗಳು ಹೊಸ ಬಗೆಯ ಅಭಿವ್ಯಕ್ತಿ ವಿಧಾನವನ್ನು ಪಡೆದವು. ಉದಾಹರಣೆಗೆ 1843ರ ಸುಮಾರಿಗೆ ಮರಾಠಿಯ 'ವಿಷ್ಣುದಾಸ ಭಾವೆ'ಯವರ ಸೀತಾ ಸ್ವಯಂವರ ಮರಾಠಿ ನಾಟಕಗಳಲ್ಲಿಯೇ ಮೊದಲು ಎಂಬುದಕ್ಕೆ ಪಾತ್ರವಾಗಿದ್ದು ಸಾಂಗ್ಲಿಯಲ್ಲಿ ಪ್ರದರ್ಶನಗೊಳ್ಳುತ್ತದೆ. ಹೀಗಾಗಿ ಕನ್ನಡ ಮತ್ತು ಮರಾಠಿ ನಾಟಕಗಳು ಆರಂಭಿಕ ಕೊಡುಕೊಳ್ಳುವಿಕೆಯೊಂದಿಗೆ ಆರಂಭವಾಗಿ ನಂತರ ಪ್ರತ್ಯೇಕ ಭಾಷಾ ಪ್ರಯೋಗಗಳಾಗಿ ಮಾರ್ಪಟ್ಟಿರುವುದನ್ನು ನಾವು ಗಮನಿಸುತ್ತೇವೆ. ಭಾಷೆ ಬೇರೆಯಾದರೂ ನಾಟಕದ ಕಥಾವಸ್ತುವಿನ ಆಯ್ಕೆಯಲ್ಲಿ ಭಿನ್ನತೆಯನ್ನು ಕಾಣುತ್ತೇವೆ. ಈ ಹಿನ್ನಲೆಯಲ್ಲಿ ಪಠ್ಯ ವಿಶ್ಲೇಷಣೆ ಕಾರ್ಯ ಇಲ್ಲಿ ಮುಖ್ಯವಾಗುತ್ತದೆ. ಮರಾಠಿ ನಾಟಕಗಳನ್ನೇ ನೇರವಾಗಿ ಅನುವಾದಿಸಿ ಕನ್ನಡದಲ್ಲಿ ಪ್ರದರ್ಶನಗೊಳಿಸಿದ ವೃತ್ತಿ ರಂಗಭೂಮಿ ಪ್ರಯೋಗಗಳು ಅನೇಕವಿದ್ದು, ಅವುಗಳ ಸಮಸ್ತ ಅಧ್ಯಯನದ ಅಗತ್ಯತೆಯನ್ನು ಇಲ್ಲಿ ಉಲ್ಲೇಖಿಸಬಹುದಾಗಿದೆ.

**2. ಬಂಗಾಲಿ ರಂಗ ಪಠ್ಯ**

ಆಧುನಿಕ ಕನ್ನಡ ಸಾಹಿತ್ಯಕ್ಕೆ ಬಂಗಾಳಿ ಭಾಷೆಯ ಪ್ರಭಾವದಷ್ಟೇ ಪ್ರೇರಣೆಯಾಗಿ ಬಂದದ್ದು ನಾಟಕ ಕ್ಷೇತ್ರಗಳೂ ಸಹ. ಬಂಗಾಳಿ ಭಾಷೆಯ ಮೂಲಕವೇ ಕನ್ನಡಕ್ಕೆ ಷೇಕ್ಸ್‌ಪೀಯರ್‌ನ ನಾಟಕಗಳು ಕನ್ನಡಕ್ಕೂ ತರ್ಜುಮೆಗೊಂಡು ಪ್ರದರ್ಶಿಸಲ್ಪಟ್ಟಿದ್ದು, ಕನ್ನಡ ಮತ್ತು ಬಂಗಾಳಿ ಭಾಷಾ ಬಾಂಧವ್ಯದ ಜೊತೆ ನಾಟಕ ಪಠ್ಯದ ಕುರಿತೂ ಬೆಳೆದ ಅನನ್ಯತೆಯನ್ನು ಮಿಮಾಂಸಾತ್ಮಕವಾಗಿ ಅಧ್ಯಯನ ಕೈಗೊಳ್ಳಬಹುದಾದ ಸಾಧ್ಯತೆಯನ್ನು ಒತ್ತಿ ಹೇಳಬಹುದಾಗಿದೆ.

**3. ಮೈಸೂರು ಸಂಸ್ಥಾನದ ರಂಗಪಠ್ಯ**

ಮರಾಠಿ ಮತ್ತು ಬಂಗಾಳಿ ನಾಟಕಗಳ ಬೆಳವಣಿಗೆ ಜೊತೆಜೊತೆಗೆ ಮೈಸೂರು ಸಂಸ್ಥಾನ ರಂಗಪಠ್ಯ ರಚನೆ ಹಾಗೂ ನಾಟಕ ಕಂಪನಿಗಳ ಹುಟ್ಟು ಬೆಳವಣಿಗೆಗೆ ತನ್ನದೇ ಆದ ಕೊಡುಗೆ ನೀಡಿದೆ. ಸಿಂಗರಾರ್ಯನ ಮಿತ್ರವಿಂದಾ ಗೋವಿಂದ ನಾಟಕದಿಂದ ಆರಂಭಗೊಂಡು ಅನೇಕ ನಾಟಕ ರಚನೆಕಾರರನ್ನು ಕರೆಯಿಸಿ ಅವರಿಗೆ ಆಶ್ರಯ ನೀಡಿ,

ನಾಟಕ ರಚನೆಗೆ ಪ್ರೋತ್ಸಾಹ ನೀಡಿದ್ದನ್ನು ಇಲ್ಲಿ ಉಲ್ಲೇಖಿಸಬಹುದು. ಇಂಥ ಸಮಯದಲ್ಲಿ ಮೂಡಿಬಂದ ರಂಗಪಠ್ಯದ ವಿಶಿಷ್ಟತೆಯನ್ನು ವಿಶೇಷವಾಗಿ ಅರಿಯುವುದೂ ಕೂಡಾ ಇಂದಿನ ಸಾಹಿತ್ಯದ ಅಗತ್ಯತೆಗಳಲ್ಲಿ ಒಂದಾಗಿದೆ ಎನ್ನಬಹುದು.

**4. ಪಾಶ್ಚಾತ್ಯ ರಂಗ ಪಠ್ಯ**

ಭಾರತೀಯ ನಾಟಕಗಳೂ ಸೇರಿದಂತೆ ಕನ್ನಡ ನಾಟಕಗಳು ಪಾಶ್ಚಾತ್ಯ ನಾಟಕಗಳ ಪ್ರಭಾವದಿಂದ ಒಂದು ಬಗೆಯ ಹೊಸ ಜನ್ಮ ತಾಳಿದುದು ಎಂದರೂ ತಪ್ಪಾಗಲಿಕ್ಕಿಲ್ಲ. ಹಾಗೆ ನೋಡಿದರೆ ಇಂದು ನಾವು ಗ್ರಹಿಸುತ್ತಿರುವ ರಂಗಭೂಮಿ ಎಂಬುದರ ಒಟ್ಟು ಪರಿಕಲ್ಪನೆ ದೊರಕಿದ್ದೆ ನಮಗೆ ಪಾಶ್ಚಾತ್ಯ ನಾಟಕಕಾರರ ಪ್ರಭಾವದಿಂದ ಈ ಕಾರಣಕ್ಕೆ ಆರಂಭದಲ್ಲಿ ಪಾಶ್ಚಾತ್ಯರ ಅನುಕರಣೆಯ ನಾಟಕ ಪಠ್ಯವೇ ನಮಗೆ ನಮ್ಮ ನಾಟಕ ಪಠ್ಯದ ಭಾಗವಾದಂತೆ ಗೋಚರಿಸುತ್ತದೆ. ಉದಾ: ಬಿಎಂಶ್ರೀ ಅವರ ಅಶ್ವತ್ಥಾಮನ್, ಕುವೆಂಪು ಅವರ ಬೆರಳ್ಗೆ ಕೊರಳ್ ಮುಂತಾದವುಗಳನ್ನು ಸಧ್ಯಕ್ಕೆ ಗಮನಕ್ಕೆ ತಂದುಕೊಳ್ಳಬಹುದಾಗಿದೆ.

ಇದರಷ್ಟೇ ಮುಖ್ಯವಾಗಿ

1. **ಪೌರಾಣಿಕ ರಂಗಪಠ್ಯ:** ಇದೇ ರೀತಿ ಕನ್ನಡ ನಾಟಕಗಳ ಆರಂಭವನ್ನು ಮಹಾಕಾವ್ಯಗಳ ಬಿಡಿ ಭಾಗಗಳನ್ನೋ, ಅಥವಾ ಪೂರ್ಣಭಾಗವನ್ನೋ ಆವರಿಸಿ ರಚಿಸಲ್ಪಟ್ಟ ನಾಟಕ ವಸ್ತುವನ್ನು ಕಾಣುತ್ತೇವೆ.
2. **ಐತಿಹಾಸಿಕ ರಂಗಪಠ್ಯ:** ಪೌರಾಣಿಕದಷ್ಟೇ ಪ್ರಭಾವಶಾಲಿಯಾದ ಕನ್ನಡ ನಾಟಕದ ವಸ್ತು ಮತ್ತೊಂದು ಮಗ್ಗುಲೆಂದರೆ ಐತಿಹಾಸಿಕ ನಾಟಕಗಳದ್ದು.
3. **ಜಾನಪದ ರಂಗ ಪಠ್ಯ:** ಇನ್ನು ಎಲ್ಲ ಅಭಿವ್ಯಕ್ತಿ ಮಾಧ್ಯಮಗಳ ಮೂಲವಾದ ಜಾನಪದ ನಾಟಕ ಕ್ಷೇತ್ರವನ್ನೂ ಮೊದಲ್ಗೊಳ್ಳುತ್ತದೆ. ಜನಪದ ರಂಗಭೂಮಿಗೆ ಅದರದ್ದೇ ಆದ ರಂಗಪಠ್ಯವಿದೆ. ಆ ಪಠ್ಯ ವಸ್ತುವಿನ ಅಭಿವ್ಯಕ್ತಿಗಾಗಿಯೇ ಜನಪದ ರಂಗಭೂಮಿಯ ಅನೇಕ ಮಾರ್ಗಗಳನ್ನು ಅದು ರೂಪಿಸಿಕೊಂಡಿದ್ದನ್ನು ಇಲ್ಲಿ ಗಮನಿಸಬಹುದಾಗಿದೆ.

**4. ಸ್ವಾತಂತ್ರ್ಯ ಹೋರಾಟದ ರಂಗಪಠ್ಯ**

ಕನ್ನಡ ನಾಟಕ ಪರಂಪರೆಗೆ ಸ್ವಾತಂತ್ರ್ಯೋತ್ತರ ಕಾಲದಲ್ಲಿ ಸ್ವಾತಂತ್ರ ಹೋರಾಟಗಾರರನ್ನೇ ಮುಖ್ಯ ಕಥಾ ವಸ್ತುವನ್ನಾಗಿ ಉಳ್ಳ ನಾಟಕಗಳು ಅನೇಕ ಅವುಗಳ ಅಭಿವ್ಯಕ್ತಿ ಕ್ರಮವನ್ನು ಅಧ್ಯಯನ ಮಾಡಬೇಕಾದ ಸಾಧ್ಯತೆ ದಟ್ಟವಾಗಿದೆ.

**5. ಸಾಮಾಜಿಕ ರಂಗಪಠ್ಯ**

**6. ಬೀದಿ ನಾಟಕಗಳ ಪಠ್ಯ**

ಅಲ್ಲದೆ ಸಾಮಾಜಿಕ ನಾಟಕದ ವಿವಿಧ ಆಯಾಮಗಳ ಮುಖ್ಯ ಭೂಮಿಕೆಗಳಾದ ಸಾಮಾಜಿಕ ನಾಟಕಗಳ ಕಥಾವಸ್ತು ಹಾಗೂ ಬೀದಿ ನಾಟಕಗಳ ಮೂಲಕ ಜಾಗೃತಿಗೆ ಕಾರಣೀಭೂತವಾದ ಕಥಾ ವಸ್ತುಗಳ ಪ್ರತ್ಯೇಕ ಅಧ್ಯಯನದಿಂದಲೂ ಸಾಹಿತ್ಯದ ಹೊಸ ಮಾರ್ಗವನ್ನು ವಿಸ್ತರಿಸಿಕೊಳ್ಳಬಹುದಾದ ಮಾರ್ಗವನ್ನು ತಿಳಿಯಬಹುದು.

7. **ವೃತ್ತಿ ಕಂಪನಿ ನಾಟಕಗಳ ಪಠ್ಯ**

ವೃತ್ತಿ ನಾಟಕಗಳ ರಚನಾ ಶೈಲಿ ಮತ್ತು ಅಭಿವ್ಯಕ್ತಿ ಕ್ರಮಕ್ಕೆ ಕನ್ನಡ ರಂಗ ಚರಿತ್ರೆಯಲ್ಲಿ ವಿಶಿಷ್ಟ ಸ್ಥಾನವಿದೆ. 70ರ ದಶಕವನ್ನು ಕನ್ನಡ ವೃತ್ತಿ ರಂಗಭೂಮಿಯ ಸುವರ್ಣಯುಗವೆಂದು ಚರಿತ್ರೆಕಾರರು ಗುರುತಿಸುತ್ತಾರೆ. ಅಷ್ಟರ ಮಟ್ಟಿಗೆ ವೃತ್ತಿ ನಾಟಕಗಳು ತಮ್ಮ ಅಸ್ತಿತ್ವವನ್ನು ಕನ್ನಡ ನೆಲದಲ್ಲಿ ಸ್ಥಾಪಿಸಿವೆ. ಹೀಗಾಗಿ ಮಹತ್ವದ ವೃತ್ತಿ ನಾಟಕಗಳ ಪಠ್ಯವನ್ನು ಕೇಂದ್ರೀಕರಿಸಿ ಅಧ್ಯಯನ ಕೈಗೊಳ್ಳಬಹುದಾಗಿದೆ.

***ಅ) ಹವ್ಯಾಸಿ ನಾಟಕಗಳ ಪಠ್ಯ***

ವೃತ್ತಿ ನಾಟಕಗಳ ಪ್ರಭಾವದಿಂದಲೇ ಹವ್ಯಾಸಿ ನಾಟಕಗಳು ಕನ್ನಡತನದ ಅಭಿವ್ಯಕ್ತಿಯ ವಿಶಿಷ್ಟ ಮಾರ್ಗವಾಗಿದ್ದು, ವೃತ್ತಿ ನಾಟಕಗಳ ಪಠ್ಯಕ್ಕಿಂತ ಅಗತ್ಯಕ್ಕೆ ಅನುಗುಣವಾಗಿ ನಾಟಕ ಪಠ್ಯ ರಚನೆಯಾಗುವುದನ್ನು ಇಲ್ಲಿ ಗಮನಿಸುತ್ತೇವೆ.

***ಆ) ಬಾನುಲಿ ನಾಟಕಗಳ ಪಠ್ಯ***

ನಮ್ಮಲ್ಲಿ ರೇಡಿಯೋ ಅಥವಾ ಬಾನುಲಿ ನಾಟಕಕಾರರು ಮತ್ತು ನಾಟಕಗಳ ಒಂದು ದೊಡ್ಡ ಪರಂಪರೆಯೇ ಇದೆ. ಇಂತಿಷ್ಟೇ ಸಮಯಕ್ಕೆ

ಅನುಗುಣವಾಗಿ ಇಂಥದ್ದೇ ವಿಷಯವನ್ನು ಅಳವಡಿಸಿ ರಚಿಸಲ್ಪಟ್ಟ ರಂಗ ಪಠ್ಯಗಳ ಅಧ್ಯಯನವನ್ನು ಈ ವಿಭಾಗದಲ್ಲಿ ಕಂಡುಕೊಳ್ಳಬಹುದಾಗಿದೆ.

***ಇ) ಏಕಾಂಕ ನಾಟಕಗಳ ಪಠ್ಯ***

ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರದಲ್ಲಿ ಏಕಾಂಕ ನಾಟಕಗಳು ಎಂಬ ಪರಿಕಲ್ಪನೆಯೇ ವಿಶಿಷ್ಟವಾದುದು ಇಲ್ಲಿಯೂ ಸಹ ಸಮಯ ಮತ್ತು ಪರಿಕಲ್ಪನೆಯನ್ನೇ ಮೂಲ ಉದ್ದೇಶವನ್ನಿಟ್ಟುಕೊಂಡು ರಚಿಸಲ್ಪಟ್ಟ ರಂಗ ಪಠ್ಯರಚನೆಯಾಗಿದ್ದು ಈ ಬಗೆಯ ಅಧ್ಯಯನದ ಅಗತ್ಯತೆಯನ್ನು ಮನಗಾನಬಹುದಾಗಿದೆ. ಇವಿಷ್ಟೇ ಅಲ್ಲದೆ ಇನ್ನು ಅನೇಕ ಬಗೆಯಾಗಿ ವಿಂಗಡಿಸಿ ಅಧ್ಯಯನಕ್ಕೆ ಒಳಗು ಮಾಡಬಹುದು ಕೆಲ ಉದಾಹರಣೆಗಳನ್ನು ಕೆಳಗೆ ಉಲ್ಲೇಖಿಸಿದ್ದೇನಷ್ಟೇ.

**ಹೊಸಗನ್ನಡ ಸಾಹಿತ್ಯ ಅಧ್ಯಯನ ಕ್ರಮಗಳಿಗೆ ಅನುಗುಣವಾಗಿ**

ಹೊಸಗನ್ನಡ ಸಾಹಿತ್ಯದ ಘಟ್ಟಗಳು ಎಂದು ನಾವು ಯಾವನ್ನು ಗುರುತಿಸುತ್ತೇವೋ ಅವುಗಳ ಆಧಾರದ ಮೇಲೆಯೂ ಸಾಹಿತ್ಯದ ಜೊತೆಜೊತೆಗೆ ನಾಟಕಗಳು ಒಡಮೂಡಿದ್ದನ್ನು ನಾವು ಕಾಣುತ್ತೇವೆ. ನವೋದಯ ಕಾಲಘಟ್ಟದ ಬಿ.ಎಂ.ಶ್ರೀ ಕುವೆಂಪು, ಬೇಂದ್ರೆ ಅವರುಗಳಿಂದ ಆರಂಭಗೊಂಡು ಪ್ರತಿ ತೀರಾ ಇತ್ತೀಚಿನ ನಟರಾಜ ಬೂದಾಳು, ನಟರಾಜ ಹುಳಿಯಾರ ಹಾಗೂ ಹೊಸ ತಲೆಮಾರಿನ ಇನ್ನೂ ಅನೇಕ ರಂಗಕರ್ಮಿಗಳ ವರೆಗೂ ನಾಟಕಕ್ಕಾಗಿಯೇ ಹೊಸ ಬಗೆಯ ಪಠ್ಯ ಸಿದ್ಧ ಪಡಿಸಿಕೊಮಡ ನಾಟಕಗಳನ್ನು ಕಾಣುತ್ತಲೇ ಇದ್ದೇವೆ. ಈ ಹಿನ್ನೆಲೆಯಲ್ಲಿ ಅಧ್ಯಯನದ ಸಾಧ್ಯತೆಯನ್ನೂ ಗುರುತಿಸಬಹುದಾಗಿದೆ.

1. ನವೋದಯ ಕಾಲಘಟ್ಟದ ರಂಗ ಪಠ್ಯ
2. ನವ್ಯ ಕಾಲ ಘಟ್ಟದ ರಂಗ ಪಠ್ಯ
3. ಪ್ರಗತಿಶೀಲ ಘಟ್ಟದ ರಂಗ ಪಠ್ಯ
4. ದಲಿತ–ಬಂಡಾಯ ಕಾಲದ ರಂಗ ಪಠ್ಯ ಹಾಗೂ
5. ಇತ್ತೀಚಿನ ನಾಟಕ ಪಠ್ಯ

ಇದರ ಜೊತೆಜೊತೆಗೆ

ಧರ್ಮದ ವಸ್ತು ಆಧರಿಸಿಯೂ ವಿಭಾಗಿಸಿ ಅಧ್ಯಯನ ಕೈಗೊಳ್ಳಬಹುದಾಗಿದೆ.

ಧರ್ಮ ಮತ್ತು ಸಾಹಿತ್ಯ ಪರಸ್ಪರ ಕೊಡುಕೊಳ್ಳುವಿಕೆಯ ಸಂಬಂಧಿಗಳು. ಹೀಗಾಗಿ ಧರ್ಮ ಸ್ಥಾಪನೆ, ಧರ್ಮ ಚಿಂತನೆ, ಧರ್ಮ ಪ್ರಚಾರದಂತಹ ಕಾರ್ಯದ ಮೂಲ ಉದ್ದೇಶಕ್ಕಾಗಿಯೂ ರಚನೆಗೊಂಡ ನಾಟಕ ಪಠ್ಯಗಳನ್ನು ಪ್ರತ್ಯೇಕವಾಗಿ ಗಮನಿಸಿ ಅಧ್ಯಯನ ಕೈಗೊಳ್ಳಬಹುದಾಗಿದೆ. ಈ ಬಗೆಯ ಅನೇಕ ಪಠ್ಯಗಳನ್ನು ಗಮನಿಸಲು ಬಹುದೊಡ್ಡ ಅಧ್ಯಯನ ಸಾಮಗ್ರಿಯೂ ನಮಗೆ ದೊರೆಯಲಿದೆ. ಉದಾಹರಣೆಗೆ ಹಿಂದೂ ಧರ್ಮ ಮುಖ್ಯ ಭೂಮಿಕೆಯ ಕಥಾ ವಸ್ತುಗಳಾದ ಮಹಾಭಾರತ, ರಾಮಾಯಣ, ವೇದೋಪನಿಷದ್‌ನ ಮುಖ್ಯ ಸಂಗತಿಗಳನ್ನು ಆಯ್ದು ನಾಟಕಗಳಾದರೆ, ಜೈನ ಧರ್ಮದ ಯತಿಗಳ ಕುರಿತ ಅನೇಕ ನಾಟಕಗಳೂ ಸಹ ಕನ್ನಡದಲ್ಲಿ ಬಂದಿವೆ ಇನ್ನು ಬೌದ್ಧ ನಾಟಕಗಳ ರಚನೆಕಾರರ ಒಂದು ಪಡೆಯೇ ಕನ್ನಡದಲ್ಲಿದೆ ಉದಾಹರಣೆಗೆ ಪ್ರಭುಶಂಕರ, ನಟರಾಜ ಬೂದಾಳು, ಬುದ್ದಣ್ಣ ಹಿಂಗಮಿರೆ ಇತರರು. ಇಸ್ಲಾಂ ನಾಟಕ ಪಠ್ಯವೂ ನಮ್ಮಲ್ಲಿ ಬೆಳೆದು ಬಂದಿದ್ದು, ಗಿರೀಶ್ ಕಾರ್ನಾಡ, ಚಂದ್ರಶೇಖರ ಕಂಬಾರ, ಬೋಳುವಾರು ಮಹಮದ್ ಕುಂಯಿ ಅಲ್ಲದೆ ಕ್ರೈಸ್ತ ನಾಟಕಗಳ ಪ್ರಯೋಗಗಳು ಕೆಲವು ಕಡೆ ಪ್ರಯೋಗ ಕಂಡಿದ್ದು, ಈ ನಿಟ್ಟಿನಲ್ಲಿ ನಡೆಯುತ್ತಿರುವ ಪ್ರಯೋಗಗಳ ಕುರಿತು ಅರಿಯ ಬಹುದಾಗಿದೆ.

1. ಹಿಂದೂ ಧರ್ಮಾಧಾರಿತ ಪಠ್ಯ
2. ಜೈನ ಧರ್ಮಾಧಾರಿತ ಪಠ್ಯ
3. ಬೌದ್ಧ ಧರ್ಮಾಧಾರಿತ ಪಠ್ಯ
4. ಇಸ್ಲಾಂ ಧರ್ಮಾಧಾರಿತ ಪಠ್ಯ
5. ಕ್ರೈಸ್ತಾ ಧರ್ಮಾಧಾರಿತ ಪಠ್ಯ

ಹೀಗೆ ಸಾಹಿತ್ಯ ಅಧ್ಯಯನದ ಹೊಸ ಸಾಧ್ಯತೆಗಳನ್ನು ಈ ಮೇಲಿನಂತೆ ವಿಭಾಗ ಕ್ರಮ ಮಾಡಿಕೊಂಡು ಅಧ್ಯಯನ ಕೈಗೊಳ್ಳುವುದರಿಂದ ಅಧ್ಯಯನ ವಿಧಾನಗಳನ್ನು ಹಾಗೂ ಸಾಂಸ್ಕೃತಿಕ ಕ್ಷೇತ್ರದಿಂದ ಮರೆತು ಹೋಗಬಹುದಾದ ಅನೇಕ ಸಂಗತಿಗಳನ್ನು ಮುಂದಿನ ತಲೆಮಾರಿಗೆ ಕಟ್ಟಿಕೊಡಲು ಸಾಧ್ಯವಾಗಲಿದೆ ಎಂಬ ಹಂಬಲ ನನ್ನದು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಸಂಚಲನ ಮೂಡಿಸಿದ ಅನೇಕ ಪಾದ್ರಿಗಳು ಕ್ರೈಸ್ತ ನಾಟಕಗಳನ್ನು ಕನ್ನಡಕ್ಕೆ ಆರಂಭದಲ್ಲಿ ಅನುವಾದಿಸುವುದರ ಜೊತೆಗೆ ಕನ್ನಡ ನಾಟಕ ಪತ್ಯಕ್ಕೆ ದುರಂತ ನಾಟಕಗಳ ಪರಿಚಯವನ್ನು ಮಾಡಿದ ಒಂದು ಉದಾಹರಣೆಯನ್ನು ಮಾತ್ರ ಇಲ್ಲಿ ಉದಾಹರಿಸಿದರೆ ಸಾಕಾದೀತು ಅಲ್ಲದೆ ಕನ್ನಡ ನೆಲದ ಅನೇಕ ಕಡೆ ಕ್ರೈಸ್ ನಾಟಕಗಳ ಒಂದಷ್ಟು ಪ್ರಯೋಗಗಳು ಅಲ್ಲಲ್ಲಿ ನಡೆಯುತ್ತಿರುವುದನ್ನು ಉದಾಹರಣೆಗಳನ್ನು ಕಾಣಬಹುದು.

ಹೀಗೆ ಈ ವರೆಗೆ ನಡೆದು ಬಂದ ಒಟ್ಟು ನಾಟಕದ ವಸ್ತು ಅಥವಾ ರಂಗ ಪತ್ಯದ ಚರಿತ್ರೆ ಮತ್ತು ಮಿಮಾಂಸೆಯನ್ನು ಹೊಸ ಬಗೆಯಲ್ಲಿ ಅರಿತುಕೊಳ್ಳುವ ಮೂಲಕ ಸಾಹಿತ್ಯದ ಹೊಸ ಸಾಧ್ಯತೆಯನ್ನು ಹುಟ್ಟು ಹಾಕಿಕೊಂಡು ಕನ್ನಡ ಸಾಹಿತ್ಯ ಮತ್ತು ಸಾಂಸ್ಕೃತಿಕ ಕ್ಷೇತ್ರವನ್ನು ವಿಸ್ತರಿಸಿಕೊಳ್ಳಬಹುದಾಗಿದೆ.

**ಪರಾಮರ್ಶನ ಗ್ರಂಥಗಳು**


- ಗಿರಡ್ಡಿ ಗೋವಿಂದರಾಜ. *ಕನ್ನಡ ನಾಟಕ ಮತ್ತು ರಂಗಭೂಮಿ.*
- ಮುಗಳಿ ರಂ.ಶ್ರೀ. (2014). *ಕನ್ನಡ ಸಾಹಿತ್ಯ ಚರಿತ್ರೆ.* ಗೀತಾ ಬುಕ್‌ಹೌಸ್.
- ರಾಮ್‌ನಾಥ್, ಎಚ್.ಕೆ. (1990). *ಕನ್ನಡ ರಂಗಭೂಮಿ ವಿಕಾಸ.* ಸದ್ಗುರು ಪ್ರಿಂಟರ್ಸ್.
- ಶ್ರೀಕಂಠಯ್ಯ, ತೀ.ನಂ. (1953). *ಭಾರತೀಯ ಕಾವ್ಯ ಮಿಮಾಂಸೆ.* ಮೈಸೂರು ವಿಶ್ವವಿದ್ಯಾನಿಲಯ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 83-88
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಐತಿಹಾಸಿಕ ವ್ಯಕ್ತಿಯಾಗಿ ಮಲೆಯ ಮಾದೇಶ್ವರ

**ಉಷಾ ಎನ್[1] ಮತ್ತು ಡಾ. ಕೆ. ಸೌಭಾಗ್ಯವತಿ[2]**

[1]ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಭಾಗ, ಯುವರಾಜ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು
[2] ಪ್ರಾಧ್ಯಾಪಕರು, ಕನ್ನಡ ವಿಭಾಗ, ವಿಶ್ವವಿದ್ಯಾನಿಲಯ ಸಂಜೆ ಕಾಲೇಜು, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

***Abstract:***

*ಆಧುನಿಕ ನಾಗರಿಕತೆಯ ಪರಿಚಯವಿಲ್ಲದ ಜನರು ಅನಕ್ಷರಸ್ಥರೇ ಹೊರತು ಅಜ್ಞಾನಿಗಳಲ್ಲ. ಮನುಷ್ಯ ಜಗತ್ತಿನ ಜ್ಞಾನಭಂಡಾರದಲ್ಲಿ ಅಕ್ಷರ ರೂಪದ ವಿದ್ಯೆ ಇತ್ತೀಚಿನದಾಗಿದೆ. ಸಾವಿರಾರು ವರ್ಷಗಳ ಹಿಂದಿನಿಂದ ಮೌಖಿಕ ಪರಂಪರೆಯಲ್ಲಿ ಹರಿದು ಬಂದಿರುವ ಜ್ಞಾನವನ್ನು ಕೆಲವು ವಿದ್ವಾಂಸರು ಅಕ್ಷರ ರೂಪದಲ್ಲಿ ಹಿಡಿದಿಡುವ ಪ್ರಯತ್ನವನ್ನು ಆರಂಭಿಸಿದರು. ಈ ಪ್ರಯತ್ನದ ಫಲವೇ ನಾವಿಂದು ನೋಡುತ್ತಿರುವ ಕೋಟ್ಯಂತರ ಗ್ರಂಥ ರಾಶಿಗಳಾಗಿವೆ. ಜಗತ್ತಿನಾದ್ಯಂತ ಇಂಥದೊಂದು ಪ್ರಯತ್ನ ಆರಂಭವಾದ ಕಾರಣದಿಂದಲೇ ಎಲೆಮರೆ ಕಾಯಿಯಂತೆ, ಕಂಡೂ ಕಾಣದಂತೆ ಅಡಗಿದ್ದ ಎಷ್ಟೋ ಮಹಾಕಾವ್ಯಗಳು ಗ್ರಂಥರೂಪವನ್ನು ಪಡೆದುಕೊಳ್ಳಲು ಸಾಧ್ಯವಾಯಿತು. ಹೀಗೆ ಜಾನಪದ ಸಾಹಿತ್ಯದ ಸೃಷ್ಟಿ ಆರಂಭವಾಯಿತು.*

***Keywords:*** *ಮೌಖಿಕ ಪರಂಪರೆ, ಜನಪದ ಮಹಾಕಾವ್ಯ, ಮಲೆ ಮಾದೇಶ್ವರ ಕಾವ್ಯ.*

## ಪೀಠಿಕೆ

ಜನಪದ ಸಾಹಿತ್ಯದಲ್ಲಿ ಜನಪದ ಕಲೆ, ಜನಪದ ನೃತ್ಯ, ಜನಪದ ವೈದ್ಯ, ಜನಪದ ಉಡುಗೆ, ಜನಪದ ಸಂಗೀತ ಹೀಗೆ ಜನಪದರ ಜೀವನಕ್ಕೆ ಸಂಬಂಧಿಸಿದ ಎಲ್ಲ ಅಂಶಗಳೂ ಸಹ ಮಿಳಿತಗೊಂಡವು. ಜನಪದ ಸಂಸ್ಕೃತಿಯು ಎಷ್ಟರ ಮಟ್ಟಿಗೆ ಸಮೃದ್ಧವಾಗಿದೆಯೋ ಅಷ್ಟೇ ಸಮೃದ್ಧವಾಗಿ ಜನಪದ ಸಾಹಿತ್ಯ ರಚನೆಯು ಕೂಡ ಬೆಳೆಯಿತು. 'ಜನಪದ ಸಾಹಿತ್ಯ ಎನ್ನುವುದು ವಾಙ್ಮಯ ರೂಪದ ಜಾನಪದ' ಎಂದು ಹೇಳಿದ ಹಾ.ಮಾ. ನಾಯಕರು ಜಾನಪದವನ್ನು ಸಾಹಿತ್ಯಿಕ ಬಗೆ, ಭಾಷಿಕ ಬಗೆ, ವೈಜ್ಞಾನಿಕ ಬಗೆ ಹಾಗೂ ಕ್ರಿಯಾತ್ಮಕ ಬಗೆ ಎಂದು ವಿಂಗಡಿಸಿದ್ದಾರೆ. ಈ ನಾಲ್ಕರ ಸಮಷ್ಟಿ ಸಂಪ್ರದಾಯವನ್ನೇ ನಾವು ಜಾನಪದವೆಂದು ಕರೆಯುವುದು ಎಂಬುದನ್ನು ಖಚಿತಪಡಿಸಿದ್ದಾರೆ. ವಿದ್ಯಾವಂತ ಸಮಾಜದಲ್ಲೂ ಸಹ ಜಾನಪದ ಅಂಶಗಳು ಇರಬಹುದಾದರೂ, ನಾಗರಿಕತೆಯ ಪ್ರಭಾವಕ್ಕೆ ಒಳಗಾಗದಿರುವ ಗ್ರಾಮೀಣ ಪ್ರದೇಶಗಳಲ್ಲಿ ಮಾತ್ರ ಅದು ಶುದ್ಧವಾಗುಳಿದು ಬಂದಿದೆ. ಕಥೆ, ಕಾವ್ಯ, ಮಹಾಕಾವ್ಯ, ಲಾವಣಿ, ಒಗಟು, ಗಾದೆ, ನಂಬಿಕೆ, ಹಬ್ಬ-ಹುಣ್ಣಿಮೆ, ಪುರಾಣ ಇವುಗಳನ್ನೆಲ್ಲ ಒಳಗೊಂಡಿರುವ ಜಾನಪದದ ಅಧ್ಯಯನ ಪಾಶ್ಚಾತ್ಯ ರಾಷ್ಟ್ರಗಳಿಗೆ ಹೊಸದಲ್ಲವಾದರೂ ನಮಗೆ ಇದು ಬಹಳ ಇತ್ತೀಚಿನದು. ನಮ್ಮ ಜಾನಪದ ಸಂಸ್ಕೃತಿ ನಮಗೆ

***Please cite this article as:*** ಉಷಾ. ಎನ್ ಮತ್ತು ಕೆ. ಸೌಭಾಗ್ಯವತಿ. (2024). ಐತಿಹಾಸಿಕ ವ್ಯಕ್ತಿಯಾಗಿ ಮಲೆಯ ಮಾದೇಶ್ವರ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್*, 3(3), 83–88

ಹೊಸದಲ್ಲ; ಆದರೆ ಅದನ್ನು ಅಧ್ಯಯನಕ್ಕೆ ಒಳಪಡಿಸುವ ನಮ್ಮ ರೂಢಿ ಮಾತ್ರ ಇತ್ತೀಚಿನದಾಗಿದೆ.

ಹಲವು ಭಾಷೆ, ಸಾಹಿತ್ಯ ಮತ್ತು ಸಂಸ್ಕೃತಿಗಳಿಂದ ಶ್ರೀಮಂತವಾಗಿರುವ ನಮ್ಮ ದೇಶದಲ್ಲಿ ಜನಪದ ಸಂಸ್ಕೃತಿಯೂ ಸಹ ಅಷ್ಟೇ ಶ್ರೀಮಂತವಾಗಿದೆ. ಮೌಖಿಕ ಧಾರೆಯಾಗಿ ಹರಿಯುತ್ತಿದ್ದ ಜಾನಪದ ಕಾವ್ಯಗಳನ್ನು ಲಿಖಿತ ರೂಪದಲ್ಲಿ ದಾಖಲಿಸುವ ಪ್ರಯತ್ನವನ್ನು ಎಲ್ಲಾ ಭಾಷೆಯ ವಿದ್ವಾಂಸರೂ ಆರಂಭಿಸಿದ್ದಾರೆ. ಕನ್ನಡದ ಮಟ್ಟಿಗೂ ಈ ಪ್ರಯತ್ನ ಪ್ರಾರಂಭವಾಗಿ ಹಲವು ದಶಕಗಳೇ ಕಳೆದಿವೆ. ರಾಗೌ, ಹಾ.ಮಾ.ನಾಯಕರು, ಜೀ.ಶಂ.ಪ ಹೀಗೆ ಹಲವು ವಿದ್ವಾಂಸರ ಹೆಸರುಗಳು ಜಾನಪದ ಕ್ಷೇತ್ರದಲ್ಲಿ ಸದಾ ಅನುರಣಿಸುತ್ತಿರುತ್ತದೆ. ಹಾಗೆಯೇ ನಮ್ಮ ಕನ್ನಡ ಜಾನಪದ ಕ್ಷೇತ್ರದಲ್ಲಿ ಸದಾಕಾಲಕ್ಕೂ ನೆನಪಿಡಲೇಬೇಕಾದ ಮತ್ತೊಂದು ಹೆಸರು ಪಿ.ಕೆ.ರಾಜಶೇಖರ ಅವರದ್ದು. ವಿಶ್ವವಿದ್ಯಾನಿಲಯದಂಥ ದೊಡ್ಡ ಸಂಸ್ಥೆಯೊಂದು ಹಲವು ಯೋಜನೆಗಳನ್ನು ಹಾಕಿಕೊಂಡು ಮಾಡಬಹುದಾದಷ್ಟು ಕಾರ್ಯಗಳನ್ನು ಅವರು ವೈಯಕ್ತಿಕ ನೆಲೆಯಲ್ಲಿ ಶಿಸ್ತುಬದ್ಧವಾಗಿ ಶ್ರೇಷ್ಠ ಮಾದರಿಯಲ್ಲಿ ಮಾಡಿರುವುದು ಗಮನಾರ್ಹವಾಗಿದೆ. ನಿವೃತ್ತಿಯ ನಂತರವೂ ಅವರು ತಾವು ಈ ಹಿಂದೆ ಸಂಗ್ರಹಿಸಿದ ಜನಪದ ಸಾಹಿತ್ಯದ ಸಂಪಾದನೆ ಮತ್ತು ಪ್ರಕಟಣಾ ಕಾರ್ಯದಲ್ಲಿ ಅತೀವವಾದ ಆಸಕ್ತಿಯನ್ನು ತೋರಿದರು. ಪಿ.ಕೆ.ರಾಜಶೇಖರ ಅವರು ಸಂಪಾದಿಸಿರುವ ಜನಪದ ಮಹಾಕಾವ್ಯಗಳಲ್ಲಿ 'ಮಲೆಯ ಮಾದೇಶ್ವರ' ಮೊದಲ ಮಹಾಕಾವ್ಯವಾಗಿದೆ. ಈ ಕಾವ್ಯದ ಸಂಗ್ರಹ, ಸಂಪಾದನೆಯಲ್ಲಿ ಅವರು ವಹಿಸಿದ ಆಸಕ್ತಿ, ತಾಳ್ಮೆ, ಶ್ರದ್ಧೆ, ಪ್ರಾಮಾಣಿಕತೆ ಎಲ್ಲದರ ಫಲವಾಗಿ ಇಂದು ನಮ್ಮ ಮುಂದೆ 'ಮಲೆಯ ಮಾದೇಶ್ವರ' ಮಹಾಕಾವ್ಯವು ಬೃಹತ್ ಗಾತ್ರದ ಗ್ರಂಥವಾಗಿ ಮೈದಳೆದು ನಿಂತಿದೆ.

ಮಲೆಯ ಮಾದೇಶ್ವರನ ಇತಿಹಾಸವನ್ನು ಗಮನಿಸುವುದಾದರೆ, ಮಾದೇಶ್ವರನು ಐತಿಹಾಸಿಕ ವ್ಯಕ್ತಿ ಎಂಬುದು ನಿರ್ವಿವಾದವಾದರೂ ಅವನ ಕಾಲದ ಬಗ್ಗೆ ಖಚಿತವಾಗಿ ಹೇಳುವಷ್ಟು ದಾಖಲೆಗಳು ಲಭ್ಯವಾಗಿಲ್ಲ. ಮಾದೇಶ್ವರನು ಸುತ್ತೂರು ಮಠಕ್ಕೆ ಬಂದಿದ್ದನೆಂಬ ಹೇಳಿಕೆಗಿಂತಲೂ ಖಚಿತವಾಗಿ ಕುಂತೂರು ಮಠಕ್ಕೆ ಬಂದಿದ್ದನೆಂಬುದು ಹೈದರಾಲಿ ಶಾಸನ ಹಾಗೂ ಜನಪದ ಸಾಹಿತ್ಯದಿಂದ ತಿಳಿದುಬರುವುದರಿಂದ ಮತ್ತು ಕುಂತೂರು ಮಠದ ಪ್ರಾಚೀನತೆ ಕ್ರಿ.ಶ.1512 ಎಂದು ಕುಂತೂರು ಶಾಸನದಿಂದ ತಿಳಿದುಬರುವುದರಿಂದ ಮಾದೇಶ್ವರನ ಕಾಲ ನಿರ್ವಿವಾದವಾಗಿ 16ನೇ ಶತಮಾನವೆಂದು ಒಪ್ಪಬೇಕಾಗುತ್ತದೆ.

ಮಂಟೇಸ್ವಾಮಿ ಮತ್ತು ಮಾದೇಶ್ವರರು ಉತ್ತರ ದೇಶದಿಂದ ದಕ್ಷಿಣಕ್ಕೆ ಬಂದವರೆಂದು ಜನಪದ ಸಾಹಿತ್ಯ ಸಾರಿ ಹೇಳುತ್ತದೆ.ಆದರೆ ಅವರಿಬ್ಬರೂ ಒಟ್ಟಿಗೆ ಬಂದರೆಂಬುದಕ್ಕೆ ಮಾದೇಶ್ವರ ಮಹಾಕಾವ್ಯದಲ್ಲಿ ಆಧಾರವಿದ್ದರೂ ಮಂಟೇಸ್ವಾಮಿ ಮಹಾಕಾವ್ಯದಲ್ಲಿ ಎಲ್ಲೂ ಇದರ ಪ್ರಸ್ತಾಪವಿಲ್ಲ. ಮಂಟೇಸ್ವಾಮಿ ಹರಿಜನರಲ್ಲಿ ಬಲಗೈ ಪಂಗಡಕ್ಕೆ ಸೇರಿದವನೆಂದು, ಮಾದೇಶ್ವರನು ಎಡಗೈ ಪಂಗಡಕ್ಕೆ ಸೇರಿದವನೆಂದು ಜನಪದ ಸಾಹಿತ್ಯದಿಂದ ತಿಳಿದುಬರುತ್ತದೆ.ಇದನ್ನು ಕ್ರಿ.ಶ.1838ರಲ್ಲಿದ್ದ ದೇವಚಂದ್ರನ 'ರಾಜಾವಳಿ ಕಥೆ'ಯೂ ಸಮರ್ಥಿಸುತ್ತದೆ.

ರಾಜಾವಳಿ ಕಥೆಯ ಕರ್ತೃ ದೇವಚಂದ್ರನು ಅವನ ಕಾಲದ ಹಿರಿಯರಲ್ಲಿ ವಿಷಯವನ್ನು ಸಂಗ್ರಹಿಸಿ ಮಾದೇಶ್ವರನ ಬಗೆಗೆ ಬರೆದಿರಬಹುದಾದರೂ ಅವನ ಎಲ್ಲ ಹೇಳಿಕೆಗಳು ಒಪ್ಪುವಂತಿಲ್ಲ. ಮಾದೇಶ್ವರ ಮಾದಿಗರವನೆಂಬುದಕ್ಕೆ ಜನಪದ ಸಾಹಿತ್ಯದಲ್ಲೂ ಆಧಾರವಿರುವುದರಿಂದ ಈ ವಿಷಯವನ್ನು ಒಪ್ಪಬಹುದಾಗಿದೆ. ಕೆಲವು ಜನಪದ ವಕ್ತೃಗಳ ಪ್ರಕಾರ ಮೈಸೂರಿನ ಚಾಮುಂಡಿ ಮಾದೇಶ್ವರನ ತಂಗಿ; ಮತ್ತೆ ಕೆಲವರ ಹೇಳಿಕೆಯಲ್ಲಿ ಮಡದಿ.ಇದು ಏನಾದರೂ ಆಗಿರಲಿ ಮಾದೇಶ್ವರನಿಗೂ ಚಾಮುಂಡಿಗೂ ಒಂದಲ್ಲ

ಒಂದು ಬಗೆಯ ಸಂಬಂಧ ಇತ್ತೆಂದು ಸ್ಪಷ್ಟವಾಗುತ್ತದೆ. ಇನ್ನು ನಂಜನಗೂಡಿನ ನಂಜುಂಡ, ಮಾದೇಶ್ವರ ಮತ್ತು ಚಾಮುಂಡಿಯರ ಪ್ರಣಯ ಪ್ರಸಂಗವಂತೂ ಸುಪ್ರಸಿದ್ಧ ಕಥಾನಕ. ಇದರಿಂದಾಗಿ ನಂಜುಂಡ, ಮಾದೇಶ್ವರ ಮತ್ತು ಚಾಮುಂಡಿ ಇವರಿಗೆ ಪರಸ್ಪರ ಸಂಬಂಧವಿತ್ತೆಂದು ಖಚಿತವಾಗುತ್ತದೆ. ನಂಜುಂಡ–ಚಾಮುಂಡಿಯರ ಪ್ರಣಯ ಪ್ರಸಂಗದಿಂದ ಮಾದೇಶ್ವ ಬೇಸರಗೊಂಡು 'ಇವಳ ಮುಖದರ್ಶನ ನನಗೆ ಕೂಡದು' ಎಂದು ಹೋಗಿ ಏಳುಮಲೆಯ ನಡುವೆ ನೆಲೆಗೊಂಡನೆ ಎಂಬ ಅನುಮಾನಕ್ಕೆ ಜನಪದ ಸಾಹಿತ್ಯದಲ್ಲೂ ಆಧಾರಗಳಿರುವುದರಿಂದ ಇವರೆಲ್ಲರೂ ಐತಿಹಾಸಿಕ ವ್ಯಕ್ತಿಗಳಾಗಿದ್ದು ಕಾಲನಂತರ ಪೂಜಾರ್ಹರಾದರೆಂದು ಹೇಳಬಹುದಾಗಿದೆ.

ದೇವಚಂದ್ರನು ತನ್ನ ದಾಖಲೆಗಳ ಸರಣಿಯಲ್ಲಿ ಮಾದೇಶ್ವರನ ವಿಷಯವನ್ನು ವಿಜಯನಗರ ಸಾಮ್ರಾಜ್ಯ ಕ್ಷೀಣಿಸುತ್ತಿದ್ದ ಕಾಲಕ್ಕೆ ಸೇರಿಸಿದ್ದಾನೆ. ಬಹುಶಃ ಅವನ ದೃಷ್ಟಿಯಲ್ಲಿ ಮಾದೇಶ್ವರನ ಕಾಲ 15–16ನೇ ಶತಮಾನವೇ ಆಗಿರಬೇಕು. ಆ ಕಾಲಕ್ಕೆ ದಕ್ಷಿಣಭಾರತದ ಉದ್ದಗಲಕ್ಕೆಲ್ಲ ಮುಸ್ಲಿಮರು ಹರಡಿಕೊಂಡಿದ್ದರೆಂಬ ಸತ್ಯಕ್ಕೆ ಮಾದೇಶ್ವರ ಮಹಾಕಾವ್ಯದ ನೂರೊಂದಯ್ಯನ ಕವಟ್ಲಿನ ಫೀರ್‌ಖಾನ್ ಸಾಬಿ ಪ್ರಸಂಗವೂ ಸಾಕ್ಷಿಯಾಗಿದೆ. ಹೀಗೆ ಮಾದೇಶ್ವರ ಪರಂಪರೆಯನ್ನು ಶಿಷ್ಟ ಹಾಗೂ ಜನಪದ ಸಾಹಿತ್ಯಗಳೆರಡರಲ್ಲೂ ಕಾಣಬಹುದಾಗಿದೆ. 1750ರಲ್ಲಿ ಮಿಣ್ಯದ ಗುರುಸಿದ್ದ ಕವಿ ಬರೆದ 'ಮಾದೇಶ್ವರ ಸಾಂಗತ್ಯ' ಮೊದಲ ಶಿಷ್ಟ ಕಾವ್ಯವಾಗಿದೆ. ಇದರಲ್ಲಿ ಮಾದೇಶ್ವರ ಕ್ಷೇತ್ರದ ಬಣ್ಣನೆ, ಮಾದೇಶ್ವರರು ಲಿಂಗವಾದುದು, ಜಾತ್ರೆಯ ವರ್ಣನೆಗಳನ್ನು ಒಳಗೊಂಡ ಮೂರು ಸಂಧಿಗಳಿವೆ. ಮೊದಲೇ ತಿಳಿಸಿದಂತೆ ಜೈನಕವಿ ದೇವಚಂದ್ರನು ಬರೆದ 'ರಾಜಾವಳಿ ಕಥೆ'ಯು ಎರಡನೆಯದು. ಜನಪದ ಕಥೆಗಳ ಆಧಾರದ ಮೇಲೆ ಮಾದೇಶ್ವರನನ್ನು ದೇವನಾಗಿ ಚಿತ್ರಿಸಿದ್ದಾನೆ. ಮೂರನೆಯ ಕೃತಿ 1929ರಲ್ಲಿ ಫ.ಗು.ಹಳಕಟ್ಟಿಯವರು ಸಂಪಾದಿಸಿ ಪ್ರಕಟಿಸಿದ 'ನಿರಂಜನ ವಂಶರತ್ನಾಕರ' ಇದನ್ನು ಬರೆದು ಕವಿ ಯಾರೆಂಬುದರ ಬಗ್ಗೆ ಸ್ಪಷ್ಟ ಮಾಹಿತಿ ಲಭ್ಯವಾಗಿಲ್ಲ. ಇದು ಮಾದೇಶ್ವರನ ಮಹಿಮೆಯನ್ನೆ ಬಣ್ಣಿಸುವ ಕಾವ್ಯವಲ್ಲ. ಬದಲಿಗೆ ಇದರಲ್ಲಿ ವೀರಶೈವ ಪರಂಪರೆಯ ಗುರು ಚರಿತ್ರೆ ಹೇಳಿಕೊಂಡು ಬರುವಾಗ ಅನೇಕ ಅಂಶಗಳನ್ನು ಬಹಳ ನಿಷ್ಠುರವಾಗಿ ಹೇಳುತ್ತಾ ಬಂದಿದ್ದಾರೆ. ಮತ್ತೊಂದು ಕೃತಿ 1933ರಲ್ಲಿ ಕುಂತೂರು ಸಿ.ಸಂಗಪ್ಪಶಾಸ್ತ್ರೀಗಳು ರಚಿಸಿರುವ 'ಶ್ರೀ ಸುತ್ತೂರು ಸಿಂಹಾಸನದ ಗುರುಪರಂಪರೆ' ಇದರಲ್ಲಿ ಮಾದೇಶ್ವರ ಚರಿತ್ರೆಗೆ ಸಂಬಂಧಿಸಿದ ಕೆಲವು ಸಂಗತಿಗಳು ಲಭ್ಯವಾಗಿವೆ.

ಈ ಎಲ್ಲ ಆಧಾರಗಳಿಂದ ಮಾದೇಶ್ವರನ ಕಾಲ ಹಾಗೂ ಜಾತಿಗಳಿಗೆ ಸಂಬಂಧಿಸಿದ ವಿಷಯಗಳೂ ಸ್ಪಷ್ಟವಾಗುತ್ತವೆ. ಮಾದೇಶ್ವರನ ತಂದೆ ತಾಯಿಗಳ ಬಗ್ಗೆ ಜನಪದ ಸಾಹಿತ್ಯವು ಉತ್ತರದೇಶದ ಉತ್ತಮಪುರದ ಕಾಳೆಕಲ್ಯಾಣದೇವರು ಮತ್ತು ಉತ್ತರೋಜಮ್ಮ ಎಂದು ಹೇಳುತ್ತದೆ. ಆದರೆ ಕುಂತೂರಿನ ಸಿದ್ದಪ್ಪಶಾಸ್ತ್ರೀಗಳ 'ಮಲೆಮಾದೇಶ್ವರ ನಿಜಪುರಾಣ'ದಲ್ಲಿ ಚುಂಚ ದಂಪತಿಗಳೆಂದು ಹೇಳಲಾಗಿದೆ. ಮಾದೇಶ್ವರನ ಬಗೆಗೆ ನಾವು ತಿಳಿಯಬೇಕಾದರೆ ಜನಪದ ಸಾಹಿತ್ಯವನ್ನೇ ಅವಲಂಬಿಸಬೇಕಾಗುತ್ತದೆ. ಮಾದೇಶ್ವರ ಕಾವ್ಯವು ವಂಶಪಾರಂಪರ್ಯವಾಗಿ ಬಂದ ಮೌಖಿಕ ಸಾಹಿತ್ಯ.ಇದು ಕಾಲಕಾಲಕ್ಕೆ ಸಾಕಷ್ಟು ಬದಲಾವಣೆಗಳನ್ನು ಕಂಡಿರುವುದು ಸಹಜವೇ ಆಗಿದೆ.ಇದರ ಮೂಲ ಕರ್ತೃ ಯಾರೆಂಬುದನ್ನು ಹುಡುಕುವುದು ನಿಜಕ್ಕೂ ಕಷ್ಟದ ಸಂಗತಿಯೇ ಆಗಿದೆ.ಆದರೆ ಈ ಕಾವ್ಯ ಅನೇಕ ಜನಪದರ ಸೃಷ್ಟಿ ಎಂದರೆ ಬಹುಶಃ ಸಮಂಜಸವಾದೀತು. ಮಾದೇಶ್ವರ ಪರಂಪರೆಯ 'ಕಂಸಾಳೆಗುಡ್ಡರು' ಇದನ್ನು ಹಾಡಿಕೊಂಡು ಬಂದಿದ್ದಾರೆ. ಬ್ರಾಹ್ಮಣರನ್ನು ಬಿಟ್ಟು ಒಕ್ಕಲಿಗರು, ಕುರುಬರು, ಹರಿಜನರು, ಉಪ್ಪಲಿಗರು ಮೊದಲಾದವರಲ್ಲಿ ಈ ವೃತ್ತಿಗಾಯಕರನ್ನು ಕಾಣಬಹುದಾಗಿದೆ. ಹೆಂಗಸರು ಬಿಡಿ ಪದ್ಯಗಳನ್ನು

ಮಾತ್ರ ಹಾಡುತ್ತಾರೆಯೇ ಹೊರತು ಇಡೀ ಮಹಾಕಾವ್ಯವನ್ನು ಹಾಡುವುದಿಲ್ಲ.

ಕಂಸಾಳೆಯವರು ಮಾದೇಶ್ವರನ ಕಥೆಯನ್ನು ಏಳುರಾತ್ರಿ ವ್ಯಾಪ್ತಿಯಲ್ಲಿ ಏಳು ಸಾಲುಗಳಲ್ಲಿ ತಾಳುಗಥೆ, ಶ್ರವಣ, ಬೇವಿನಕಾಳಿ, ಆಲಂಬಾಡಿ ಜುಂಜೇಗೌಡ, ಸರಗೂರಯ್ಯ, ಇಕ್ಕೇರಿ ದೇವಮ್ಮ ಹಾಗೂ ಸಂಕಮ್ಮನ ಕಥೆಗಳನ್ನು ಹಾಡುತ್ತಾರೆ. ಮಾದೇಶ್ವರ ಕಾವ್ಯದ ಕಥಾತಂತ್ರ ಕೆಲವೊಮ್ಮೆ ಕುತೂಹಲ, ಮತ್ತೆ ಕೆಲವೊಮ್ಮೆ ಆಸಕ್ತಿ ಕೆರಳಿಸುವುದು. ಹುಟ್ಟಿ ಬೆಳೆದ ಸಾಲಿನಿಂದ ಐಕ್ಯವಾಗುವವರೆಗೆ ಹೇಳುವ ತಂತ್ರ ಒಂದು ಬಗೆಯಾದರೆ, ಐಕ್ಯವಾದ ಕ್ಷೇತ್ರದಿಂದ ಹತ್ತು ದಿಕ್ಕು, ಹತ್ತು ಪ್ರದೇಶಗಳಲ್ಲಿ ಹೇಗೆ ಮೆರೆದು ಮಹಿಮಾನ್ವಿತರಾದರು ಎಂಬುದು ಮತ್ತೊಂದು ವಿಧಾನ.

ಮಾದೇಶ್ವರನು ತನ್ನ ಮಹಿಮೆ ಮತ್ತು ಪವಾಡಗಳ ಹಿರಿಮೆಯಿಂದ ಜನರನ್ನು ತನ್ನೆಡೆಗೆ ಸೆಳೆದುಕೊಂಡು ಅವನು ಈಶ್ವರನೆನಿಸಿಕೊಂಡ ಮೇಲೆ ಎಲ್ಲಾ ಮಠಗಳೂ ಮಾದೇಶ್ವರ ನಮ್ಮವನು ತಮ್ಮವನು ಎಂದು ಕೊಂಡಾಡಿದಂತೆ ಕಾಣುತ್ತದೆ.ಆದರೆ ಮಾದೇಶ್ವರ ಸುತ್ತೂರು, ಕುಂತೂರು, ಬದನವಾಳು ಇತ್ಯಾದಿ ಮಠಗಳಿಗೆ ಬಂದಾಗ, ಆ ಮಠಗಳು ಅವನ ಹಿರಿಮೆಯನ್ನು ಗುರುತಿಸದೆ ಅವನನ್ನು ತಿರಸ್ಕರಿಸಿದರು. ಹಾಗಾಗಿ ಆತ ಏಳುಮಲೆಗೆ ಹೋಗಿ ನೆಲೆಗೊಳ್ಳಬೇಕಾಯಿತು. ಇನ್ನು ಮಾದೇಶ್ವರನಿಗೆ ಮಾರ್ಗದರ್ಶಕರಾದರೆಂದು ತಿಳಿದುಬರುವ ಪ್ರಭುಸ್ವಾಮಿಗಳು ಕುಂತೂರಿನ ಸಮೀಪದಲ್ಲಿರುವ ಪ್ರಭುಸ್ವಾಮಿ ಬೆಟ್ಟದಲ್ಲಿದ್ದರೆಂದೂ ಇವರು ಕುಂತೂರು ಮಠಾಧೀಶರೆಂದೂ ಜನಪದ ಸಾಹಿತ್ಯ ಮಾಹಿತಿಯನ್ನು ಒದಗಿಸುತ್ತದೆ.

ಮಾದೇಶ್ವರನು ಯಾವುದೇ ಸ್ಥಾಪಿತ ಧರ್ಮ, ವ್ಯವಸ್ಥೆ, ಕಟ್ಟುಪಾಡುಗಳ ಹಂಗಿನಲ್ಲಿ ನಾನಿರಬಾರದು.ತನ್ನದೇ ಆದ ನೆಲೆಯನ್ನು ತಾನು ಕಂಡುಕೊಳ್ಳಬೇಕು ಎಂದು ನಿರ್ಧರಿಸಿ ಸೂಕ್ತ ನೆಲೆಯನ್ನು ಹುಡುಕುತ್ತಾ ಏಳುಮಲೆ ಪ್ರದೇಶಕ್ಕೆ ಬಂದನು. ಎಲ್ಲಾ ಬಗೆಯ ಧಾರ್ಮಿಕ, ಸಾಮಾಜಿಕ ಪ್ರಭಾವಗಳಿಂದ ಮುಕ್ತವಾಗಿದ್ದ ಏಳುಮಲೆ ಪ್ರದೇಶ ಆತನಿಗೆ ಸೂಕ್ತವಾಗಿ ಕಂಡಿತು. ಅಲ್ಲಿಗೆ ಬಂದ ತರುವಾಯ ತನ್ನದೇ ಸಂಪ್ರದಾಯ ಮತ್ತು ಶಿಷ್ಯವರ್ಗವನ್ನು ಆತ ನಿರ್ಮಿಸಿಕೊಳ್ಳಬೇಕಾಯಿತು. ಆದರೆ ಆತನ ದಾರಿ ಅಷ್ಟು ಸುಲಭವಾಗಿರಲಿಲ್ಲ. ಆತನ ಮಾತುಗಳನ್ನು ಯಾರು ಕೇಳುತ್ತಿರಲಿಲ್ಲ. ಇವನೊಬ್ಬ ಅನಾಮಧೇಯ ಜಂಗಮ, ಕಾಡುದೇವರು ಎಂದೆಲ್ಲಾ ಹೀಯಾಳಿಸುತ್ತಾರೆ. ನನಗೆ ಗುಡಿ ಕಟ್ಟಿಸಿಕೊಂಡು ಎಂದು ಕೇಳಿದಾಗ 'ಕಾಡು ಪರದೇಸಿ, ನಿನ್ಗೆ ಕಲ್ಲುಗುಡಿ ಕಟ್ಸೋ ತೀಟೆ ನನಗಿಲ್ಲ' ಎಂದು ಆಲಂಬಾಡಿಯ ಜುಂಜೇಗೌಡ ತಿರಸ್ಕಾರದಿಂದ ನುಡಿಯುತ್ತಾನೆ. ಬೇವಿನಹಟ್ಟಿ ಕಾಳಮ್ಮ ಮಾದೇಶ್ವರನ ಎಣ್ಣೆಮಜ್ಜನಕ್ಕೆ ಒಂದು ಹಿಡಿ ಎಳ್ಳು ಕೊಡಲು ಒಪ್ಪುವುದಿಲ್ಲ. ಹೀಗಾಗಿ ಹೆಜ್ಜೆ ಹಜ್ಜೆಗೂ ತನ್ನ ಸಾಮರ್ಥ್ಯವೇನೆಂಬುದನ್ನು ಸಿದ್ಧಪಡಿಸುವುದು ಮಾದೇಶ್ವರನಿಗೆ ಅನಿವಾರ್ಯವಾಯಿತು. ಮಾದೇಶ್ವರನ ಕಾವ್ಯದಲ್ಲಿ ಬೇಡ ಸಂಸ್ಕೃತಿಯ ದಟ್ಟವಾದ ಪ್ರಭಾವವನ್ನು ಗುರುತಿಸಬಹುದು. ಹೀಗೆ ಮಾದೇಶ್ವರನ ಭಕ್ತರಾಗಿ ಪರಿವರ್ತಿತರಾದ ಬೇಡರಿಗೆ ತಮ್ಮ ದೇವರ ಸಾಮರ್ಥ್ಯ, ಮಹಿಮೆ, ವೈಶಿಷ್ಟ್ಯಗಳನ್ನು ಹೆಚ್ಚುಗಾರಿಕೆಯಿಂದ ಹೇಳುವ ಮೂಲಕ ತಮ್ಮ ದೇವರನ್ನು ಸಮರ್ಥಿಸಿಕೊಳ್ಳುವುದೂ ಸಹ ಅಗತ್ಯವಾಗಿತ್ತು. ಈ ಕಾರಣಕ್ಕಾಗಿ ಆತನ ಸಾಧನೆ, ಹಿರಿಮೆಗಳನ್ನು ಸ್ತುತಿಸುವ, ಹೊಗಳುವ ಕಥೆ–ಪುರಾಣಗಳನ್ನು ಅವರು ಕಟ್ಟಿದರು. ಇವುಗಳನ್ನಾಧರಿಸಿ ಮಲೆಯ ಮಾದೇಶ್ವರ ಕಾವ್ಯದಂಥ ಮಹಾಕಾವ್ಯವೇ ರೂಪುಗೊಂಡಿತು. ಹೊಸದೊಂದು ಧರ್ಮವನ್ನು ಸ್ವೀಕರಿಸಿದ ಜನರಲ್ಲಿ ಆ ಧರ್ಮವನ್ನು ಕುರಿತ ಅತಿಯಾದ ನಂಬಿಕೆ, ವಿಶ್ವಾಸ ಮತ್ತು ಹಳೆಯ ಧರ್ಮದ ಬಗೆಗೆ ವಿಪರೀತವಾದ ದ್ವೇಷ, ತಿರಸ್ಕಾರಗಳು ಅತಿಯಾಗಿಯೇ ಇರುತ್ತವೆ. ಕರ್ನಾಟಕದ ಧಾರ್ಮಿಕ ಇತಿಹಾಸದಲ್ಲಿ, ಶೈವ ಮತ್ತು

ಜೈನಧರ್ಮಗಳ ಸಂಘರ್ಷಗಳ ವಿಷಯದಲ್ಲಿ ಈ ಅಂಶ ಸ್ಪಷ್ಟ. ಇದೇ ಪ್ರಕ್ರಿಯೆಯನ್ನು ಮಾದೇಶ್ವರನ ಪರಂಪರೆಯಲ್ಲಿಯೂ ಗುರುತಿಸಬಹುದಾಗಿದೆ.

ಒಂದು ನಿರ್ದಿಷ್ಟ ಉದ್ದೇಶ ಸಾಧನೆಗಾಗಿ ಭೂಲೋಕದಲ್ಲಿ ಜನ್ಮ ತಾಳುವುದು, ಭಕ್ತರನ್ನು ಪರೀಕ್ಷಿಸುವುದು, ದುಷ್ಟರನ್ನು ಶಿಕ್ಷಿಸುವುದು, ಪವಾಡಗಳನ್ನು ಮಾಡುವುದು..... ಇದೆಲ್ಲವೂ ಸಾಮಾನ್ಯವಾಗಿ ಎಲ್ಲ ಪುರಾಣ ಪುರುಷರ ಚರಿತ್ರೆಯಲ್ಲಿ ಕಂಡುಬರುವ ಒಂದು ಸಿದ್ಧ ಸೂತ್ರ.ಇದೇ ಸೂತ್ರ ಮಾದೇಶ್ವರನಿಗೂ ಅನ್ವಯವಾಗಿದೆ. ದೇವತೆಗಳನ್ನೆಲ್ಲ ತನ್ನ ಅಧೀನದಲ್ಲಿಟ್ಟುಕೊಳ್ಳುವಂತಹ ವರ ಪಡೆದು ಮೆರೆಯುತ್ತಿದ್ದ ಶ್ರವಣ ದೊರೆಯ ಅಹಂಕಾರವನ್ನು ಅಡಗಿಸಲು ಭೂಮಿ ಮೇಲೆ ಅವತರಿಸುತ್ತಾನೆ. ತನ್ನ ಹುಟ್ಟಿಗೆ ಸೂಕ್ಷ್ಮವಾದ ಗರ್ಭವನ್ನು ತಾನೇ ಪರೀಕ್ಷಿಸಿ ಆಯ್ದುಕೊಳ್ಳುತ್ತಾನೆ. ಪೌರಾಣಿಕ ವ್ಯಕ್ತಿಗಳು ಯಾರೂ ಕೂಡ ಗಂಡುಹೆಣ್ಣಿನ ಸಂಯೋಗದಿಂದ ಜನಿಸುವುದಿಲ್ಲ ಎಂಬುದನ್ನು ಇಲ್ಲಿ ಗಮನಿಸಬೇಕು. ತಾಯಿ ಉತ್ರಾಜಮ್ಮ ಅಕ್ರಮವಾಗಿ ಗರ್ಭ ಧರಿಸಿದ್ದಾಳೆಂಬ ಅಪವಾದವನ್ನು ಹೋಗಲಾಡಿಸುವುದಕ್ಕಾಗಿ ಮಾದೇಶ್ವರ ಅವಳ ಗರ್ಭದಲ್ಲಿದ್ದುಕೊಂಡೇ ಅನೇಕ ಪವಾಡಗಳನ್ನು ಮಾಡುತ್ತಾನೆ. ತಾನು ಎಲ್ಲರೂ ಬರುವ ಮಾರ್ಗದಲ್ಲಿ ಧರೆಗೆ ಬರಲಾರೆ ಎಂದು ತಾಯಿಗೆ ತಿಳಿಸಿ ಅವಳ ಬೆನ್ನನ್ನು ಉಗುರಿನಿಂದ ಸೀಳಿಕೊಂಡು ಹೊರಬರುತ್ತಾನೆ. ಹೊರಬಂದ ನಂತರ ತಾಯಿಯ ಬೆನ್ನನ್ನು ಮೊದಲಿದ್ದ ರೂಪಕ್ಕೆ ತರುತ್ತಾನೆ.

ಮಾದೇಶ್ವರನ ಬಾಲಲೀಲೆಗಳನ್ನು ಗಮನಿಸಿದರೆ ಅವನು ಮಹಿಮಾನ್ವಿತ ಎಂಬುದು ಸಿದ್ಧವಾಗುತ್ತದೆ. ಮಾಯದ ಹುಲಿ ಮಾಡಿಕೊಂಡು ಸವಾರಿ ಮಾಡುತ್ತಾನೆ. ಸೌದೆ ತಂದುಹಾಕು ಎಂದರೆ ಹಾವುಗಳನ್ನೆಲ್ಲ ನುಲಿದು ತಂದು ಉಗ್ರಾಣಕ್ಕೆ ಹಾಕುತ್ತಾನೆ. ಹಸಿವಾಗಿದೆ ಎಂದು ಹೇಳಿ ಪ್ರಭುದೇವರ ಎದುರಲ್ಲಿದ್ದ ವಿಷ ಬೆರೆಸಿದ ಹಾಲನ್ನು ಗಟಗಟನೆ ಕುಡಿಯುತ್ತಾನೆ. ಪೂಜೆಗೆ ಹೂವು ಪತ್ರೆ ತರಲು ಕಳಿಸಿದರೆ ಹಾವು, ಗೊದ್ದ, ಹಲ್ಲಿ, ಚೇಳುಗಳನ್ನೆಲ್ಲ ಜಜ್ಜಿ ಸಾಯಿಸಿ, ಚೀಲದಲ್ಲಿ ತುಂಬಿ ತಂದು ಅದನ್ನು ಗುರುದೇವರು ಸ್ನಾನಮಾಡಿ ಹರಿವ ಹಳ್ಳದಲ್ಲಿ ಅದ್ದುತ್ತಾನೆ. ಅವೆಲ್ಲವೂ ಹೂವುಗಳಾಗಿ ಪರಿವರ್ತನೆ ಮಾಡುತ್ತಾನೆ. ಮಾದೇವನಿಗೆ ಅರ್ಪಿಸಿದ ಮಾಂಸವು ಹೂವು ಅಥವಾ ಲಿಂಗಗಳಾಗಿ ಪರಿವರ್ತನೆಯಾಗುತ್ತದೆ. ಬಿತ್ತಿದ ಅವರೆ ಮತ್ತು ರಾಗಿಗಳು ಒಂದೇ ದಿನದಲ್ಲಿ ಬೆಳೆದು ಫಲವಾಗಿ ಅವುಗಳನ್ನು ಬೇಯಿಸಿ ಊಟ ಮಾಡುವ ಪವಾಡವನ್ನು ಮಾಡುತ್ತಾನೆ.

ಅವತಾರ ಪುರುಷನಾಗಿ ಜನಿಸಿದವನಿಗೆ ಶಾಪ ಕೊಡುವ ಮತ್ತು ವರ ಕೊಡುವ ಶಕ್ತಿಯಿರುತ್ತದೆ.ತಾನು ಇಚ್ಛಿಸಿದ ರೂಪವನ್ನು ಧರಿಸುವ ಶಕ್ತಿ ಇರುತ್ತದೆ. ಹಾಗೇ ಇತರರ ರೂಪ ಪರಿವರ್ತನೆ ಮಾಡಬಲ್ಲ ಸಾಮರ್ಥ್ಯವೂ ಇರುತ್ತದೆ. ಈ ಎಲ್ಲ ಗುಣಗಳೂ ಸಹ ಮಾದೇಶ್ವರನಲ್ಲಿ ಧಾರಾಳವಾಗಿ ಕಂಡುಬರುತ್ತದೆ. ಮಾದೇಶ್ವರ ಅವತಾರ ಪುರುಷ ಎಂದು ಹೇಳಿದರಷ್ಟಕ್ಕೆ ಜನರು ಸುಮ್ಮನಿರುವುದಿಲ್ಲ. ಆತ ಪರಮಶಿವನ ಅವತಾರವೆಂದು ಸಾಬೀತುಪಡಿಸುವವರೆಗೂ ಅವರಿಗೆ ಸಮಾಧಾನವಿಲ್ಲ. ಅಹಂಕಾರಿಯಾದ ಶ್ರವಣ ದೊರೆಯ ಸಂಹಾರಕ್ಕೆಂದೇ ಆತನು ಧರೆಯಲ್ಲಿ ಜನಿಸಿದನೆಂದು ಸಮರ್ಥಿಸುತ್ತಾರೆ.ಬೇರೆ ದೇವತೆಗಳೊಂದಿಗೆ ಮಾದೇಶ್ವರನನ್ನು ಹೋಲಿಸಿ ಆತ ಬೇರೆಲ್ಲರಿಗಿಂತಲೂ ಶ್ರೇಷ್ಠ ಎಂದು ಹೇಳುತ್ತಾರೆ. ಇತರೆ ದೇವತೆಗಳೆಲ್ಲರೂ ನಾಲ್ಕಾರು ಮಂದಿ ಹೆಂಡಿರನ್ನು ಕಟ್ಟಿಕೊಂಡು ಸಂಸಾರಿಗಳಾದರೆ ಮಾದೇಶ್ವರ ಹೆಣ್ಣನ್ನು ಕಣ್ಣೆತ್ತಿಯೂ ನೋಡದೆ ತನ್ನ ಹಿರಿಮೆಯನ್ನು ತೋರುತ್ತಾನೆ. ಪರನಾರಿ ಸೋದರನಾಗಿ 'ಹೆಣ್ಣು ಅಂದ್ರೆ ಹೆತ್ತಾಯಿ ಮಾಡ್ಕೊಂಡು, ಮಣ್ಣು ಅಂದ್ರೆ ಮುತ್ತಾಯಿ ಮಾಡ್ಕೊಂಡು, ಚಿನ್ನಕ್ಕಾಗಿ ಚಿಂತೆಮಾಡ್ದೆ, ಹಣಕ್ಕಾಗಿ ಹಟಮಾಡ್ದೆ, ಹೆಣ್ಣುಮಣ್ಣು ಕರಿತಲೆ ಜಾತಿ ಕಣ್ಣೆತ್ತಿ

ನೋಡ್ಬಾರ್ದು, ಕರ್ಮ ಹೊತ್ಕೊಳ್ಬಾರ್ದು' ಎಂಬ ಮಹಾತ್ಮ ಮಾದೇಶ್ವರ.

ಹೆಣ್ಣಿನ ಮೋಹವನ್ನು ಸಂಪೂರ್ಣ ತ್ಯಜಿಸಿದವನೆ ಪರಮಶ್ರೇಷ್ಠ ಎಂಬುದು ವೈದಿಕ ಸಂಸ್ಕೃತಿಯ ಮಾನದಂಡ. ಆದ್ದರಿಂದ ಹೆಣ್ಣನ್ನು ಕಣ್ಣೆತ್ತಿಯೂ ನೋಡದ ಮಾದೇವ ಜನಪದರ ದೃಷ್ಟಿಯಲ್ಲಿ ಎಲ್ಲ ದೇವರುಗಳಿಗಿಂತ ಮಿಗಿಲೆನಿಸಿಕೊಂಡಿದ್ದಾನೆ. ಬೇಡರ ಪೂಜಾರಿಯನ್ನು ಹೊಂದಿರುವ ಮಾದೇವ ಮಾಂಸದ ನೈವೇದ್ಯವನ್ನು ಬೇಡವೆನ್ನುವುದೂ ಇಲ್ಲಿ ಗಮನರ್ಹವಾಗಿದೆ. ಹಠದಲ್ಲಿಯೂ ಪಟ್ಟು ಹಿಡಿದು ಸಾಧನೆ ಮಾಡುವಲ್ಲಿಯೂ ಮಾದೇವನದು ಎತ್ತಿದ ಕೈ. ಭೂಲೋಕದಲ್ಲಿ ಆತನ ಹೆಸರು ಪ್ರಸಿದ್ಧಿಯಾಗಬೇಕು. ಕರವೆತ್ತಿ ಕೈಮುಗಿಯಬೇಕು, ಹನ್ನೆರಡಂಕಣದ ಗುಡಿಯಾಗಬೇಕು, ಮಜ್ಜಣದ ಬಾವಿಯಾಗಬೇಕು, ಬೇರೆಲ್ಲ ದೇವರುಗಳಿಗೆ ಹಾಲು, ನೀರಿನ ಮಜ್ಜನವಾದರೆ ಆತನಿಗೆ ಅಚ್ಚೆಳ್ಳಲ್ಲಿ ಹೆಚ್ಚಾಳದಿಂದ ಎಣ್ಣೆಮಜ್ಜನ ಆಗಬೇಕು ಹೀಗೆ ಒಂದೊಂದೇ ಬಯಕೆಗಳನ್ನು ಬಿಡದೆ ಪೂರೈಸಿಕೊಳ್ಳುತ್ತಾನೆ. ಹೀಗೆ ಮಾದೇಶ್ವರನಿಗೆ ಸಂಬಂಧಿಸಿದ ಪ್ರತಿಯೊಂದು ವರ್ಣನೆಯೂ ಸಹ ಅತನ ಮಹಿಮೆಯನ್ನು ವ್ಯಕ್ತಪಡಿಸುವುದಕ್ಕೆ ಪೂರಕವಾಗಿವೆ.

ಪೌರಾಣಿಕ ವ್ಯಕ್ತಿ ಐತಿಹಾಸಿಕವಾಗುವುದು. ಐತಿಹಾಸಿಕ ವ್ಯಕ್ತಿ ಪೌರಾಣಿಕವಾಗುವುದು ಜನಪದ ಪರಂಪರೆಯಲ್ಲಿ ನಿರಂತರವಾಗಿ ನಡೆಯುತ್ತಿರುವ ಪ್ರಕ್ರಿಯೆಯಾಗಿದೆ. ಕಾಲಮಾನದ ದೃಷ್ಟಿಯಿಂದ ವಾಸ್ತವ ಜಗತ್ತಿಗೆ ಹತ್ತಿರವಾದ ವ್ಯಕ್ತಿಯ ಘನತೆಯನ್ನು ಹೆಚ್ಚಿಸುವುದಕ್ಕಾಗಿ ಪುರಾಣೀಕರಣ ಅಗತ್ಯವಾಗಿದೆ. ಮಾದೇಶ್ವರನ ಪರಂಪರೆಯ ನಿರ್ಮಾಣದಲ್ಲಿ ಪುರಾಣೀಕರಣ ಬಹಳ ಮಹತ್ವದ ಪಾತ್ರ ವಹಿಸಿದೆ. ಪವಾಡ, ಮಾಯಾವಿ ಗುಣಗಳು ಸಾಮಾನ್ಯವಾಗಿ ಎಲ್ಲ ದೇವತೆಗಳಲ್ಲಿಯೂ ಕಂಡುಬರುವ ಗುಣಗಳೇ ಆಗಿವೆ. ಆದ್ದರಿಂದ ಬರೀ ಇದಿಷ್ಟೇ ಆಗಿದ್ದರೆ ಮಾದೇವ ಉಳಿದ ದೇವತೆಗಳಿಗಿಂತ ಭಿನ್ನವಾಗುತ್ತಿರಲಿಲ್ಲ ಮತ್ತು ಉಳಿದ ದೇವತೆಗಳಂತೆ ಜನಪದ ಪ್ರಪಂಚಕ್ಕೆ ಅಲೌಕಿಕನಾಗಿಯೇ ಉಳಿಯುತ್ತಿದ್ದ. ಮಾದೇವನನ್ನು ಒಬ್ಬ ದೈವಿಕ ವ್ಯಕ್ತಿಯಾಗಿ ಕಲ್ಪಿಸಿ, ಅವನ ವಾಸ್ತವ ಬದುಕಿನ ವಿವರಗಳನ್ನು ಈ ದೈವಿಕ ಹಿನ್ನೆಲೆಯಲ್ಲಿ ವಿವರಿಸಿರುವುದರಿಂದ ಜನಪದ ಪ್ರಪಂಚದಲ್ಲಿ ಮಾದೇವ ಗಟ್ಟಿಯಾಗಿ ನೆಲೆ ನಿಲ್ಲಲು ಸಾಧ್ಯವಾಯಿತು.

**ಪರಾಮರ್ಶನ ಗ್ರಂಥಗಳು**


- ದೇಜಗೌ. (2015). *ಜಾನಪದ ಅಧ್ಯಯನ.* ಡಿವಿಕೆ ಮೂರ್ತಿ.
- ದೊಡ್ಡಮಾದಯ್ಯ. ಸಿ. (19900. *ಓಂ ಮಲೆಮಾದೇಶ್ವರ ಮಹಿಮೆ.* ಧರ್ಮದರ್ಶಿ ಮಂಡಲಿ, ಶ್ರೀ ಮಲೆ ಮಹದೇಶ್ವರಸ್ವಾಮಿ ದೇವಸ್ಥಾನ.
- ಕಾಳೇಗೌಡ ನಾಗವಾರ ಮತ್ತು ಅಂಬಳಿಕೆ ಹಿರಿಯಣ್ಣ. (2000). *ಜೀಶಂಪ ಅವರ ಜಾನಪದ ಬರಹಗಳು.* ಕರ್ನಾಟಕ ಮತ್ತು ಯಕ್ಷಗಾನ ಅಕಾಡೆಮಿ.
- ನಾಯಕ, ಹಾ. ಮಾ. (2019). *ಜಾನಪದ ಸ್ವರೂಪ.* ಗೀತಾಂಜಲಿ ಪುಸ್ತಕ ಪ್ರಕಾಶನ.
- ರಾಜಶೇಖರ, ಪಿ.ಕೆ. (2007). *ಜನಪದ ಮಹಾಕಾವ್ಯ ಮಲೆಯ ಮಾದೇಶ್ವರ ಕಥಾಮಂಜರಿ.* ಹೊನ್ನಾರು ಜನಪದ ಗಾಯಕರು.
- ರಾಜಶೇಖರ ಪಿ. ಕೆ. (2006). *ಜನಪದ ಮಹಾಕಾವ್ಯ ಮಲೆಯ ಮಾದೇಶ್ವರ. ಸಂಪುಟ– 1 ಮತ್ತು 2*, ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 89-93
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಡಾ.ಕೆ.ಎನ್.ಗಣೇಶಯ್ಯನವರ ಕಥೆಗಳಲ್ಲಿನ ಹೊಸ ಸಾಧ್ಯತೆಗಳು

**ಸಚಿನ್ ಜಿ. ಹೆಚ್**
ಸಂಶೋಧನಾ ವಿದ್ಯಾರ್ಥಿ, ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ.

***Abstract:***
*ಸಾಹಿತ್ಯವು ನಿಂತ ನೀರಲ್ಲ ನಿತ್ಯ ಹರಿಯುವ ಹೊಳೆಯಂತೆ, ಇವತ್ತೀನವರೆಗೂ ಕೂಡ ಆಯಾ ಯುಗದ ಸಾಹಿತ್ಯವು ಆಯಾ ಕಾಲದ ಯುಗಧರ್ಮವನ್ನ ಅನುಸರಿಸಿ ಬಂದಿರುವುದನ್ನು ಕಾಣಬಹುದು. ಆಧುನಿಕ ಕನ್ನಡ ಸಾಹಿತ್ಯ ಪ್ರಕಾರಗಳಲ್ಲಿ ಒಂದಾದ ಸಣ್ಣ ಕತೆಯು ಕೂಡ ಇಲ್ಲಿಯ ತನಕ ಕನ್ನಡದಲ್ಲಿ ವೈವಿಧ್ಯಮಯ ಸಣ್ಣಕಥೆಗಳು ಪ್ರಕಟಗೊಂಡಿರುವುದನ್ನು ಕಾಣುತ್ತೇವೆ. ನವೋದಯ ಕಾಲಘಟ್ಟದಲ್ಲಿ ರೋಮ್ಯಾಂಟಿಕ್ ವಿಚಾರಧಾರೆಗಳು ಗೋಚರವಾದವು, ಪ್ರಗತಿಶೀಲ ಪಂಥದಲ್ಲಿ ಮಾರ್ಕ್ಸವಾದ ಸಾಮಾಜಿಕ ದೃಷ್ಟಿಕೋನ ಕಂಡರೆ, ನವ್ಯಮಾರ್ಗದಲ್ಲಿ ಮನಶಾಸ್ತ್ರೀಯ ಹಿನ್ನೆಲೆಯ ಸಂಕೀರ್ಣ ಸಂಗತಿಗಳು ಮುನ್ನಲೆಗೆ ಬಂದವು. ನಂತರ ದಲಿತ ಬಂಡಾಯವು ಸಮಾಜದ ಪುನರ್ ನಿರ್ಮಾಣ ಸಂಗತಿಗಳಿಗೆ ವಿಶೇಷ ಮಹತ್ವ ದೊರಕಿತು, ಆ ನಂತರ ಕಾಲಘಟ್ಟದಲ್ಲಿ ಸಣ್ಣಕಥೆ ಸೃಷ್ಟಿಯಾಯಿತಾದರೂ ಅದರ ದಿಕ್ಕೇ ಬದಲಾಯಿತು, ನಂತರದಲ್ಲಿ ಯಾವುದೇ ಪಂಥ, ಚಳುವಳಿಯಿಂದ ದೂರವಿದ್ದೂ ತಮ್ಮ ಪಾಡಿಗೆ ತಾವು ಬರೆದವರಿದ್ದಾರೆ. ಈ ಲೇಖನದಲ್ಲಿ ಡಾ.ಕೆ.ಎನ್.ಗಣೇಶಯ್ಯನವರ ಕೆಲವು ಕತೆಗಳಲ್ಲಿ ಚಾರಿತ್ರಿಕ ಸ್ವರೂಪವನ್ನ ವಿವೇಚಿಸಲಾಗಿದೆ.*

***Keywords:*** *ಕಥನ ಸಾಹಿತ್ಯ. ಕೆ.ಎನ್.ಗಣೇಶಯ್ಯ, ಪದ್ಮಪಾಣಿ, ಕೆರಳಿದ ಕರಳು, ಮರಳ ತೆರೆಗಳೊಳಗೆ*

## ಪೀಠಿಕೆ

ಸಮಕಾಲೀನ ಬದುಕನ್ನ ಸೂಕ್ಷ್ಮನೆಲೆಯಲ್ಲಿ ವೀಕ್ಷಿಸಿ ಕಲಾತ್ಮಕತೆಯ ಎಚ್ಚರವನ್ನು ಇಟ್ಟುಕೊಂಡು ಕಥನವಾಗಿಸುವ ಸಮರ್ಥ ಕತೆಗಾರರಿದ್ದಾರೆ ಹಾಗಾಗಿ ಇವತ್ತಿನ ಬರಹಗಾರರು ತಮ್ಮ ಕಾಲದ ಸಮಸ್ಯೆಗಳಿಗೆ, ಸವಾಲುಗಳಿಗೆ ಮುಖಾಮುಖಿಯಾಗಿದ್ದಾರೆ. ವಿಚಿತ್ರ ಸನ್ನಿವೇಶಗಳ ಕಾಲಘಟ್ಟ ಇದಾಗಿದೆ. ಬಡತನ, ಜಾತೀಯತೆ, ಪರತಂತ್ರ, ನಿರುದ್ಯೋಗ, ಕೌಟುಂಬಿಕ ಸಮಸ್ಯೆ ಒಳಗೊಳ್ಳುತ್ತಿರುವುದರಿಂದ ಕಥನ ಸಾಹಿತ್ಯ ಸಾಂಸ್ಕೃತಿಕ ಚರಿತ್ರೆಯಾಗಿ ರೂಪುಗೊಳ್ಳುತ್ತಿದೆ, ಸಮಾಜದ ಹಲವು ಮುಖಗಳು ಕಥನದೊಳಗೆ ಪ್ರವೇಶ ಪಡೆಯುತ್ತಿವೆ.

ನಗರ ಬದುಕಿನ ಜಂಜಾಟ, ಮುಜುಗರ, ಬೇಸರ, ಆಯಾಸ, ಭಯ, ನಿರಾಶೆ, ಆತಂಕ, ಸಂಬಂಧ, ಸಂಘರ್ಷ, ಸಾಮರಸ್ಯ, ಜನಪರ ಜೀವಪರತೆಯ ಕಾಳಜಿ ಇತ್ಯಾದಿ ಮನುಷ್ಯ ಬದುಕಿನ ಹಲವು ಲೋಕಗಳನ್ನು ಇವತ್ತಿನ ಕತೆಗಳು ನಮ್ಮ ಮುಂದೆ ಬಿಚ್ಚಿಡುತ್ತಿವೆ. ಪರಿಸರ ನಾಶ, ನಕ್ಸಲೀಯರ ಸಮಸ್ಯೆ, ಜಾಗತೀಕರಣ ಪ್ರಭಾವ, ಗಂಡ ಹೆಂಡತಿಯರ ನಡುವಿನ ಬಿರುಕು, ವಿಚ್ಛೇದನ, ವೃದ್ಧಾಶ್ರಮ ಸೇರುವ

***Please cite this article as:*** ಸಚಿನ್ ಜಿ. ಹೆಚ್. (2024). ಡಾ.ಕೆ.ಎನ್.ಗಣೇಶಯ್ಯನವರ ಕಥೆಗಳಲ್ಲಿನ ಹೊಸ ಸಾಧ್ಯತೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 3(3), 89–93

ತಂದೆ ತಾಯಿಗಳ ಕಷ್ಟ, ಕಾರ್ಪೋರೇಟ್ ಸಂಸ್ಕೃತಿ ಇತ್ಯಾದಿಗಳನ್ನು ಚಿತ್ರಿಸುವ ಕಥನಗಳು ಹೊರಬಂದಿವೆ.

ಪ್ರಸ್ತುತ ದಿನಮಾನಗಳಲ್ಲಿ ಆಗುತ್ತಿರುವ ಪಲ್ಲಟಗಳು, ಲೋಕಗ್ರಹಿಕೆಯಲ್ಲಿ ಆದ ಬದಲಾವಣೆಗಳು ಕೂಡ ಕಾರಣ, ನಿರ್ದಿಷ್ಟ ಲೋಕ ಗ್ರಹಿಕೆ ಕ್ರಮಕ್ಕೆ ಬದಲಾಗಿ ಬಹುಮಾದಿಯ ಕಥನ ಕ್ರಮಗಳನ್ನು ಅನುಸರಿಸುತ್ತಿರುವುದು ಗೋಚರವಾಗುವ ಅಂಶವಾಗಿದೆ.

ಚರಿತ್ರೆ ಮತ್ತು ಸಾಹಿತ್ಯ ಒಂದಕ್ಕೊಂದು ಪೂರಕ ಕ್ಷೇತ್ರಗಳು. ಇವು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಚರಿತ್ರೆ ಗತಕಾಲದ ಅನುಭವವನ್ನು ನೀಡಿದರೆ ಸಾಹಿತ್ಯ ಗತಕಾಲದ ಅನುಭವದ ಮೂಲಕ ವರ್ತಮಾನವನ್ನು ನೋಡುವುದರೊಂದಿಗೆ ಭವಿಷ್ಯತ್ತನ್ನು ನಿರ್ಮಿಸಿಕೊಳ್ಳುವ ಮಾರ್ಗೋಪಾಯಗಳನ್ನು ನೀಡುತ್ತದೆ. ಈ ಹಿನ್ನೆಲೆಯಲ್ಲಿ ಚರಿತ್ರೆಯನ್ನ ಪುನರ್‌ರಚಿಸುವ ಪುರಾಣದೊಳಗಿನ ಅವಾಸ್ತವ ಸಂಗತಿಗಳನ್ನು ಹಾಗೂ ವಾಮಮಾರ್ಗೋಪಾಯಗಳನ್ನು ನೀಡುತ್ತದೆ.

ಈ ಹಿನ್ನೆಲೆಯಲ್ಲಿ ಚರಿತ್ರೆಯನ್ನ ಪುನರ್‌ರಚಿಸುವ ಪುರಣದೊಳಗಿನ ಅವಾಸ್ತವ ಸಂಗತಿಗಳನ್ನು ವೈಚಾರಿಕ ನೆಲೆಯಲ್ಲಿ ಅರ್ಥೈಸುವ ಕೆಲಸವೂ ನಡೆಯುತ್ತಾ ಬಂದಿದೆ. ಪರಂಪರೆಯನ್ನ ಅರ್ಥೈಸಿಕೊಳ್ಳಲು ಚರಿತ್ರೆಯ ಗ್ರಹಿಕೆ ತೀರಾ ಅಗತ್ಯವೆಂಬುದನ್ನು ಕೆ.ಎನ್ ಗಣೇಶಯ್ಯನವರ ಕಥೆಗಳು ಮನವರಿಕೆ ಮಾಡಿಕೊಡುತ್ತವೆ .ಕೆ.ಎನ್ ಗಣೇಶಯ್ಯನವರ ವೃತ್ತಿಯಿಂದ ಕೃಷಿ ವಿಜ್ಞಾನಿ. ಇವರ ಕಥಾ ಸಾಹಿತ್ಯವು ಹೊಸ ವಿಷಯ, ಹೊಸ ನಿರೂಪಣೆಯ ಮೂಲಕ ಓದುಗ ವರ್ಗವನ್ನು ದಿಗ್ಭ್ರಮೆಗೊಳಿಸಿದ್ದಾರೆ. ಚರಿತ್ರೆಯ ಹಿಂದಿರುವ ಕಟುಸತ್ಯಗಳನ್ನು ವಿವರಿಸುತ್ತಾ ಇತಿಹಾಸದ ಮೂಲಕ ಕಥೆಯ ಸನ್ನೀವೇಶಗಳನ್ನು ರೋಮಾಂಚಕಾರಿಯಾಗಿಯೂ ಕಟ್ಟುತ್ತಾರೆ. ಈ ಲೇಖನದಲ್ಲಿ ಗಣೇಶಯ್ಯನವರ ಕೆಲವು ಕತೆಗಳಲ್ಲಿ ಚಾರಿತ್ರಿಕ ಸ್ವರೂಪವನ್ನ ಇಲ್ಲಿ ವಿವೇಚಿಸಲಾಗಿದೆ.

**ಪದ್ಮಪಾಣಿ**

ಗಣೇಶನಯ್ಯನವರು ಪದ್ಮಪಾಣಿ ಕಲಾಕೃತಿಯ ಚರಿತ್ರೆಯನ್ನು ಅನ್ವೇಷಿಸುವ ಮೂಲಕ ಚರಿತ್ರೆಯಲ್ಲಿ ಮಿತಿಗಳನ್ನು ಈ ಕತೆಯಲ್ಲಿ ವ್ಯಕ್ತಗೊಳಿಸುತ್ತಾರೆ. ಅಜಂತ ಗುಹೆಗಳಲ್ಲಿರುವ ಪ್ರಪಂಚ ಪ್ರಸಿದ್ಧವಾದ ಪದ್ಮಪಾಣಿಯ ಚಿತ್ರವು ಬೋಧಿಸತ್ವನ ಪ್ರತಿರೂಪವಾದರೆ ಅದರಲ್ಲೇಕೆ ಗಂಡು ಚಿತ್ರದ ಮುಖದಲ್ಲಿ ಹೆಣ್ಣಿನ ಸೌಂದರ್ಯವಿದೆ? ಆಕಾರವೇಕೆ ಬಳುಕುವ ಹೆಣ್ಣಿನ ದೇಹ. ವಾಕಟಕ ರಾಜರು ಹಿಂದೂ ಧರ್ಮದವರು ಅವರೇಕೆ ಗುಹಾಂತರ ವಿಹಾರ ಕಟ್ಟಿದರು? ಹರಿಸೇನನ ರಾಣಿ ಕಮಲಾಂಬಿಕೆ ಬೌದ್ಧ ಧರ್ಮದವಳಲ್ಲ ಆದರೂ ಆಕೆ ಹರಿಸೇನನಿಗೇಕೆ ವಿಹಾರ ಗೃಹ ಕಟ್ಟಿಸಲು ಪ್ರೇರೆಪಿಸುತ್ತಾಳೆ. ವಿಹಾರ ಗುಹೆಗಳಲ್ಲಿ ಬಿತ್ತಿಗಳ ಚಿತ್ರಣ ಕಾರ್ಯವಹಿಸಿಕೊಂಡಿದ್ದ ವಿಷ್ಣುಶರ್ಮನಿಗೇಕೆ ಕಮಲಾಂಬಿಕೆ ಬುದ್ಧ ಮತ್ತು ಬೋಧಿಸತ್ವದ ಜೀವನ ಚಿತ್ರಗಳನ್ನು ಬರೆಯಲು ಸಹಾಯ ಮಾಡುವ ಉದ್ದೇಶವೇನಿತ್ತು? ಹೀಗೆ ರೋಮಾಂಚನಕಾರಿ ಇತಿಹಾಸದ ಎಳೆಗಳನ್ನು ಬಿಚ್ಚಿಡುತ್ತಾ ಪದ್ಮಪಾಣಿ ಕಲಾಕೃತಿಯ ಹಿಂದಿನ ರಹಸ್ಯದ ಮೇಲೆ ಬೆಳಕು ಚೆಲ್ಲುತ್ತಾರೆ. ಕಮಲಾಂಬಿಕೆ ವಿಷ್ಣುಶರ್ಮನಿಗೆ ನಿನ್ನ ಚಿತ್ರಕಲೆ ಕಾಲ ದೇಶಗಳನ್ನ ಮೀರಿ ನಿಲ್ಲಬೇಕು ಧರ್ಮದ ಎಲ್ಲೆಯಿಂದ ದೂರ ಹಾರಿ ಅನಂತದಲ್ಲಿ ಮಿಂಚಬೇಕು ಇದು ಬೌದ್ಧಧರ್ಮಕ್ಕೆ ವಾಹನವಾಗಿರದೆ ಪ್ರಪಂಚದ ಎಲ್ಲಾ ಚಿತ್ರಕಲೆಗಳ ಪರಿಶ್ರಮಗಳ ಉತ್ತುಂಗವಾಗಬೇಕು ಅದರ ಸಫಲತೆ ಪಡೆಯಬೇಕೆಂಬ ನನ್ನ ಆಸೆ ಎಂದು ಹೇಳಿ ನಿನ್ನ ಕಲ್ಪನೆ ಮಿತಿಗಳಿಂದ ಆಚೆ ಬಂದು ಬಿಡು ನಿನ್ನ ಕಲ್ಪನೆಗೆ ರೂಪದರ್ಶಿ ಬೇಡವೇ ಎಂದು ಆತನ ಕಣ್ಣುಗಳಲ್ಲಿ ದೃಷ್ಟಿ ನೆಟ್ಟಳು. ಹೀಗೆ ಕಮಲಾಂಬಿಕೆ ವಿಷ್ಣುಶರ್ಮನಲ್ಲಿ ತನ್ನ ಸೌಂದರ್ಯ, ಸುಂದರ ಮೈ ಮಾಟವು ಆತನ ಬಿತ್ತಿಗಳಲ್ಲಿ ನೆಲಗೊಳ್ಳುವಂತೆ ಮಾಡಿದಳು. ವಿಷ್ಣುಶರ್ಮನ ಸತತ ಒಂದು ತಿಂಗಳ ನಂತರ ಪ್ರಯತ್ನದ ಫಲವಾಗಿ ಪದ್ಮಪಾಣಿ ಪಡಿ

ಮೂಡಿತ್ತು. ಚಿತ್ರಣ ಕಾರ್ಯದ ಮೇಲುಸ್ತುವಾರಿ ವಹಿಸಿದ ದಿನ್ನಗರು ಈ ಬಿತ್ತಿಗಳನ್ನು ಸೂಕ್ಷ್ಮವಾಗಿ ಗಮನಿಸಿ ಈ ಪರಿವರ್ತನೆಗೆ ಕಾರಣ ಮೂಲ ಹುಡುಕಿದಾಗ ಕಮಲಾಂಬಿಕೆ ಈ ಚಿತ್ರಣದ ಬಂಧನಕ್ಕೆ ಕಾರಣೀಭೂತಳೆಂಬುದನ್ನು ಕಂಡು ಆಶ್ಚರ್ಯಗೊಂಡರು. ದಿನ್ನಗರು ಕಮಲಾಂಬಿಕೆಯ ಹತ್ತಿರ ಬಂದು ನೀನು ಈ ರೀತಿ ಮಾಡಿದ್ದು ತಪ್ಪು ಎಂದು ಹೇಳಿದಾಗ ಕಮಲಾಂಬಿಕೆಯು ಬೌದ್ಧ ಧರ್ಮದ ತಾತ್ವಿಕತೆಯನ್ನು ಪ್ರಶ್ನಿಸುವುದರ ಜೊತೆಗೆ ಹೆಣ್ಣಿನ ಸಂಕಟವನ್ನು ವ್ಯಕ್ತಪಡಿಸುವುದನ್ನು ಕಾಣಬಹುದು. ಆ ಸಂಕಟವೇ ಪದ್ಮಪಾಣಿ, ವಜ್ರಪಾಣಿ ಆ ಕಲಾಕೃತಿಗೆ ಕಾರಣ ಎಂದು ಹೇಳುತ್ತಾಳೆ

ಹದಿನೈದು ವರ್ಷಗಳ ಹಿಂದೆ ನಮ್ಮಿಬ್ಬರ ಮಧ್ಯೆ ಬೆಳೆದಿದ್ದ ಸಂಬಂಧ ಸುಟ್ಟು ಹಾಕಿ ಬಿಟ್ಟು ಪ್ರೇಮ ಬಂಧವನ್ನು ತೊರೆದು, ನಾನು ನೋವಿನಲ್ಲಿ ಮುಳುಗುತ್ತೇನೆ ಎಂದು ತಿಳಿದಿದ್ದರೂ ನನ್ನ ಬಗ್ಗೆ ಎಳ್ಳಷ್ಟು ಯೋಚಿಸದೆ ಹೋದಿರಿ ಬೌದ್ಧಧರ್ಮವನ್ನು ಸ್ವೀಕರಿಸಿದಿರಿ ಈ ಅಂಶವನ್ನು ಹೇಳುತ್ತಾ ಬೌದ್ಧ ಧರ್ಮದ ತಾತ್ವಿಕತೆಯನ್ನು ಪ್ರಶ್ನಿಸಿ ದಿನ್ನಗರಿಂದ ಆದ ಅನ್ಯಾಯವನ್ನು ತೋರ್ಪಡಿಸುತ್ತಾಳೆ. ಬುದ್ಧನ ಕಾಲದಿಂದಲೂ ಹೀಗೆ ಗಂಡಸರಿಂದ ತಾವು ನಿರ್ವಾಣ ಹೊಂದುವ ಸ್ರೀ ಭಾವನೆಗಳ ವಧೆ ನಿರಂತರವಾಗಿ ಸಾಗುತ್ತಲೇ ಬಂದಿದೆ ಬುದ್ಧ, ನಂದ, ಕಶ್ಯಪ, ದಿನ್ನಗ ಹೀಗೆ ಎಷ್ಟೋ ಸಾವಿರ ಗಂಡಸರು ತಮ್ಮ ನಿರ್ವಾಣಕ್ಕಾಗಿ ನಂಬಿ ಬಂದ ಸ್ತ್ರೀಯರ ಬಾಳನ್ನು ನೋವಿನ ಪ್ರಪಾತಕ್ಕೆ ನೂಕುತ್ತಲೆ ಬಂದಿದ್ದಾರೆ ಎಂದು ವ್ಯಕ್ತಪಡಿಸುತ್ತಾಳೆ. ಯಾವ ಸೌಂದರ್ಯದ ಆಲಿಂಗನವನ್ನು ತಿರಸ್ಕರಿಸಿ ತಾವು ಬೌದ್ಧ ಧರ್ಮವನ್ನು ಅಪ್ಪಿಕೊಂಡಿರೋ ಅದೇ ಸೌಂದರ್ಯ ನಿಮ್ಮ ಸುತ್ತಲೂ ಕುಣಿದು ಕುಪ್ಪಳಿಸಿ ನಿಮ್ಮನ್ನು ಅಣಕಿಸುವಂತೆ ಮಾಡುವ ಹಠ ತೊಟ್ಟೆ ವಿಷ್ಣುಶರ್ಮನನ್ನು ನನ್ನ ಗೊಂಬೆಯಾಗಿಸಿಕೊಂಡು ನನ್ನ ಸೌಂದರ್ಯ ಮತ್ತು ಮೈಮಾಟ ಆ ವಿಹಾರದ ಬಿತ್ತಿಗಳಲ್ಲಿ ವಿಜೃಂಭಿಸುವಂತೆ ಮಾಡಿದೆ ಎಂದಳು, ದಿನ್ನಗರು ಕಮಲಾಂಬಿಕೆ ನನ್ನ ಮೇಲೆ ನಾ ಕೋಪಕ್ಕೆ ಏನು ಮಾಡುತ್ತಿರುವೆ ಎಂದು ಯೋಚಿಸಿರುವೆಯಾ ಶತಶತಮಾನಗಳವರೆಗೆ ಇರುವ ಸ್ಮಾರಕ . ಅದರ ಭವ್ಯತೆಯನ್ನು ನಿನ್ನ ಸೌಂದರ್ಯದ ಏಕತಾನತೆಯಲ್ಲಿ ಹಾಳುಗೆಡುವುತ್ತಿರುವೆ ಎಂಬುದರ ಅರಿವಿದೆಯೇ ಎಂದಾಗ ಬುದ್ದನಂತೆ ನಾನು ಜಗತ್ಪ್ರಸಿದ್ಧ ಆಗಬೇಕೆಂಬುದೇ ನನ್ನ ಆಸೆ ಎಂದು ಕಮಲಾಂಬಿಕೆ ಹೇಳುತ್ತಾಳೆ.

ಬುದ್ಧನಿಗೆ ನಿರ್ವಾಣವೇ ಆಸ್ತಿ ಆದರೆ ನನಗೆ ನನ್ನ ಸೌಂದರ್ಯವೇ ಆಸ್ತಿ, ಬರೀ ಚಿತ್ರಗಳ ಸೌಂದರ್ಯದಲ್ಲಿ ಅಷ್ಟೇ ಅಲ್ಲ, ಆಂತರಿಕ ಸಂಯೋಜನೆಯಲ್ಲಿ ನಾನೇ ಅಡಗಿ ಕುಳಿತ್ತಿದ್ದೇನೆ ವಿಷ್ಣುಶರ್ಮ ತನ್ನ ರಚನೆಗೆ ಆರಿಸಿಕೊಂಡ ಸಂಯೋಜನೆ ಪದ್ಮಪಾಣಿ ಕಮಲವನ್ನು ಕೈಯಲ್ಲಿ ಹೊತ್ತ ಬುದ್ಧ ಅಥವಾ ಬೋಧಿಸತ್ವ ಎಂದು, ಅಂದರೆ ನಿಮ್ಮ ಬುದ್ಧನೇ ನನ್ನನ್ನು ನೀವು ತಿರಸ್ಕರಿಸಿದವಳನ್ನು ತನ್ನ ಕೈಯಲ್ಲಿ ಹೊತ್ತಿರುವಂತೆ ಚಿತ್ರಿಸಿದ್ದಾರೆ. ನಿಮ್ಮ ಬುದ್ಧನಷ್ಟೇ ಎಲ್ಲೆಲ್ಲೂ ತುಂಬಿದ್ದೇನೆ ಎನ್ನುವ ಮಾತುಗಳು ದಿನ್ನಗರಿಗೆ ಹೇಳಿದಳು ಇದನ್ನ ಕೇಳಿಸಿಕೊಂಡ ವಿಷ್ಣುಶರ್ಮ ನಾನು ಸಹ ಇವಳ ಬಂಧನಕ್ಕೆ ಬಿದ್ದೆನೆಲ್ಲ ಎಂದು ಜುಗುಪ್ಸೆಗೊಳ್ಳುತ್ತಾನೆ.

ವಿಷ್ಣುಶರ್ಮ ಮನೋವಿಕಲನಾಗಿ ಕಾರ್ಯನಿಲ್ಲಿಸುತ್ತಾನೆ. ಈ ವಿಚಾರ ಹರಿಸೇನನಿಗೆ ತಿಳಿಸುವುದು ಸೂಕ್ತವಲ್ಲ ಹಾಗಾಗಿ ದಿನ್ನಗರು ಬೇರೆ ಕಲೆಗಾರ ನನ್ನ ಹುಡುಕಿ ತರುತ್ತಾನೆ. ಆತನೇ ಕಮಲಾಂಬಿಕೆ ಮಗ. ದಿನ್ನಗರು ಆತನನ್ನು ಗುಹೆಯಲ್ಲಿ ಕರೆದುಕೊಂಡು ಹೋಗುತ್ತಾನೆ. ಕಮಲಾಂಬಿಕೆಯನ್ನು ಸಹ ಕತ್ತಲ ಗುಹೆಯಲ್ಲಿ ನಿಲ್ಲಿಸಿ ಆ ಕಲಾಕೃತಿಯ ಬಗ್ಗೆ ಕಮಲಾಂಬಿಕೆಯ ಮಗನಿಗೆ ಕೇಳಿದಾಗ ಅವನು ಎಂತಹ ಸುಂದರ ಮುಖ, ಎಷ್ಟು ಆಕರ್ಷಕವಾದ ಮೈಕಟ್ಟು ಎಂದಾಗ ಅವಳ ಶರೀರವೆಲ್ಲ ಹಿಂಡಿದ ಹಾಗಾಗಿರಬೇಕು. ಮತ್ತೆ ವೀಕ್ಷಿಸುತ್ತಲೇ ಇದ್ದ ರಾಜಕುಮಾರ ದಿನ್ನಗರೇ ಈ

ಮುಖ ನನಗೆಕೋ ಚಿರಪರಿಚಿತ ಹಾಗೂ ಆಪ್ತವಾಗಿ ಕಾಣುತ್ತಿದೆ ಎಂದಾಗ ಆ ಗುಹೆಯಿಂದ ಆತನನ್ನು ಹೊರಗೆ ಕರೆದುಕೊಂಡು ಹೋಗುತ್ತಾರೆ ಇದನ್ನು ಕೇಳಿಸಿಕೊಂಡ ಕಮಲಾಂಬಿಕೆ ಬಹಳ ಹೊತ್ತಿನ ನಂತರ ಗುಹೆಯಿಂದ ಹೊರ ಬಂದು ದಿನ್ನಗರ ಬಳಿ ಹೋಗಿ ಅವರ ಕಾಲಿನ ಬಳಿ ತನ್ನ ತಲೆಯಿರಿಸಿ ದೀಕ್ಷೆ ಕೋರಿ ಬೌದ್ಧ ಭಿಕ್ಕುಣಿಯಾಗಿ ತನ್ನ ಮುಂದಿನ ಜೀವನ ಕಳೆದಳು, ಇದೆ ಪದ್ಮಪಾಣಿಯ ಹಿಂದಿನ ದುರಂತ ಕಥೆ ಹೀಗೆ ಗಣೇಶಯ್ಯನವರು ಚರಿತ್ರೆಯ ಪುಟಗಳಲ್ಲಿ ದಾಖಲಾಗದ ಎಷ್ಟೋ ಸಂಗತಿಗಳನ್ನ ಪುನಾರಚಿಸುತ್ತಾರೆ. ಚರಿತ್ರೆಯ ಮಿತಿಯನ್ನ ಗುರುತಿಸುತ್ತಾರೆ.

**ಕೆರಳಿದ ಕರಳು**

ಪಾಲುಕ್ಕಮ್ಮ ದೇವತೆಯ ಹಿನ್ನೆಲೆಯಾಧಾರಿಸಿದ ಕಥೆ. ಕೋಲಾರದ ಬಳಿಯ ಒಂದು ವಂಶದ ಕೊಡೆಯನ್ನು ಉಳಿಸುವ ಸಲುವಾಗಿ ಅಲ್ಲಿನ ಮೂಲದೇವತೆ ನಿಜಕ್ಕೂ ಬೆಂಕಿ ಇಲ್ಲದೆ ಹಾಲನ್ನು ಉಕ್ಕಿಸಿದಳೆ? ಕೋಟಿಗಾನಹಳ್ಳಿಯ ಮೂಲಪುರುಷ ಕೋಟೆಗಣ್ಣ ಸುಮಾರು ಐದಾರು ಶತಮಾನಗಳ ಹಿಂದೆ ಇಲ್ಲೇ ನೆಲೆಸಿದಾತ. ಒಮ್ಮೆ ಕಾಡಿನಲ್ಲಿ ಬಿಡಾರ ಹೂಡಿದ, ತನ್ನ ಮಗುವಿಗೆ ಬಿಸಿ ಹಾಲು ಬೇಕಾಗಿತ್ತು. ಮಳೆ ಬಂದಿದ್ದ ಕಾರಣ ಬೆಂಕಿ ಹತ್ತಲಿಲ್ಲ ಆದರೆ ಅಲ್ಲಿನ ಪವಾಡ ನಡೆಯಿತು. ಬೆಂಕಿ ಇಲ್ಲದೆ ಹಾಲುಕ್ಕಿ, ಹಾಲನ್ನು ಮಗುವಿಗೆ ನೀಡಿದ ಶಕ್ತಿಯೇ ಹಾಲುಕ್ಕಮ್ಮ ದೇವತೆ.

ಪಾಲುಕ್ಕಮ್ಮ ಪವಾಡ ನಿಜವೇ ಎಂದು ನಿರೂಪಕರು ವೈಜ್ಞಾನಿಕ ಆಧಾರ ಹುಡುಕಿದರೂ ಮಾಹಿತಿ ಸಿಗುವುದಿಲ್ಲ ಸ್ಥಳೀಯ ಹಿರಿಯರಿಂದ ಪಾಲುಕ್ಕಮ್ಮನ ಚರಿತ್ರೆ ಹಿನ್ನೆಲೆ ತಿಳಿಯುತ್ತದೆ. ಮೂರ್ತಿಯ ಬಿರುಕು ನಲ್ಲಿದ್ದ ತಾಳೆಗರಿಯಲ್ಲಿ ದೊರೆತ ಮಾಹಿತಿಯಿಂದ ಪಾಲುಕ್ಕಮ್ಮನ ನೈಜ ಸಂಗತಿ ದೊರೆಯುತ್ತದೆ.

ಬೆಂಕಿ ಇಲ್ಲದೆ ಹಾಲು ಉಕ್ಕಿಸಿದ ಪವಾಡವು ಇದು ಸತ್ಯವಲ್ಲ, ಕೋಟೆಗಣ್ಣನ ವಂಶದ ಕುಡಿಯನ್ನು ಉಳಿಸಿದ್ದು ಕಾಡಿನ ಬಿಡಾರದಲ್ಲಿ ತಂಗಿದ್ದ ಅಕ್ಕಮ್ಮ ಎಂಬ ಮಹಿಳೆ ಆತನ ವಂಶದ ಕುಡಿಯನ್ನು ಹುಲಿಯ ದಾಳಿಯಿಂದ ರಕ್ಷಿಸಿ ಮಗುವಿಗೆ ತನ್ನೆದೆಯ ಹಾಲು ನೀಡಿ ಪೋಷಿಸಿದಳು. ಆ ಮಗುವಿನ ತಾಯಿ ಅಕ್ಕಮ್ಮ ನಮ್ಮ ಕುಲದೇವತೆ ನಮ್ಮ ರಕ್ಷಕಳು ಎಂದು ದೈವೀರೂಪ ಕೊಟ್ಟಳು. ಆ ಹೆಸರೇ ಮುಂದೆ ಪಾಲುಕ್ಕಮ್ಮನಾಗಿ ಬೆಳೆದ ದೇವತೆ ನಿರೂಪಕರಿಗೆ ನೈಜ ಕತೆ ದೊರೆಯುತ್ತದೆ. ಚರಿತ್ರೆ ಮರು ನಿರೂಪಿಸುತ್ತ ಜನರ ನಂಬಿಕೆಯಲ್ಲಿರುವುದೇ ವಾಸ್ತವ ಎನ್ನುವಂತೆ ಹೇಳಿದಾಗ ಅದರ ಆಚೆಗೂ ಸತ್ಯ ಇರುತ್ತದೆ, ಇರಬಹುದು ಅಂತೆಯೇ ಒಂದೇ ಸಂಗತಿ ಹಲವಾರು ಸಾಧ್ಯತೆ ಹೊಂದುವ ಅವಕಾಶವಿರುತ್ತದೆ ಎಂಬುದನ್ನು ಈ ಕಥನ ಸಾರುತ್ತದೆ.

**ಮರಳ ತೆರೆಗಳೊಳಗೆ**

ಒಂದು ಕಾಲದಲ್ಲಿ ಹೊಯ್ಸಳರ ಆರ್ಥಿಕ ಹಾಗೂ ಧಾರ್ಮಿಕ ಕೇಂದ್ರವಾಗಿದ್ದ ತಲಕಾಡು ನಗರ ಆಲಮೇಲಮ್ಮನ ಶಾಪದಿಂದಾಗಿ ಮರಳಿನಿಂದ ತುಂಬಿಕೊಂಡಿದೆ. ಮೈಸೂರು ಅರಸರನ್ನು ಆಕೆಯ ಶಾಪ ತಟ್ಟಿದ್ದು ಎಷ್ಟು ಸತ್ಯ ಎಂಬುದನ್ನು ಮರಳ ತೆರೆಗಳೊಳಗೆ ಎಂಬ ಕತೆಯಲ್ಲಿ ಗೋಚರಿಸದ ಚಾರಿತ್ರಿಕ ಸಂಗತಿಗಳನ್ನು ನಿರೂಪಿಸುತ್ತಾರೆ.

***ತಲಕಾಡು ಮರಳಾಯಿತು ನನ್ನ ದೊರೆಗೆ***
***ಮಾಲಂಗಿ ಮಡುವಾಗಲಿ ನನಗೆ***
***ದೇವರೇ, ವಂಶವೇ ಇಲ್ಲವಲ್ಲ ರಾಯರಿಗೆ***

ಎನ್ನುವ ಮಾತು, ಅಲಮೇಲಮ್ಮನ ಗಂಡ ರಂಗರಾಯ ಬೆನ್ನುಫಣಿ ರೋಗಕ್ಕೆ ತುತ್ತಾಗಿ ತಲಕಾಡಿನಲ್ಲಿ ಮರಣ ಹೊಂದುತ್ತಾನೆ. ಅಲಮೇಲಮ್ಮ ರಾಯರ ರೋಗ ವಾಸಿಗೆ ಅಡ ಇಟ್ಟಿದ್ದ ಒಡವೆಗಳು ಮೈಸೂರು ಅರಸರಿಗೆ ಸಂಬಂಧಿಸಿದ್ದು ತಮಗೆ ಒಪ್ಪಿಸಬೇಕಂದಾಗ ಶೆಟ್ಟಿ ಮರಳಿ ಕೊಡುವುದಿಲ್ಲ, ತಮ್ಮ ವಂಶಕ್ಕೆ ದಕ್ಕೆ ಬರಬಾರದೆಂದು ಮಾಲಂಗಿ ಮಗುವಿನಲ್ಲಿ ಪ್ರಾಣ ತ್ಯಾಗ ಮಾಡಿದಳೆಂಬ ಸುದ್ದಿಯನ್ನ ತಿರುಚಿ ಬೇರೆ ಹಬ್ಬಿಸಿದ ನಮ್ಮ ವಂಶಕ್ಕೆ ಮಕ್ಕಳಿಲ್ಲವಲ್ಲ ಎಂದಿದ್ದನ್ನು ಈ ಸಾಲುಗಳನ್ನ ಶೆಟ್ಟಿ,

ಜನರು ಕ್ರಮೇಣವಾಗಿ ಅವರ ಬಾಯಲ್ಲಿ ತಿರುಚಿ ಈ ರೀತಿಯಾಗುತ್ತದೆ.

***ತಲಕಾಡು ಮರುಳಾಗಲಿ***
***ಮಾಲಂಗಿ ಮಡುವಾಗಲಿ***
***ರಾಜರ ವಂಶಕ್ಕೆ ಮಕ್ಕಳಿಲ್ಲದಾಗಲಿ***

ಎನ್ನುವ ಸುದ್ದಿ ಹಬ್ಬುತ್ತದೆ. ಈ ಮೇಲಿನ ವಾಕ್ಯಗಳನ್ನ ಗಮನಿಸಿದಾಗ ಅವು ಶಾಪದ ವಾಕ್ಯದಂತಿಲ್ಲ ಎಂದು ಗಿರಿಜರವರು ತಿಳಿಸಿದರು. ಆಲಮೇಲಮ್ಮನ ಕತೆಯನ್ನು ಕನಕಜ್ಜಿಯು ಅವಳ ದುರಂತ ಕಥೆಯನ್ನು ಹೇಳುತ್ತಾರೆ. ತಲಕಾಡು ಮರಳಾಗುವುದಕ್ಕೂ ಕೆಲವೊಂದು ವೈಜ್ಞಾನಿಕ ಆಧಾರಗಳನ್ನು, ಮೈಸೂರು ಯಾವ್ಯಾವ ರಾಜರಿಗೆ ಮಕ್ಕಳಾಗಿರುವ ಮಾಹಿತಿಯನ್ನು ಕೊಟ್ಟು ಸಾಭೀತು ಪಡಿಸುತ್ತಾರೆ. ಆಲಮೇಲಮ್ಮನ ಶಾಪವೂ ಚರಿತ್ರೆಯಲ್ಲಿ ಎಷ್ಟು ಸತ್ಯ, ಅಸತ್ಯ, ವಾಸ್ತವ, ಅವಾಸ್ತವಗಳೇನು ಎಂಬುದನ್ನು ನೈಜ, ಮೌಖಿಕ ಸಂಗತಿಗಳನ್ನ ಮೂಲಕ ಚರಿತ್ರೆಯ ಗ್ರಹಿಕೆಯನ್ನು ಮರು ನಿರೂಪಿಸುತ್ತಾರೆ.

ಹೀಗೆ ಪುರಾಣದೊಳಗೆ ಹೂತು ಹೋತುಗಿರುವ ಸಂಗತಿಗಳನ್ನು ಸತ್ಯದ ನೆಲೆಯಲ್ಲಿ ಶೋಧಿಸುವುದರ ಮೂಲಕ ಹೊಸ ಚರಿತ್ರೆಯನ್ನು ಕಟ್ಟುತ್ತಾರೆ. ಇವರ ಬಹಳಷ್ಟು ಕತೆಗಳು ನೈಜ ಘಟನೆಗಳ ಚರ್ಚೆಯ ಫಲಗಳು ಹಾಗೂ ಗೋಚರ ವಸ್ತುಗಳು, ಕತೆಗಳಿಗೆ ಆಧಾರವಾಗಿವೆ. ಅವುಗಳಲ್ಲಿ ಸತ್ಯ ಮತ್ತು ಕಲ್ಪನೆಯಲ್ಲಿ ಸ್ವಾಭಾವಿಕವಾಗಿ ಬೆರೆತಿವೆ. ಚರಿತ್ರೆಯಲ್ಲಿ ಅಡಗಿದ ಸಂಗತಿಗಳನ್ನು ಹೊರತೆಗೆದು ಇವತ್ತಿನ ಸಂದರ್ಭಕ್ಕೆ ಅನ್ವಯಿಸಿ ಭವಿಷ್ಯದ ಬದುಕನ್ನು ಕಲಾತ್ಮಕವಾಗಿ ರೂಪಿಸುವಲ್ಲಿ, ಚರಿತ್ರೆಯೊಡನೆ ಅನುಸಂಧಾನಗೊಳಿಸುವ ಯತ್ನಗಳು ಸೃಜನಶೀಲ ಬರಹವನ್ನು ಗಣೇಶಯ್ಯನವರ ಕಥೆಗಳಲ್ಲಿ ಹೊಸ ಸಾಧ್ಯತೆಗಳನ್ನ ಕಾಣಬಹುದು.

**ಪರಾಮರ್ಶನ ಗ್ರಂಥಗಳು**


- ಬಸವರಾಜ ಸಾದರ. (2019). *ಇಪ್ಪತ್ತನೆಯ ಶತಮಾನದ ಕನ್ನಡ ಘಟ್ಟಗಳು.* ಕರ್ನಾಟಕ ವಿದ್ಯಾವರ್ಧಕ ಸಂಘ.
- ಗಣೇಶಯ್ಯ, ಕೆ. ಎನ್. (2022). *ಪದ್ಮಪಾಣಿ–ಕಥಾ ಸಂಕಲನ.* ಅಂಕಿತ ಪುಸ್ತಕ ಪ್ರಕಾಶನ.
- ತಿಪ್ಪೇಸ್ವಾಮಿ ಜಿ.ಆರ್. (ಸಂ.). (2021). *ಆಧುನಿಕ ಕಥನ ಸಾಹಿತ್ಯ ಚರಿತ್ರೆ ಸಂಪುಟ–4: ಸಣ್ಣಕಥೆ.* ಕನ್ನಡ ಸಾಹಿತ್ಯ ಪರಿಷತ್.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 94-97
Bi-Monthly, Peer-Reviewed, Open Access, Indexed Journal

I S S N: 2583-3510
SIRDF
JOURNALS
editor@srujani.in
www.srujani.in

# ಅಮರೇಶ ನುಗಡೋಣಿಯವರ 'ತಮಂಧದ ಕೇಡು' ಸಣ್ಣಕಥೆ: ಭಾಷಾ ವೈಶಿಷ್ಟ್ಯತೆ

**ಸಂತೋಷಕುಮಾರ್ ಬಿ. ಪಿ**
ಸಂಶೋಧನಾ ವಿದ್ಯಾರ್ಥಿ, ಕನ್ನಡ ಅಧ್ಯಯನ ಮತ್ತು ಸಂಶೋಧನಾ ಕೇಂದ್ರ, ದಾವಣಗೆರೆ ವಿಶ್ವವಿದ್ಯಾನಿಲಯ, ದಾವಣಗೆರೆ.

***Abstract:***
*ಸಣ್ಣಕಥೆಯು ಆಧುನಿಕ ಸಾಹಿತ್ಯದ ಒಂದು ಮುಖ್ಯ ಪ್ರಕಾರವಾಗಿದ್ದು. ಆಧುನಿಕ ಕನ್ನಡ ಸಾಹಿತ್ಯವನ್ನು ಪ್ರವೇಶಿಸಿದ ಕಾವ್ಯ, ಕಾದಂಬರಿ, ನಾಟಕ ಪ್ರಬಂಧ ಇನ್ನೂ ಮೊದಲಾದ ಸಾಹಿತ್ಯವಾಹಿನಿಗಳಂತೆ ಸಣ್ಣಕಥೆಯೂ ಕೂಡ ಒಂದು ಪ್ರಕಾರವಾಗಿದೆ. ಆಧುನಿಕ ಸಣ್ಣಕಥೆಯು ಪಶ್ಚಿಮದ 'ಖುಂಆಡಿಣ ಖಣಂಆಡಿಥಿ'ಗೆ ಸಂವಾದಿಯಾಗಿದ್ದು ಆಧುನಿಕ ಬದುಕಿನ ಹತ್ತು ಹಲವಾರು ಸಂಕೀರ್ಣ ಸಮಸ್ಯೆ ಮತ್ತು ಸವಾಲುಗಳನ್ನು ಎದುರಿಸುವ ನಿಟ್ಟಿನಲ್ಲಿ ಕಲಾತ್ಮಕವಾಗಿ ಒಂದು ಸತ್ವಪೂರ್ಣ ಸಾಹಿತ್ಯವಾಹಿನಿಯಾಗಿ ಆಧುನಿಕ ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಮಹತ್ವವನ್ನು ಪಡೆದುಕೊಂಡಿದೆ. ಕಥೆ ಹೇಳುವ ಪ್ರಕ್ರಿಯೆ ಇತ್ತೀಚಿನದಲ್ಲ. ಕಥೆ ಹೇಳುವ, ಕೇಳುವ ಪ್ರವೃತ್ತಿಯು ಅನಾದಿ ಕಾಲದಿಂದಲೂ ಬೆಳೆದುಕೊಂಡು ಬಂದಿದೆ. ಈ ಪ್ರವೃತ್ತಿಯು ಜನಪದರ ಕಾಲದಿಂದಲೂ ಬೆಳೆದುಕೊಂಡು ಕ್ರಮೇಣ ನಿರ್ದಿಷ್ಟ ಚೌಕಟ್ಟಿನ ನೆಲೆಗಟ್ಟನ್ನು ಕಂಡುಕೊಂಡು ಲಕ್ಷಣವನ್ನೊಳಗೊಂಡ ಸಾಹಿತ್ಯಾರೂಪವಾಗಿದೆ.*

***Keywords:*** *ಕನ್ನಡ ಸಾಹಿತ್ಯ, ಕಥನ ಸಾಹಿತ್ಯ, ಅಮರೇಶ ನುಗಡೋಣಿ, ಸಣ್ಣಕಥೆ, ತಮಂಧದ ಕೇಡು.*

**ಪೀಠಿಕೆ**

ಆಧುನಿಕ ಕನ್ನಡ ಸಾಹಿತ್ಯದ ಇನ್ನಿತರ ಪ್ರಕಾರಗಳಂತೆ ಆಧುನಿಕ ಬದುಕಿನ ಸಂಕೀರ್ಣ ಸಮಸ್ಯೆ ಮತ್ತು ಸವಾಲುಗಳನ್ನು ತನ್ನದೇ ಆದಂತಹ ಸ್ವರೂಪದ ಮಿತಿಯಲ್ಲಿ ಪಾತ್ರ, ಘಟನೆ, ಸಂಕ್ಷಿಪ್ತತೆ, ಏಕಾಗ್ರತೆ, ಸೃಜನಾತ್ಮಕ ದೃಷ್ಟಿಗಳಿಂದ ಒಂದು ಸತ್ವಯುತ ಮಾಧ್ಯಮವನ್ನಾಗಿ ಗುರುತಿಸಿ ಕೊಂಡಿತು. ಅಲ್ಲದೆ ಎಲ್ಲಕಿಂತ ಹೆಚ್ಚಾಗಿ ಹೊಸಗನ್ನಡ ಸಾಹಿತ್ಯ ಹುಟ್ಟಿದುದೇ ಭಾವಗೀತೆ ಹಾಗೂ ಸಣ್ಣಕಥೆಗಳಲ್ಲಿ ವಾಸ್ತವ ಜೀವನ ಚಿತ್ರಣ ಮತ್ತು ಸರಳ ಸುಂದರ ಗದ್ಯ ಶೈಲಿ ಸಣ್ಣಕಥೆಯಲ್ಲಿ ಸಾಧಿತವಾಯಿತು.

ನಿರ್ದಿಷ್ಟ ವ್ಯಾಪ್ತಿಯ ಗದ್ಯ ಎಂದು ಸಣ್ಣಕಥೆಯನ್ನು ಗಮನಿಸುವ ಸಂದರ್ಭದಲ್ಲಿ ಈ ಬಗೆಯ ರಚನೆಗಳು ಸಾವಿರಾರು ವರ್ಷಗಳಿಂತಲೂ ಮೊದಲೇ ಇತ್ತು ಎಂಬುದು ಗಮನಕ್ಕೆ ಬರುತ್ತದೆ. ಈ ಸಣ್ಣಕಥೆ ಎಂಬುದು ಸೃಷ್ಟಿಯಾಗಿ ಬಳಕೆಗೆ ಬರುವುದಕ್ಕೂ ಮೊದಲೇ ಅನೇಕ ಭಾಷೆಗಳಲ್ಲಿಯೂ ಸಣ್ಣಕಥೆಗಳಿದ್ದವು ಎಂಬುದನ್ನು ಗಮನಿಸಬಹುದು.

'ತಮಂಧದ ಕೇಡು' ಕಥೆಯ ಕಥೆಗಾರರಾದ ಡಾ.ಅಮರೇಶ ನುಗಡೋಣಿಯವರು ಕಥೆಗಾರರೆಂದೇ ಪ್ರಸಿದ್ಧರು. ರಾಯಚೂರು ಜಿಲ್ಲೆಯ ಸಿರವಾರ ತಾಲೂಕಿನ ನುಗಡೋಣಿಯವರಾದ ಇವರು ಅನೇಕ ಕಥೆ, ಕಾದಂಬರಿಗಳನ್ನು ಮತ್ತು ವಿಮರ್ಶೆ, ಸಂಶೋಧನಾ ಪುಸ್ತಕಗಳನ್ನು ಬರೆದಿದ್ದಾರೆ. ಇವರ ಎಲ್ಲ ಕಥೆಗಳಲ್ಲಿ ವಿಶಿಷ್ಟ ಭಾಷಾ ಬಳಕೆಯನ್ನು

***Please cite this article as:*** ಸಂತೋಷಕುಮಾರ್. ಬಿ. ಪಿ. (2024). ಅಮರೇಶ ನುಗಡೋಣಿಯವರ 'ತಮಂಧದ ಕೇಡು' ಸಣ್ಣಕಥೆ: ಭಾಷಾ ವೈಶಿಷ್ಟ್ಯತೆ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 94–97

ನೋಡಬಹುದು. ತಮ್ಮ ಅನೇಕ ಕಥೆ, ಕಾದಂಬರಿಗಳಲ್ಲಿ ಹೈದರಾಬಾದ್ ಕರ್ನಾಟಕದ ಭಾಷೆಯನ್ನು ಬಳಸಿದ್ದಾರೆ.

ತಮಂಧದ ಕೇಡು ಕಥೆಯಲ್ಲಿ ಅವರು ಹುಟ್ಟಿ ಬೆಳೆದ ನುಗಡೋಣಿ, ಸಿರವಾರ, ರಾಯಚೂರು ಸುತ್ತಮುತ್ತಲಿನ ಗ್ರಾಮ್ಯ ಭಾಷೆಯನ್ನು ಬಳಸಿದ್ದಾರೆ. ಕಥೆಗಾರರಿಗೆ ತಮ್ಮದೇ ಆದ ಭಾಷಾ ಬಳಕೆಯ ಹಿಡಿತವಿರುವ ಕಾರಣ ವಿಶಿಷ್ಟ ಕಥೆಗಾರ ಎಂದು ತಮ್ಮನ್ನು ಗುರುತಿಸಿಕೊಂಡಿರುತ್ತಾರೆ. ಈ ಕಥೆಯಲ್ಲಿನ ಪಾತ್ರಗಳು ಸಂದರ್ಭೋಚಿತವಾಗಿ ಮಾತನಾಡುವಂತಹ ಗ್ರಾಮೀಣ ಭಾಷಾನೆಲೆಗಳನ್ನು ನಾವು ಗುರುತಿಸಬಹುದು.

ಪ್ರಮಾಣಬದ್ಧ ಭಾಷೆ, ಪ್ರಾದೇಶಿಕ ಭಾಷೆ, ಪ್ರತಿಭಟನೆ ಭಾಷೆ, ಪ್ರತಿರೋಧದ ಭಾಷೆ, ಸಾಂಕೇತಿಕ ಭಾಷೆ, ಮೇಲು ವರ್ಗದ ಭಾಷೆ, ಕೆಳ ವರ್ಗದ ಭಾಷೆ, ಕಾವ್ಯತ್ಮಕ ಭಾಷೆ, ಇಂತಹ ಅನೇಕ ಭಾಷಾ ಬಳಕೆಯ ವೈಶಿಷ್ಟ್ಯಗಳನ್ನು ಗುರುತಿಸಬಹುದು. ಈ ಹಿನ್ನೆಲೆಯಲ್ಲಿ ಸಾಮಾಜಿಕ ಸಂರಚನೆಯಲ್ಲಿ ಅನೇಕ ಜನಸಾಮಾನ್ಯರ ಬದುಕು ಭಾವನೆಗಳ ನೆಲೆಗಳನ್ನು ಕಥೆಗಾರರು ಕಟ್ಟಿಕೊಟ್ಟಿರುವ ಬಗೆಯನ್ನು ನೋಡಬಹುದಾಗಿದೆ.

ಪ್ರಾದೇಶಿಕ ಭಾಷೆಯನ್ನು ಕಥೆಗಾರರು ವಿಶಿಷ್ಟವಾಗಿ ತಮಂಧದ ಕೇಡು ಕಥೆಯಲ್ಲಿ ಬಳಸಿದ್ದಾರೆ. ಉದಾಹರಣೆ ಎದರು ಮನೆ ಬಸಣ್ಣ ದುರುಗನನ್ನು ಮಾತಾಡಿಸುವ ಸಂದರ್ಭದಲ್ಲಿ 'ಬಾ ದುರ್ಗಾಣ್ಣ, ಬಾ ಬಾ! ದುಮದರಿ ಎದ್ದಾದ' ಅಂದು ಕರೆದ ಬಸಪ್ಪ.

ಹೌದು! ಹೆಂಗಾದ ನೋಡು, ಮುಂದಿದ್ರ ನಿನ್ನ ಮನೆ ಕಾಣವಲ್ದು!' ಅನಕಾಂತ ಬಂದು ಕುಂತ. ಹಾಯ್.... ಇದು ಬೇಸಾದ್ನೋಡು!

ಮಳೆಬಾರ್ದಿದ್ದಕ್ಕೆ ಅದರ ಬಗ್ಗೆ ಮಾತಾಡುತ್ತಿರುವಾಗ, ಈ ವರ್ಷ ಮಾರ್ಲಾಮಿ ಬಂದು ಹೋದರೂ ಮಳೆ ಬಂದಿಲ್ಲ. ಅದೇನೋ ತೂಪನ್ ಬಂದಾದಂಥ ಮಳೆ ಬರಾಕ ಅತ್ಯಾದ.

ಅನುಕರಣಾವ್ಯಯಗಳನ್ನು ಪ್ರಸ್ತುತ ಕಥೆಯಲ್ಲಿ ಅನೇಕ ಸಂದರ್ಭಗಳಲ್ಲಿ ಬಳಸಿದ್ದಾರೆ ಉದಾಹರಣೆ ದುರುಗನಿಗೆ ಎಚ್ಚರವಾಯಿತು! ಕಣ್ಣು ತೆರೆತಿದ್ದಂಗೆ ಎದೆ ಡವ ಡವ ಬಡ್ಕಂತಿತ್ತು! ಮೈಯೆಲ್ಲಾ ಬೆವತು ಹೋಯಿತು! ಹಂಗೆ ಮಕ್ಕಂಡು ಕನಸಿನ ಬೆನ್ನು ಹತ್ತಿದ....

ದುರುಗ ಮನೆಯ ಮುಂದೆ ಕುಳಿತಿರುವಾಗ ಕವಕವಕ ಶಬ್ದ ಮಾಡುವ ಸಾವಿರಾರು ಹಕ್ಕಿ ಪಕ್ಷಿಗಳ ದನಿ ದುರುಗನ ಕಿವಿ ತುಂಬಿತು. ತಮಂಧದ ಕೇಡು ಕಥೆಯಲ್ಲಿ ಕಥೆಗಾರರು ಡವಡವ, ಚಟಚಟ, ಕವಕವ ಮುಂತಾದ ಅನುಕಾರಣಾವ್ಯಗಳನ್ನು ಬಳಸಿದ್ದಾರೆ.

ಪ್ರಸ್ತುತ ಕಥೆಯಲ್ಲಿ ದ್ವಿರುಕ್ತಿಗಳನ್ನು ಕಥೆಗಾರರು ಬಳಸಿಕೊಂಡಿದ್ದಾರೆ. ಜನಸಾಮಾನ್ಯರ ಮಾತುಗಳಲ್ಲಿ ಬಳಸುವುದು ಸರ್ವೇ ಸಾಮಾನ್ಯ. ಉದಾಹರಣೆ ದುರುಗನ ಮನೆಯ ಬಳಿ ಇದ್ದ ಮರಗಳನ್ನು ಕಡಿದಾಗ ದುರುಗನು ಸಂಕಟಪಡುತ್ತಿದ್ದ ಅದನ್ನು ಕಂಡ ಶಾಂತಗೌಡ ದುರುಗನಿಗೆ ಪರಿಪರಿಯಾಗಿ ಸಮಾಧಾನ ಮಾಡಲು ನೋಡಿದ.

ಕನಸಿನಲ್ಲಿ ಭಯಗೊಂಡಿದ್ದ ದುರಗ ಇದು ಕಣ್ಣ ಮುಂದ ನಡೆದಂಗ ನೆನಪಾಗಿದ್ದೆ ತಡ ತಿರುಗಾ ದಿಗ್ಗನೆದ್ದು ಕುಂತು ಶಿವಾಶಿವಾ ಅಂದ.

ದುರುಗನಿಗೆ ಚಳಿಯಾಗಿ ಮೈಯೆಲ್ಲಾ ತೋದಂಗನಿಸಿತ್ತು ಮೈಸವರಿಕೊಂಡು....ನೀರು ನೀರು.. ಎಂದ.

ನೆನೆನೆನೆಸಿಕೊಂಡು ಯಪ್ಪಾ ಎಲ್ಲಾ ನಿನ್ನ ಆಟ ಬಲ್ಲವರ್ಯಾರು ಅಂತ ಅಂದುಕೊಂಡು ಕೈಮುಕ್ಕಂಡ. ಮುಂತಾದ ಸನ್ನಿವೇಶಗಳಲ್ಲಿ ಪರಿಪರಿ, ಶಿವಾಶಿವಾ, ನೆನೆನೆನೆ, ನೀರುನೀರು ಇತ್ಯಾದಿ ದ್ವಿರುಕ್ತಿಗಳನ್ನು ಪಡೆಯಬಹುದಾಗಿದೆ.

ಮೇಲ್ವರ್ಗದವರ ಭಾಷೆಯನ್ನು ಅಮರೇಶ ನುಗಡೋಣಿಯವರು ತಮಂಧದ ಕೇಡು ಕಥೆಯಲ್ಲಿ ಬಳಸಿರುವುದು ವೈಶಿಷ್ಟ್ಯತೆಯಿಂದ ಕೂಡಿದೆ.

ಉದಾಹರಣೆಗೆ ಶಾಂತಗೌಡ ಒಳಗ ಬರುವಾಗ ಎತ್ತಿನಂಕಣ ದಾಟುವಾಗ ಹೆಂಡೆ ತುಳುದುಬುಟ್ಟಿ!

ಥುಥ್.... ಲೇ ಎತ್ತಿನ ದಾರಿಯಾಗ ಮಲಗಸ್ಟೇಡಿ ಅಂತ ಹೇಳಿದ್ರು ಕೇಳ್ತಿರೆನೋ? ಎಂದು ಎತ್ತುಗಳಿಗೆ ಚಟಪಟ ಹೊಡೆದುಬಿಟ್ಟ. ಮತ್ತೆ ಎದ್ದು ಎತ್ತುಗಳಿಗೆ ಮೇವಾಕ್ರಲೇ.... ಎಂದನು ಶಾಂತಗೌಡ.

ಚೆನ್ನನ ಬಗ್ಗೆ ಮಾತನಾಡುತ್ತಾ ಭೂದೆಣ್ಣ ಹೀಗೆ ಹೇಳುತ್ತಾನೆ.

ಹೌದು.. ಜಾಸ್ತಿ ಓದ್ಕೋಂಡ್ರೆ ತಲೆ ಬರಾಬರಿ ಇರಂಗಿಲ್ಲ ಅಂತಾರಲ್ಲ ಅದು ಸುಳ್ಳಲ್ಲ. ಈ ನನ್ನ ಮಕ್ಕಳನ್ನ ಎಲ್ಲಿಟ್ಟಿರ್ಬೇಕೋ ಅಲ್ಲೇ ಇಟ್ಟಿರಬೇಕು..!

ಶಾಂತಗೌಡ ಚೆನ್ನನ ಬಗ್ಗೆ ದುರುಗನ ಹತ್ತಿರ ಮಾತನಾಡುತ್ತಾ, ನೀನಿದ್ದಂಗ ನಿನ್ನ ಮಗ ಇಲ್ಲ. ದುರುಗಾ... ಅವನು ಉಂಡು ಗಂಗಳದಾಗ ಹುಚ್ಚೆ ವೈಯಾಕ ನಿಂತಾನ! ನೀನು ಅವನಿಗೆ ಹೇಳು. ನಿನ್ನ ಮಾರೆ ನೋಡಿ ಸುಮ್ಮನೀ! ಇಲ್ಲಾಂದ್ರೆ ಅಂತ ಹುರಿದು ಮಾತನಾಡಿದ ಶಾಂತಗೌಡ.

ಅದೇ ರೀತಿಯಾಗಿ ಕೆಳವರ್ಗದವರ ಭಾಷಾ ವೈಶಿಷ್ಟ್ಯವನ್ನು ನೋಡಬಹುದು.

ಭಾಷೆ ಮನೆಯ ವಿಚಾರ ಬಂದಾಗ ದುರುಗ ಶಾಂತಗೌಡನಿಗೆ ಹೀಗೆ ಹೇಳುತ್ತಾನೆ 'ಯಪ್ಪಾ ನನಗೆ ಒಂದು ಮನೆ ಅಂತ ಇರಲಿ ಜೆಡ್ಡು ಜಾಪತ್ತು ಬಂದ್ರಾ...

ದುರಗ ಮಾತನಾಡುತ್ತ ಚೆನ್ನಮಲ್ಲನ ವಿಚಾರದಲ್ಲಿ ಕೋಪಗೊಂಡಿದ್ದ ಶಾಂತಗೌಡನ ಬಳಿ,

ಯಪ್ಪಾ, ಆ ನಂಬಿಕೆಯನ್ನು ಕಳಕಳ್ಳದಾಗ ಬದುಕಿರಬೇಕಂತಾನ ಈ ನಿಮ್ಮ ಮಾದ್ಗ!

ಬಸವ, ತಂದೆ ಯಾರನ್ನು ಇಡ್ಕೊಬೇಕು ಯಾರ್ನ ಬಿಡಬೇಕು ಒಂದು ಕಳ್ಳು...! ಒಂದು ಅನ್ನ ಅನಕಂಡ.

ಪ್ರತಿಭಟನೆಯ ಭಾಷೆಯನ್ನು ಸಹ ಈ ಕಥೆಯಲ್ಲಿ ಗುರುತಿಸಬಹುದು.

ಚೆನ್ನ ಜೀತಪದ್ಧತಿಯ ವಿರುದ್ಧ ಈ ರೀತಿ ಹೇಳುತ್ತಾನೆ.

ನಮ್ಮಪ್ಪ ದುಡಿದಾನ ನಮ್ಮವ್ವ ದುಡಿದಾಳ ಮಾರಿಕೊಂಡರ ಅವರಿಬ್ಬರು ಶಾಂತಗೌಡಗ.

ಕನಸಿನಲ್ಲಿ ಮಗ ಚೆನ್ನನು ರಕ್ತದಲ್ಲಿ ಬಿದ್ದಂತೆ ಭಾಸವಾಗಿ ಶಾಂತಗೌಡನನ್ನು ಕಂಡು ಕೆಂಡ ಮಂಡಲವಾಗಿ ಅಬ್ಬರಿಸಿ, ಗೌಡ.... ನಿನ್ನ ಗುಣ ತೋರಿಸಿಬಿಟ್ಟಿ... ಅಂತ ಗೌಡನ ಮೇಲೆ ಹಾರಿಬಿಟ್ಟ!

ಮಗನಿಗೆ ಅಕ್ಕಮ್ಮನ ಆಸೆ ಬಿಟ್ಟುಬಿಡು ಎಂದು ದುರುಗ ಹೇಳಿದಾಗ ಅದಕ್ಕೆ ಚೆನ್ನ ಏನಾಗ್ತದೋ ಆಗ್ಲಿ ನೋಡತೀನಿ ಆದದ್ದೇ ಆಗೋದು ಅಂದು ಮರು ಮಾತಾನಾಡುತ್ತಾನೆ.... ಚೆನ್ನ

ಪ್ರಸ್ತುತ ಕಥೆಯಲ್ಲಿ ನಿರೂಪಕರು ಅನೇಕ ಸಂಖ್ಯಾವಾಚಕ ಪದಗಳನ್ನು ಬಳಸಿರುವುದು ಕಾಣಬಹುದು. ಉದಾಹರಣೆಗೆ ಮನೆಯ ಮುಂದೆ ಕುಳಿತಿರುವಾಗ ಕವಕವಕ ಪಾಠ ಮಾಡುವ ಸಾವಿರಾರು ಹಕ್ಕಿ ಪಕ್ಷಿಗಳ ದನಿ ದುರುಗನ ಕಿವಿ ತುಂಬಿತು.

ಎರಡು ಮರಗಳನ್ನು ಕಡಿದು ನಾಕು ವರ್ಷಗಳಾಗಿದ್ದವು...

ಮರಗಳನ್ನು ಕಡಿದ ನಂತರ ಸಾಬನು ಎರಡು ಎತ್ತಿನ ಬಂಡಿ ಅಂತೇಳಿ ಶಾಂತಗೌಡನಿಗೆ ಹೇಳುವಾಗ ಸಂಖ್ಯಾ ವಾಚಕಗಳನ್ನು ಬಳಸಲಾಗಿದೆ.

ತೂಪನ್, ಲಾರಿ, ಚಿಮಣಿ, ಖಬರು, ಮುಂತಾದ ಅನ್ಯದೇಶಿಯ ಪದಗಳನ್ನ ಬಳಸಿದ್ದಾರೆ.

ಅಮರೇಶ ನುಡಗೋಣಿಯವರು ಕಥೆಯ ಭಾಷೆಯ ಸೊಗಸನ್ನು ಹೆಚ್ಚಿಸುವುದಕ್ಕಾಗಿ ಅಲ್ಲಿನ ಗ್ರಾಮ್ಯ ಭಾಷೆಯನ್ನು ಕಣ್ಣಿಗೆ ಕಟ್ಟುವಂತೆ ಬಳಸಿದ್ದಾರೆ. ಇವರ ಕಥೆ, ಕಾದಂಬರಿಗಳ ಬರಹಗಳಲ್ಲಿ ಜನ ಸಾಮಾನ್ಯರ ಭಾಷೆಯನ್ನು ಅಚ್ಚುಕಟ್ಟಾದ ರೀತಿಯಲ್ಲಿ ಬಳಸಿದ್ದಾರೆ. ಆಡು ನುಡಿಯಿಂದ ಕೂಡಿರುವ ಸಂಭಾಷಣೆಗಳು ಓದುವವರ ಮನಸ್ಸನ್ನು ಸುಲಭವಾಗಿ ಮುಟ್ಟಲು ಅಮರೇಶ ನುಗಡೋಣಿಯವರು ಹೈದರಾಬಾದ್ ಕರ್ನಾಟಕದ ಭಾಷೆಯನ್ನು ಸಮರ್ಪಕವಾಗಿ ಬಳಸುವುದರಲ್ಲಿ ಯಶಸ್ವಿಯಾಗುತ್ತಾರೆ. ತಮಂಥದ ಕೇಡು ಕಥೆಯಲ್ಲಿನ ಸಾಮಾಜಿಕ ವ್ಯವಸ್ಥೆಯನ್ನು ಅವರ ಸಂಕಟ, ನೋವು, ಪ್ರತಿಭಟನೆ, ಅಳಲುಗಳನ್ನು, ಪ್ರತಿರೋಧವನ್ನು

ಮೇಲ್ವರ್ಗದವರ ದರ್ಪವನ್ನು ಹಾಗೆಯೇ ಶಿಕ್ಷಣದಿಂದ ಬದಲಾಗುವ ಆಧುನಿಕ ದೃಷ್ಟಿಕೋನವನ್ನು ಕಣ್ಣಿಗೆ ಕಟ್ಟುವಂತೆ ಕಥೆಯ ಭಾಷಾಬಳಕೆಯನ್ನು ಕಥೆಗಾರರು ಮಾಡಿದ್ದಾರೆ.

**ಆಕರ ಗ್ರಂಥ**


- ಅಮರೇಶ ನುಗಡೋಣಿ. (2016). *ತಮಂಧದ ಕೇಡು.* ಪಲ್ಲವ ಪ್ರಕಾಶನ.


**ಪರಾಮರ್ಶನ ಗ್ರಂಥಗಳು.**


- ರಾಮಚಂದ್ರ ಶರ್ಮ. (ಸಂ.) (1999). *ಸಮಕಾಲೀನ ಕನ್ನಡ ಸಣ್ಣ ಕಥೆಗಳು.* ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ.
- ಅಂಗಡಿ. ಎಸ್.ಎಸ್. (2010). *ಶಂಬಾ ಜೋಶಿ ಭಾಷಿಕ ವಿವೇಚನೆ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 98-103
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಶರಣ ಸಾಹಿತ್ಯದಲ್ಲಿ ವೈಚಾರಿಕ ನೆಲೆಯ ಹೊಸ ಸಾಧ್ಯತೆಗಳು

**ಶ್ವೇತಶ್ರೀ ಎನ್**
ಸಂಶೋಧನಾ ವಿದ್ಯಾರ್ಥಿ, ಕನ್ನಡ ವಿಭಾಗ, ಲಲಿತ ಕಲಾ ಕಾಲೇಜು, ಮಾನಸ ಗಂಗೋತ್ರಿ, ಮೈಸೂರು.

***Abstract:***
*ಕನ್ನಡ ಸಾಹಿತ್ಯ ಪರಂಪರೆಯಲ್ಲಿ ವಚನ ಸಾಹಿತ್ಯದ ಘಟ್ಟ ಅಮೂಲ್ಯವಾದುದು. ಇದು ಹನ್ನೆರಡನೆಯ ಶತಮಾನದಲ್ಲಿ ನಡೆದ ಧಾರ್ಮಿಕ, ಸಾಮಾಜಿಕ ಮತ್ತು ವೈಚಾರಿಕ ಹಿನ್ನೆಲೆಯ ಚಳುವಳಿಯಾಗಿದೆ. ಈ ಚಳುವಳಿಯ ಮೂಲಾಧಾರವಾಗಿ ನಮಗೆ ವಚನ ಸಾಹಿತ್ಯ ಲಭ್ಯವಿದೆ. ಸಾಮಾಜಿಕ ನೀತಿ, ಜೀವನ ಮೌಲ್ಯ ವೈಚಾರಿಕತೆಯನ್ನು ಕ್ರಿಯಾತ್ಮಕ ನೆಲೆಯಲ್ಲಿ ಕಟ್ಟಿಕೊಡುವ ವಚನಗಳು ಸಮಾಜವಾದಿ ಆಶಯದ ಪ್ರತಿಬಿಂಬಗಳು. ವಚನ ಕ್ರಾಂತಿ ಕೇವಲ ಧಾರ್ಮಿಕ ನೆಲೆಗಷ್ಟೆ ಸೀಮಿತವಾಗದೇ ಅಂದಿನ ಸಮಾಜದ ಸಮಸ್ಯೆಗಳಿಗೆ ಪರಿಣಾಮಕಾರಿಯಾಗಿ ಸ್ಪಂದಿಸಿತು ಎನ್ನುವುದು ಗಮನಾರ್ಹ ಸಂಗತಿ. ವರ್ಣ–ವರ್ಗ–ಲಿಂಗಭೇದಗಳನ್ನು ಹೋಗಲಾಡಿಸಿ ನವಸಮಾಜ ನಿರ್ಮಾಣಕ್ಕೆ ಶ್ರಮಿಸಿತು. ಅಲ್ಲದೆ ಕಾಯಕ, ದಾಸೋಹ, ಸಮಾನತೆ, ಭಾವಶುದ್ಧಿ ಮುಂತಾದ ವಿಶಿಷ್ಟ ಗುಣಗಳನ್ನು ವಚನ ಚಳುವಳಿ ಪ್ರತಿನಿಧಿಸಿತು.*

**Keywords:** *ಶರಣ ಸಾಹಿತ್ಯ, ವಚನ ಸಾಹಿತ್ಯ, ಕ್ರಾಂತಿಕಾರಿ ಚಳುವಳಿ, ಸಮಾಜವಾದಿ, ವೈಚಾರಿಕ ನೆಲೆ.*

## ಪೀಠಿಕೆ

***"ವೇದವೆಂಬುದು ಓದಿನ ಮಾತು***
***ಶಾಸ್ತ್ರವೆಂಬುದು ಸಂತೆಯ ಸುದ್ದಿ***
***ಪುರಾಣವೆಂಬುದು ಪುಂಡರಗೋಷ್ಠಿ***
***ತರ್ಕವೆಂಬುದು ತಗರನ ಹೋರಟೆ***
***ಭಕ್ತಿ ಎಂಬುದು ತೋರಿ ಉಂಬುವ ಲಾಭ***
***ಗುಹೇಶ್ವರನೆಂಬುದು ಮೀರಿದ ಘನವು"***

(ಅಲ್ಲಮ ಪ್ರಭು)

ಈ ಮೇಲ್ಕಂಡ ವಚನದಂತೆ ಮೌಢ್ಯಕ್ಕೆ ಬಲಿಯಾಗದೇ ವೈಚಾರಿಕತೆಯ ಕಡೆಗೆ ತಿರುಗಿ ಎಂದು ಸಮಾಜವನ್ನು ಶರಣರು ಎಚ್ಚರಿಸಿದರು. ಸಮಾಜವು ಮೌಢ್ಯವೆಂಬ ಕತ್ತಲೆಯಿಂದ ಕೂಡಿರುವಾಗ, ಹೊಸ ಚೈತನ್ಯದ ಶಕ್ತಿಯಾಗಿ ಸಮಾಜದ ಮೆಲೆ ಪ್ರಭಾವ ಬೀರಿದ್ದು ವಚನ ಚಳುವಳಿ. ಸಮಾಜದಲ್ಲಿ ಪ್ರಚಲಿತವಿದ್ದ ಅನೇಕ ವಿಧಿ ವಿಧಾನಗಳು, ಆಚರಣೆಗಳು ಸಾಮಾನ್ಯ ಜನತೆಯನ್ನು ಮೂಲೆಗುಂಪು ಮಾಡಿತ್ತು. ಪ್ರತಿಯೊಬ್ಬ ಸಾಮಾನ್ಯನೂ ಅರ್ಥೈಸುವ ಮೌಲ್ಯಗಳುಳ್ಳ ಹೊಸ ಸಾತ್ವಿಕ ಧರ್ಮ ರೂಪುಗೊಂಡಿತು. ಈ ಮೂಲಕ ಶರಣರು ಸಮಾಜವನ್ನು ಒಂದೆಡೆ ಬೆಸೆಯುವ ಸಾಮಾಜಿಕ, ಧಾರ್ಮಿಕ ಮೌಲ್ಯಗಳನ್ನು ಕೊಡುಗೆಯಾಗಿ ನೀಡಿದರು. ಇದರ ಫಲವಾಗಿ ದಲಿತರು, ಶೋಷಿತರು, ಕೆಳವರ್ಗದವರು, ಸ್ತ್ರೀಯರೂ ಸಹ ಸಾಮಾಜಿಕ ಸಮಾನತೆಯನ್ನು ಪಡೆದುದೂ ಸಾಮಾನ್ಯ ಜನವರ್ಗಕ್ಕೆ ಲಭಿಸಿದ ಜಯ ಎಂದೇ ಭಾವಿಸಬಹುದು.

ವಚನ ಚಳುವಳಿ ಪ್ರಾಚೀನ ವೈದಿಕ ಸಂಸ್ಕೃತಿಯಲ್ಲಿ ಅಡಕವಾಗಿದ್ದ ಶೋಷಣೆ, ಮೂಢನಂಬಿಕೆ, ಜಾತಿ

***Please cite this article as:*** ಶ್ವೇತಶ್ರೀ ಎನ್. (2024). ಶರಣ ಸಾಹಿತ್ಯದಲ್ಲಿ ವೈಚಾರಿಕ ನೆಲೆಯ ಹೊಸ ಸಾಧ್ಯತೆಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವಲಪ್‌ಮೆಂಟ್,* 3(3), 98–103

ವ್ಯವಸ್ಥೆಯ ವಿರುದ್ಧವಾಗಿತ್ತು. ಪ್ರಸ್ತುತ ಸಮಾಜದಲ್ಲಿ ಇವು ಇಂದಿಗೂ ಸಾಮಾಜಿಕ ತೊಡಕುಗಳಾಗಿಯೇ ಮುಂದುವರೆದಿವೆ. ಹೀಗೆ ಸಾಮಾಜಿಕ ಅಶಾಂತಿಯನ್ನು ಹೋಗಲಾಡಿಸಲು ವಚನಕಾರರು ಸೂಚಿಸಿರುವ ವೈಜ್ಞಾನಿಕ, ವೈಚಾರಿಕ ನಿಲುವು ಮತ್ತು ವಾಸ್ತವತೆಯ ಅರಿವನ್ನು ವಚನಗಳ ಮೂಲಕ ತಿಳಿಯಬಹುದು.

*"Religious leaders should make every effort to have religion to keep step with advances in Scientific and moral understanding."*[1] – ಜೋಸೆ

ಸಮಾಜದ ಅಂಧಶ್ರದ್ಧೆಯ ವಿರುದ್ಧ ಕಟುವಾದ ವಿಮರ್ಶೆಯೊಂದಿಗೆ, ಕೆಲವು ವೇಳೆ ವಿಡಂಬನೆ ವೈಜ್ಞಾನಿಕ, ವೈಚಾರಿಕ ವಿಚಾರಗಳು ಮೂಡಿವೆ ಎಂದು ಹೇಳಬಹುದು. ಯಾವ ಯಾವ ಜಡ್ಡುಗಟ್ಟಿದ ಕಾಲಗಳಲ್ಲಿ ಸೂಕ್ಷ್ಮಸಂವೇದನೆ ಉಳ್ಳವರೂ, ವಿಚಾರವಂತರೂ, ಆದ ಕೆಲವೇ ಜನ ತಮ್ಮ ಸುತ್ತಣ ಪರಿಸ್ಥಿತಿಯನ್ನು ಮತ್ತು ಅದನ್ನು ನಿಯಂತ್ರಿಸಿಕೊಂಡು ಬಂದ ರೂಢಿಗತವಾದ ವ್ಯವಸ್ಥೆ ಹಾಗೂ ಸಂಪ್ರದಾಯಗಳನ್ನು ಪ್ರಶ್ನಿಸಲು ತೊಡಗುತ್ತಾರೋ, ಪ್ರತಿಭಟಿಸಲು ತೊಡಗುತ್ತಾರೋ ಅಂತಹ ಕಾಲಗಳನ್ನು 'ಸಂಕ್ರಮಣ ಕಾಲ'ಗಳೆಂದು ಕರೆಯಬಹುದು. ಕನ್ನಡ ನಾಡಿನ ಸಾಂಸ್ಕೃತಿಕ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನದ ಇಂತಹ ಸಂಕ್ರಮಣ ಕಾಲ. ಈ ಸಂಕ್ರಮಣದ ಮುಖ್ಯ ಪ್ರೇರಣೆ ವೀರಶೈವ ಧರ್ಮ; ಅದರ ಪರಿಣಾಮ ಒಂದು ಧಾರ್ಮಿಕ, ಸಾಮಾಜಿಕ, ಸಾಹಿತ್ಯಿಕ ಮತ್ತು ವೈಚಾರಿಕ ವಿಚಾರ ಕ್ರಾಂತಿಯಾಗಿದೆ.

ವಚನಕಾರರನ್ನು ಶರಣರೆಂದು ಕರೆದು ಅವರ ಛಲ, ಸ್ವಭಾವ, ರೀತಿ–ನೀತಿ, ವ್ಯಕ್ತಿತ್ವವನ್ನು ರೂಪಿಸಲಾಗಿದೆ. ಶರಣರು ನಿಷ್ಕಾಮಿಗಳು, ನಿಬೋಧಕರು, ನಿರ್ದೇಹಿಗಳು, ಅನಿಮಿಷರು, ನೀತಿವಂತರು,ಉಪಮಾತೀತರು, ಕಾಲಕರ್ಮರಹಿತರು, ನಿರಾಕರರು, ಕಾರ್ಯನಿಷ್ಠರು, ನಿಃಶಂಕರು, ಮಹಾಮಹಿಮರು, ನಿರ್ಭೀತರು, ಛಲವಂತರು, ಹಿರಿದು–ಕಿರಿದೆಂಬ ಭೇದವಿಲ್ಲದವರು, ಸರ್ವಸ್ವಾತಂತ್ರ್ಯ, ಸಮಾನತೆ, ಬಂಧುತ್ವ ಭಾವವುಳ್ಳವರು, ನ್ಯಾಯನಿಷ್ಠರು. ಹೀಗೆ ಬಹುವಿಧ ವ್ಯಕ್ತಿತ್ವವುಳ್ಳವರು ಎಂದು ಶರಣಪ್ರಭೆ ಕಾದಂಬರಿಯ ಮುಖಾಂತರ ಸ್ವಾಮಿ ಬಿ.ಎಸ್. ಅವರು ಶರಣರ ವೈಚಾರಿಕ ವ್ಯಕ್ತಿತ್ವವನ್ನು ಗುರುತಿಸಿದ್ದಾರೆ.

ವಚನಕ್ರಾಂತಿಯ ಬಗ್ಗೆ ತಿಳಿಸುತ್ತಾ ಈ ಕ್ರಾಂತಿಯಲ್ಲಿ ರಭಸ, ಆವೇಶ, ಪ್ರತಿಪಕ್ಷಗಳ ದಮನ ಮನೋಭಾವ, ಸ್ವಮತ ಪ್ರತಿಷ್ಠೆ, ಅನ್ಯಮತ ವಿಡಂಬನೆ ಇತ್ಯಾದಿಗಳು ಇರುವುದು ತೀರಾ ಸಹಜ. ಆದರೆ ಈ ಕ್ರಾಂತಿಗೆ ಅತ್ಯಂತ ಅಗತ್ಯವಾದ ವಿಚಾರ ಮೂಲವಾದ ವಿಮರ್ಶೆ ಪ್ರಜ್ಞೆಯೊಂದು ವಿಶೇಷ ಪ್ರಮಾಣದಲ್ಲಿ ಹಿನ್ನೆಲೆಯಾಗಿತ್ತೆಂಬ ಅಂಶವನ್ನು ಇಂದು ನಾವು ಮರೆಯಬಾರದು.

ಮುಂದುವರೆದು ದೇವರೆಂದರೆ ವಚನಕಾರರ ಪ್ರಕಾರ, ಪುರಾಣೋಕ್ತವಾದ ವರ್ಣರಂಜಿತವಾದ ಮೂರ್ತಿ ಅಲ್ಲ; ಅವರ ಪ್ರಕಾರ ಅದೊಂದು, ನಿರಾಕಾರಕ್ಕೆ ಸಮೀಪವಾದ ಸಂಕೇತ, ಅದನ್ನೇ ಲಿಂಗವೆಂದು ಕರೆದರು. ಅದನ್ನು ವ್ಯಕ್ತಿ ಶರೀರದ ಮೇಲೆ ಧರಿಸಬೇಕು ಎಂದರು. ಲಿಂಗದ ಮೇಲೆ ಇರುವಂಥ ಈ ಲಿಂಗವೇ ದೇವರ ಸಾಂಕೇತಿಕ ರೂಪ ಎಂದು ಹೇಳುವುದರ ಮೂಲಕ ಭಕ್ತನಿಗೆ ಬಹಿರಂಗಕ್ಕೆ ದೇವಸ್ಥಾನಕ್ಕೆ ಹೋಗಬೇಕಾದ ಅಗತ್ಯವಿಲ್ಲದಂತೆ ಮಾಡಿದರು. ಈ ಲಿಂಗ ಇರುವ ಸ್ಥಳವೇ ದೇವಾಲಯ. ಅಂದರೆ ಭಕ್ತನಾದವನ 'ದೇಹವೇ ದೇಗುಲ' ಎಂಬ ವೈಚಾರಿಕ ಕಲ್ಪನೆಯನ್ನು ಕೊಟ್ಟರು.

***'ಕೊಲುವವನೆ ಮಾದಿಗ***
***ಹೊಲಸು ತಿಂಬವನೆ ಹೊಲೆಯ***
***ಸಕಲ ಜೀವಾತ್ಮರಿಗೆ ಲೇಸನೆ ಬಯಸುವ***
***ಕೂಡಲ ಸಂಗನ ಶರಣರೇ ಕುಲಜರು'***

ಹೊಸ ಘೋಷಣೆ, ಹಿಂಸೆಯ ಹೊಲಸಿನ ಮನೋಭಾವ ಹಾಗೂ ನಡವಳಿಕೆಯಿಂದ ಒಬ್ಬ ಕೀಳಾಗುತ್ತಾನೆಯೇ ಹೊರತು ಅವನ ಹುಟ್ಟಿನಿಂದ

ಅಲ್ಲ. ಸಕಲ ಜೀವಾತ್ಮರಿಗೆ ಲೇಸನೆ ಬಯಸುವ ಉದಾರತೆ ಹಾಗೂ ಉದಾತ್ತ ನಡವಳಿಕೆಯುಳ್ಳವನೇ ನಿಜವಾದ 'ಕುಲಜ'ನು ಎಂದು ಹೇಳಿರುವರು. ಈ ಹೊಸ ವಿಚಾರ, ಪರಂಪರಾಗತವಾದ ಜಾತಿಯ ಕಲ್ಪನೆಯನ್ನು ವಿರೋಧಿಸುತ್ತದೆ.

ಒಮ್ಮೆ ಹೊಲದಲ್ಲಿ ಉಳುವಾಗ ಎತ್ತುಗಳಿಗೆ ಹೊಡೆಯುತ್ತಿದ್ದರು. ಅದನ್ನು ಗಮನಿಸಿದ ಹೊಲೇರ ಭರಮ 'ಅಪ್ಪಾರ ದಿನಾಲೂ ಮೂಕ ಪ್ರಾಣಿಗೆ ಎಷ್ಟು ಹೊಡೆತೀರಿ? ಬಿಸಿಲ ಬ್ಯಾಗೆ, ಬೇರೆ. ಅವುಗಳ ಬಗ್ಗೆ ಕನಿಕರ ಇರಬೇಕ್ರಪ್ಪಾ ಅದೇ ಮನುಷ್ಯರಿಗೆ ಬಿದ್ರೆ, ಹ್ಯಾಗೆ ನೋಡಿ' ಎಂದಾಗ, ವೀರಯ್ಯ, "ಭರಮಣ್ಣಾ ನೀನು ದಡ್ಡನಲ್ಲ, ದೊಡ್ಡವರು ಅನ್ನಿಸಿಕೊಂಡ ನಾವು ನೀನು ಹೊಲೆಯನಲ್ಲ, ಮೂಕ ಪ್ರಾಣಿ ಹಿಂಸೆ, ಮಾಡೋ ನಾವು ಹೊಲೆಯರು" ಎಂದನು. 'ಮಾನವತೆಯೇ ನಿಜವಾದ ಧರ್ಮ' ಎಂದು ಹೇಳಬಹುದು.

ವಚನಕಾರರು ಸಂಕ್ರಮಣ ಕಾಲದ ಸಮಾಜದಲ್ಲಿನ ಮೇಲು-ಕೀಳುಗಳನ್ನು ಉಗ್ರವಾಗಿ ಖಂಡಿಸಿದರು. ಸಮಾನತೆಯು ಪ್ರತಿಪಾದಿಸಲು ಹೋರಾಡಿದರು. ಅದರೊಂದಿಗೆ 'ಕಾಯಕವೇ ಕೈಲಾಸ' ಇದು ಸಮಾಜದಲ್ಲಿ ಸಮಾನತೆಯ ತತ್ವದೊಂದಿಗೆ ಕೂತು ಉಣ್ಣದೇ ಬೆವರು ಸುರಿಸಿ ದುಡಿಯುವುದನ್ನು ಪ್ರತಿಪಾದಿಸಿದರು. ದುಡಿದೇ ಬದುಕಬೇಕು ಎಂದರು. ಹೀಗೆ ವಚನಗಳನ್ನು ಸಂವಿಧಾನದ ಆಶಯವಾದ ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವದ ಭಾವನೆ ಹಾಗೂ ಜಾತ್ಯಾತೀತ ಧರ್ಮಾತೀತ, ಸಮಾಜವಾದಿ ಮನೋಧರ್ಮದ ಹಿನ್ನೆಲೆಯಲ್ಲಿ ಅಧ್ಯಯನ ನಡೆಬಹುದಾಗಿದೆ.

> ***"ಹಬ್ಬಕ್ಕೆ ತಂದ ಹರಕೆಯ ಕುರಿ ತೋರಣಕ್ಕೆ ತಂದ ತಳಿರ ಮೇಯಿತ್ತ.***
> ***ಕೊಂದಹರೆಂಬುದನರಿಯದೆ ಬೆಂದ ಒಡ ಹೊರೆವುತ್ತಲದೆ***
> ***ಕೊಂದವರುಳಿವರೆ ಕೂಡಲ ಸಂಗಮದೇವಾ"***[3]

ಈ ವಚನದ ಮೂಲಕ ಪ್ರಾಣಿಬಲಿ ಇತ್ತೆಂಬುದರ ಸೂಚನೆಯಿದೆ. ಹಬ್ಬದ ಸಂದರ್ಭದಲ್ಲಿ ನಡೆಯುವ ಬಲಿ ಆಚರಣೆಗೆ ಒಳಪಡುವ ಏನು ತಿಳಿಯದ ಮುಗ್ಧ ಪ್ರಾಣಿಯನ್ನು ನೋಡಿ ಬಸವಣ್ಣ ಅನುಕಂಪ ವ್ಯಕ್ತಪಡಿಸುತ್ತಾರೆ. ತನ್ನ ತೃಪ್ತಿಗೆಂದು ಬಲಿಕೊಡುವವರನ್ನು ಖಂಡಿಸುತ್ತಾ, ಕೊಂದವರುಳಿವರೆ ಎಂದು ಆಕ್ರೋಶಭರಿತರಾಗುತ್ತಾರೆ. ಮನುಷ್ಯನ ಈ ರೀತಿಯ ಕ್ರೂರ ವರ್ತನೆ ಆತನಿಗೆ ಮಾರಕವೇ ಎಂದು ಹೇಳುವರು.

ನಾಲ್ವತ್ವಾಡದಲ್ಲಿ ಮಾರಿಬೇನೆ (ಕಾಲರಾ) ಬಂದು ಹಲವರು ಸಾಯುವರು. ಊರ ಜನರು ಆಲೋಚನೆ ಮಾಡಿ ಮಾರಿದೇವಿಗೆ ಕುರಿ, ಕೋಣ ಬಲಿಕೊಟ್ಟರೆ ಸರಿ ಹೋಗುತ್ತದೆ ಎಂದು ಊರವರೆಲ್ಲ ಸಭೆ ಸೇರಿ ತೀರ್ಮಾನ ಕೈಗೊಳ್ಳುವರು. ಗೌಡರಲ್ಲಿ "ನೀವು ಜಾತ್ರೆ ಮಾಡಿರಿ ವೈಭವದಿಂದ ಆದರೆ ಕೋಣನ ಬಲಿಬೇಡ ಪ್ರಾಣಿ ಹಿಂಸೆ ಸಲ್ಲದು, ಎಲ್ಲ ಜೀವರಾಶಿಗಳನ್ನು ನಿನ್ನಂತೆ ಕಾಣಬೇಕು"[4] ಎಂದು ಹೇಳುವರು.

12ನೇ ಶತಮಾನದಲ್ಲಯೇ ಪ್ರಾಣಿಬಲಿ, ನರಬಲಿಗಳು ನಿಷೇಧಕ್ಕೆ ಒಳಪಟ್ಟಿದ್ದವು. ಈ ಹಿನ್ನೆಲೆಯಲ್ಲಿ ವಚನಗಳನ್ನು ಕರ್ನಾಟಕ ಸರ್ಕಾರ ಹೊರಡಿಸಿರುವ ಮೌಢ್ಯ ನಿಷೇಧ ಕಾಯ್ದೆ 2020ರ ಹಿನ್ನೆಲೆಯಲ್ಲಿ ಅಧ್ಯಯನ ಕೈಗೊಳ್ಳಬಹುದು.

ಸ್ತ್ರೀಯರು ತಪಸ್ಸಿಗೆ ವಿಘ್ನಕಾರಿಯಲ್ಲ ಮತ್ತು ಅವರಿಗೆ ಆಧ್ಯಾತ್ಮಿಕ ಸಾಧನೆಯಲ್ಲಿ ಗುರಿ ತಲುಪುವುದಷ್ಟೇ ಸ್ವಾತಂತ್ರ್ಯವಿದೆ ಎನ್ನುವುದು ವೈದಿಕ, ಜೈನ, ಬೌದ್ಧ ಮತಗಳು ಸ್ತ್ರೀಯರು ಪುರುಷರಷ್ಟೆ ಸಮಾನರು ಎಂದು ಒಪ್ಪುವುದಿಲ್ಲ.

ವೈದಿಕ ಧರ್ಮದ ಪ್ರಕಾರ ಮೊದಲು ಸ್ತ್ರೀಯರಿಗೆ ಪ್ರವೇಶವನ್ನು ನಿರಾಕರಿಸಿತು. ಜೈನ ಧರ್ಮದ ಪ್ರಕಾರ ಸ್ತ್ರೀಮೋಕ್ಷಕ್ಕೆ ಅರ್ಹಳಲ್ಲ. ಒಂದು ವೇಳೆ ಮೋಕ್ಷವನ್ನು ಪಡೆಯಬೇಕಾದರೆ ಆಕೆ ಮುಂದಿನ ಭವಗಳಲ್ಲಿ ಗಂಡಾಗಿ ಹುಟ್ಟಬೇಕು. ಸ್ತ್ರೀಯರನ್ನು ಕುರಿತು ವಿಚಾರ ಹೀಗಿರುವಾಗ ವಚನಕಾರರು ಹೆಣ್ಣು, ಗಂಡು ಎಂಬ ವರ್ಗ ಸಂಘರ್ಷದ ವಿರುದ್ಧವಾಗಿ,

*"ಮೊಲೆ ಮೂಡಿ ಬಂದರೆ ಹೆಣ್ಣೆಂಬರು*
*ಗಡ್ಡ ಮೀಸೆ ಬಂದರೆ ಗಂಡೆಂಬರು*
*ನಡುವೆ ಸುಳಿವಾತ್ಮನು ಗಂಡೂ ಅಲ್ಲ*
*ಹೆಣ್ಣು ಅಲ್ಲ; ಕಾಣಾ ರಾಮನಾಥ"*

ಇದು ಜೇಡರ ದಾಸಿಮಯ್ಯನ ತಾರ್ಕಿಕವಾಗಿದೆ.

ಹೆಣ್ಣು ಎಂದರೆ ಮಾಯೆ, ಮೋಹ ಇತ್ಯಾದಿ ಅಪಸ್ವರಗಳು ಪಾರಂಪಾರಿಕವಾಗಿ ಬಂದವುಗಳು, ಮಾಯೆ ಎಂದರೆ ಹೆಣ್ಣು ಎಂಬುದು ಅಸಂಬದ್ಧವಾಗಿದೆ.

*ಅಲ್ಲಮರು, 'ಹೆಣ್ಣು ಮಾಯೆಯೆಂಬುದು ಹೆಣ್ಣು ಮಾಯೆ ಅಲ್ಲ*
*ಮಣ್ಣು ಮಾಯೆ ಎಂಬರು, ಮಣ್ಣು ಮಾಯೆ ಅಲ್ಲ*
*ಹೊನ್ನು ಮಾಯೆ ಎಂಬರು, ಹೊನ್ನು ಮಾಯೆ ಅಲ್ಲ*
*ಮನದ ಮುಂದಣ ಆಸೆಯೆ ಮಾಯೆ ಕಾಣಾ ಗುಹೇಶ್ವರ!'*

ಹಿಂದಿನ ಎಲ್ಲಾ ಧರ್ಮಗಳು ಹೆಣ್ಣನ್ನು ಮುಖ್ಯವಾಗಿ ಹೇಳುತ್ತಾ ಬಂದಿವೆ. ಆದರೆ ಗಂಡಿಗೆ ಹೆಣ್ಣು ಮಾಯೆ ಆಗುವುದಾದರೆ ಹೆಣ್ಣಿಗೂ ಗಂಡೂ ಯಾಕೆ ಮಾಯೆ ಅಲ್ಲ? ಎಂದು ದಿಟ್ಟತನದಿಂದ ಹೇಳಿದವಳು ಅಕ್ಕಮಹಾದೇವಿ,

*ಗಂಡಿಗೆ ಹೆಣ್ಣಾಗಿ ಕಾಡಿತ್ತು ಮಾಯೆ*
*ಹೆಣ್ಣಿಂಗೆ ಗಂಡಾಗಿ ಕಾಡಿತ್ತು ಮಾಯೆ*

ಇಲ್ಲಿ ಪ್ರತಿಭಟನೆಯ ಧ್ವನಿ ಕೇಳದಿದ್ದರೂ ಸಹ ವಿಚಾರ ಮಾತ್ರ ಸ್ಫುಟವಾಗಿದೆ. ಉಪನಿಷತ್ ಕಾಲದಲ್ಲಿದ್ದು, ಅನಂತರ ಕಳೆದುಕೊಂಡ ಸ್ಥಾನಮಾನಗಳನ್ನು ಮತ್ತೆ ಸ್ತ್ರೀಯರಿಗೆ ದೊರಕಿಸಿಕೊಟ್ಟದ್ದು, ವಚನಕಾರರ ಹೆಗ್ಗಳಿಕೆಯಾಗಿದೆ. ವಚನಕಾರರಿಂದಾಗಿ ಸ್ತ್ರೀಗೆ ಧಾರ್ಮಿಕ ಸ್ವಾತಂತ್ರ್ಯ ಲಭಿಸಿತು. ಸರಿಸಮಾನವಾಗಿ ಗೋಷ್ಠಿಗಳಲ್ಲಿ ಕಾಲಾನು ವಿಚಾರ ವಿನಿಮಯ ಮಾಡುವ ಸಮಾನತೆ ಲಭಿಸಿತು.

ಹೀಗೆ ಸ್ತ್ರೀಗಿದ್ದ ವರ್ಗ ಸಂಘರ್ಷ ಅಸಮಾನತೆಯನ್ನು ವಚನಕ್ರಾಂತಿಯ ಕಾಲದಲ್ಲಿ ತೊಡೆಯಲಾಯಿತು ಎಂದು ಹೇಳಬಹುದು.

ಈ ನಿಟ್ಟಿನಲ್ಲಿ ಪ್ರಸ್ತುತ ಸಮಾಜದಲ್ಲಿರುವ ಸ್ತ್ರೀ–ಪುರುಷ ಅಸಮಾನತೆಯ ಕುರಿತು ವೇಶ್ಯಾವೃತ್ತಿ, ಹೆಣ್ಣು ಭ್ರೂಣ ಹತ್ತಯೆ, ಲೈಂಗಿಕ ವಿಕೃತಿ, ದೇವದಾಸಿ ಪದ್ಧತಿ, ಅಂಧಾಚರಣೆ, ಶೋಷಣೆ, ದೌರ್ಜನ್ಯಗಳ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಬಹುದಾಗಿದೆ.

ಪುರಾಣಗಳಲ್ಲಿಂದರೂ ಭಾರತೀಯ ಆಚರಣೆಯಲ್ಲಿ ನಾನಾ ಬಗೆಯ ಯಜ್ಞಗಳ ವಿವರಗಳನ್ನು ಒಳಗೊಂಡ ವೇದಗಳು, ಯಜ್ಞ ಕಾರ್ಯಕ್ಕೆ ಬಳಸುವ ಪೂಜಾ ಪರಿಕರಗಳನ್ನು ಹೇಳಿವೆ. ಮಹರ್ಷಿ ಕಾತ್ಯಾಯನರು ತಮ್ಮ ಧರ್ಮಸೂತ್ರದಲ್ಲಿ ಯಜ್ಞದಲ್ಲಿ ಬಳಕೆಗೊಳ್ಳುತ್ತಿದ್ದ ಪ್ರಮುಖ ದ್ರವ್ಯಗಳಾವುವು ಎಂಬುದನ್ನು ಹೇಳಿದ್ದಾರೆ.

*'ತೈಲಂ ದಧಿ ಪಯ: ಸೋಮೋ ಯವಾಗೂ ರೋದನಂ ಘೃತಮ್।*
*ತಂಡಲಾ: ಫಲಮಾಪಶ್ಚದಶ ದ್ರವ್ಯಾಸ್ಯಾಕಾಮತಃ'॥*

ಅಂದರೆ ತೈಲ, ಮೊಸರು, ಹಾಲು, ಸೋಮಲತೆ, ಗಂಜಿ, ಅನ್ನ, ತುಪ್ಪ, ಅಕ್ಕಿ, ಫಲ ಹಾಗೂ ಜಲ ಈ ಹತ್ತು ದ್ರವ್ಯಗಳನ್ನು ದೇವರ ಪ್ರೀತ್ಯಾರ್ಥವಾಗಿ ಯಜ್ಞಗಳಲ್ಲಿ ತ್ಯಾಗ ಮಾಡಬೇಕು. ಈ ಮುಖ್ಯ ವಸ್ತುಗಳು ಪೂಜೆಗೆಂದು ಬಳಕೆಗೊಳ್ಳುತ್ತಿದ್ದವು. ಮಾಂಸ ಮತ್ತು ಸೋಮರಸವನ್ನು ಆಹುತಿಯಾಗಿ ಕೊಡಲಾಗುತ್ತಿತ್ತು. ಜೈನಧರ್ಮವೂ ಈ ಪೂಜಾ ಪದ್ಧತಿಗಳಿಂದ ಹೊರತಾಗಿರಲಿಲ್ಲ. ಪಂಚಾಮೃತಾಭಿಷೇಕ, ಷೋಡಶೋಪಚಾರ, ಅಷ್ಟವಿದಾರ್ಚನೆ ಎಂಬ ಪೂಜಾಪದ್ಧತಿಯನ್ನು ಒಳಗೊಂಡಿತ್ತು. ಉದಾಹರಣೆಗೆ ಶ್ರವಣಬೆಳಗೊಳದಲ್ಲಿ ಬಾಹುಬಲಿ ವಿಗ್ರಹಕ್ಕೆ ನಡೆಯುವ ಮಸ್ತಕಾಭಿಷೇಕ.

ಹೀಗೋಮ್ಮೆ ಶ್ರೀಮಂತನೊಬ್ಬ ಲಿಂಗಕ್ಕೆ ಹಾಲು, ಮೊಸರು, ತುಪ್ಪ ಮುಂತಾದವುಗಳನ್ನು ಅಭಿಷೇಕ ಮಾಡಲು ತಂದುಕೊಟ್ಟ, ಅರ್ಚಕ ಅದನ್ನು ಲಿಂಗಕ್ಕೆ ಸರಿಯುತ್ತಿದ್ದರು.

"ಶರಣರು ವ್ಯರ್ಥವಾಗಿ ಇದನ್ನೆಲ್ಲಾ ಲಿಂಗದ ಮೇಲೆ ಸುರಿದು ಹಾಳು ಮಾಡಬೇಡಿ. ಸಕಲ

ಜೀವಿಗಳ ಆಹಾರವಿದು. ಅನ್ನವೇ ಪರಬ್ರಹ್ಮ"[6] ಎಂದರು. ಶರಣರು ಡಾಂಭಿಕತೆಗೆ ಬೆಲೆ ಕೊಡದೇ ನಿರ್ಮಲವಾದ ನಿಜಭಕ್ತಿಗೆ ಪ್ರಾಶಸ್ತ್ಯ ನೀಡಿದರು.

ಈ ನಿಟ್ಟಿನಲ್ಲಿ ಮೌಢ್ಯಾಚರಣೆಗಳಿಂದುಂಟಾದ ಆರ್ಥಿಕ, ಸಾಮಾಜಿಕ ನಷ್ಟವನ್ನು ತಡೆಯಲು ಜಾರಿಗೊಳಿಸಿದ ನಿಯಮಗಳಲ್ಲಿ ಕಾಯಕ, ದಾಸೋಹಗಳಿಗೆ ಹೆಚ್ಚು ಮಹತ್ವ ನೀಡಿದ್ದಾರೆ. ದೈಹಿಕ ಆಚರಣೆಗಳು, ಮಂತ್ರ ತಂತ್ರ ಸಿದ್ಧಿಗಳು ಯಜ್ಞ ಆಹುತಿಗಳು ಸಮಾಜದಲ್ಲಿ ಉಂಟು ಮಾಡಿದ ಆರ್ಥಿಕ ನಷ್ಟವನ್ನು ತಪ್ಪಿಸಲು ಅಗತ್ಯವಾದ ವೈಚಾರಿಕ ಜ್ಞಾನವನ್ನು ಜನತೆಗೆ ಮನದಟ್ಟು ಮಾಡಿದರೆಂಬುದನ್ನು ಗುರುತಿಸಲಾಗಿದೆ.

ಹೀಗೆ ವಚನಗಳ ಹಿನ್ನೆಲೆಯಲ್ಲಿ ಉತ್ಪಾದನೆ ಮತ್ತು ಹಂಚಿಕೆ, ಬಡತನ, ಆಹಾರ ವ್ಯರ್ಥವಾಗುವುದು, ದೇವರು ಧರ್ಮದ ಹೆಸರಿನಲ್ಲಿ ನಡೆಯುವ ಭ್ರಷ್ಟಾಚಾರದಿಂದ ವ್ಯಕ್ತಿಗತ ಸಂಪತ್ತಿನ ಶೇಖರಣೆ ಈ ನಿಟ್ಟಿನಲ್ಲಿ ಆರ್ಥಿಕ ಮತ್ತು ಸಾಮಾಜಿಕವಾಗಿ ಅಧ್ಯಯನ ಕೈಗೊಳ್ಳಬಹುದಾಗಿದೆ.

ಆತ್ಮೋದ್ಧಾರಕ್ಕಿಂತ ಲೋಕೋದ್ಧಾರಕ್ಕೆ ಹೆಚ್ಚಿನ ಮಹತವವಿತ್ತವರು. ಪ್ರತಿಯೊಬ್ಬ ಮಾನವ ಪ್ರಯತ್ನದಿಂದ ಶರಣನಾಗಬಲ್ಲನೆಂಬುದು ಅವರ ದೃಢ ನಂಬಿಕೆ, ಅವರು ಮಾನವರಂತೆ ಕಂಡರೂ ಅಸಾಮಾನ್ಯರೂ, ಎಲ್ಲ ಮಧ್ಯದಲ್ಲಿದ್ದು, ಸಾಂಸಾರಿಕ ಜೀವನ ಸಾಗಿಸುತ್ತ ಕಾಯಕ, ದಾಸೋಹಗಳಲ್ಲಿ ತೊಡಗಿ, ಶಿವಪೂಜೆ – ಸಮಾಜ ಸೇವೆಯೆಂದು ಬಗೆದು, ಧರ್ಮವನ್ನು ಸರಳೀಕರಿಸಿ, ಸಾಮಾಜೀಕರಣ ಮಾಡಿದವರು. ಮಾನವೀಯ ಮೌಲ್ಯಗಳನ್ನು ಜೀವನದುದ್ದಕ್ಕೂ ಅಳವಡಿಸಿಕೊಂಡು ಬಂದವರು. ಸಂಕೀರ್ಣದತ್ತ, ಜಟಿಲದತ್ತ ಸಾಗಿದ ಜೀವನದ ಗತಿ–ಮತಿಗಳಿಗೆ ಬುದ್ಧಿ ಸಂಪರ್ಕದಿಂದ ದೂರ ಮಾಡಿ, ಹೃದಯ ಸಂಬಂಧ ಕಲ್ಪಿಸಿದವರು ಎಂದು ಶರಣಪ್ರಭೆ ಕಾದಂಬರಿಯ ಮೂಲಕ ಅವರಲ್ಲಿದ್ದ ವೈಚಾರಿಕ ಮನೋಭಾವವನ್ನು ತಿಳಿಯಬಹುದಾಗಿದೆ.

***"ಮರವೇಕೋ ಪರ್ವತವೇಕೋ***
***ಜನವೇಕೋ ನಿರ್ಜನವೇಕೋ***
***ಚಿತ್ತ ಸಮಾಧಾನ ಉಳ್ಳ ಶರಣಂಗೆ"*** [7]

ಇದು ವೈಚಾರಿಕತೆಯ ಪ್ರಶ್ನೆಯಾಗಿದ್ದು, ತಪಸ್ಸಿನ ಹೆಸರಿನಲ್ಲಿ ದೇಹದಂಡನೆ ಎಂಬುದು ಕೇವಲ ಹುತ್ತವನ್ನು ಬಡಿಯುವ ವ್ಯರ್ಥ ಪ್ರಯತ್ನ, ಒಳಗಿನ ವಿಷ ತುಂಬಿಕೊಂಡ ಹಾವು ಇದ್ದ ಹಾಗೇ ಇರುತ್ತದೆ. ಆದುದರಿಂದ ಇದ್ದಲ್ಲೇ ಇದ್ದು ಮನಸ್ಸನ್ನು ಹದಗೊಳಿಸುವುದೇ ನಿಜವಾದ ಸನ್ಯಾಸ, ಆಧ್ಯಾತ್ಮಿಕ ಸಾಧನೆ, ಇದಕ್ಕಾಗಿ ಸಂಸಾರವನ್ನಾಗಲಿ, ಗೃಹಸ್ಥ ಧರ್ಮವನ್ನಾಗಲಿ ಬಿಡಬೇಕಾಗಿಲ್ಲ ಎಂದು ಹೇಳುವರು. ಜೇಡರ ದಾಸಿಮಯ್ಯ 'ಸತಿ–ಪತಿಗಳೊಂದಾದ ಭಕ್ತಿ ಹಿತವಾಗುವುದು ಶಿವಂಗೆ' ಎಂದು ಹೇಳುತ್ತಾನೆ. ವಚನಕಾರರ ಪ್ರಕಾರ ಸನ್ಯಾಸವೆಂದರೆ ಸಂಸಾರಕ್ಕೆ ವಿರುದ್ಧವಾದುದಲ್ಲ ಮತ್ತು ಕಾಡಿಗೆ ಹೋಗಿ ದೇಹ ದಂಡನೆ ಮಾಡಿಕೊಳ್ಳುವುದು ಅಲ್ಲ. ಅದು ಒಂದು ಚಿತ್ತದ ಸಮಾಧಾನ ಸ್ಥಿತಿಯನ್ನು ಸಾಧಿಸುವ ವಿಧಾನ ಎಂದು ತಿಳಿಯಬಹುದಾಗಿದೆ.

***"ವೇದಕ್ಕೆ ಒರೆಯ ಕಟ್ಟುವೆ, ಶಾಸ್ತ್ರಕ್ಕೆ ನಿಗಳವನಿಕ್ಕುವೆ ತರ್ಕದ ಬೆನ್ನ ಭರನೆತ್ತುವೆ, ಆಗಮದ ಮೂಗ ಕೊಯ್ಯುವೆ ನೋಡಯ್ಯ"***
***ಎಂದು ಬಸವಣ್ಣನವರು ಸವಾಲು ಹಾಕಿದರು.***
***"ವೇದ ಶಾಸ್ತ್ರ ಪುರಾಣಗಳೆಂಬ***
***ಕೊಟ್ಟಣವ ಕುಟ್ಟುತ್ತ ನುಚ್ಚು ತೌಡು ಕಾಣಿರೋ"*** [8]

ಎಂದು ಅಕ್ಕಮಹಾದೇವಿ, ಅವುಗಳ ನಿರರ್ಥಕತೆಯನ್ನು ಘೋಷಿಸಿದಳು. 'ವೇದವನೋದಿದರೇನು, ಶಾಸ್ತ್ರವ ಕೇಳಿದರೇನು' ಎಂಬುದೇ ಈ ವಚನಕಾರರ ಮುಖ್ಯ ಧೋರಣೆಯಾಯಿತು. ವೇದೋಕ್ತವಾದ ಹಿಂದೂ ಧರ್ಮ, ತನ್ನ ವರ್ಣ ವ್ಯವಸ್ಥೆಯಿಂದ ವ್ಯಕ್ತಿಗಳಲ್ಲಿ ಶ್ರೇಷ್ಠ ಕನಿಷ್ಠರೆಂಬ ತಾರತಮ್ಯವನ್ನು ಕಲ್ಪಿಸುತ್ತಾ, ಯಜ್ಞ ಯಾಗಾದಿಗಳಿಂದ ಪ್ರಾಣಿವಧೆಯನ್ನು ಸಮರ್ಥಿಸುತ್ತಾ 'ಸರ್ವ ಖಲ್ವಿದಂ ಬ್ರಹ್ಮ' ಎಂದು

ಉದ್ಘೋಷಿಸುವುದು ಎಷ್ಟು ವಿಲಕ್ಷಣ ಎಂದು ವಚನಕಾರರಿಗೆ ತೋರಿರಬಹುದು.

ಅಲ್ಲದೆ ವ್ಯಕ್ತಿಯ ಆಧ್ಯಾತ್ಮಕಾನುಭವ ಎನ್ನುವುದು ವೈಯಕ್ತಿಕ ಸಾಧನೆಯಿಂದ ಶ್ರದ್ಧೆ–ನಿಷ್ಠೆ–ಸ್ವಾರ್ಥ ಪರಿಶೀಲನೆಗಳಿಂದ ಲಭಿಸಿತಕ್ಕದ್ದೇ ಹೊರತು, ವೇದಶಾಸ್ತ್ರಗಳ ಪಠನದಿಂದ ಪರಂಪರಾಗತವಾದ ವಿಚಾರವನ್ನು ನಂಬಿಕೆಗಳನ್ನು ಒಪ್ಪಿಕೊಳ್ಳುವುದರಿಂದ ಬರುವುದಿಲ್ಲ ಎನ್ನುವುದನ್ನು ಇವರು ಕಂಡುಕೊಂಡರು. 'ಅನುಭವ ಅಥವಾ ಆಧ್ಯಾತ್ಮಿಕ ಅನುಭವ ಎನ್ನುವುದು 'ಅಂತರಂಗದ ರತ್ನ ಕಾಣಿರೋ' ಎಂದು ವಚನಕಾರರು ಈ ಅರ್ಥದಲ್ಲಿ ಹೇಳಿದ್ದಾರೆ.

ಒಟ್ಟಾರೆಯಾಗಿ ವಚನ ಸಾಹಿತ್ಯ ಸಮಗ್ರ ವಿಷಯಗಳ ಭಂಡಾರ. ಇದರಲ್ಲಿ ಸಾಮಾಜಿಕ, ಧಾರ್ಮಿಕ, ಸಾಹಿತ್ಯಿಕ, ವೈಚಾರಿಕ, ಆರ್ಥಿಕ ಹೀಗೆ ಹಲವು ಚಿಂತನೆಗಳಿವೆ. ಪ್ರತಿಯೊಂದು ಚಿಂತನೆಯು ವೈಚಾರಿಕ ಮೂಲವಾಗಿದೆ. ಇಲ್ಲಿನ ವೈಚಾರಿಕ ಚಿಂತನೆಗಳು ಆದರ್ಶಮಯವಾಗಿಯೂ ವ್ಯವಹಾರ ಯೋಗ್ಯವಾಗಿಯೂ ಇವೆ. ಸಮಾಜದ ಕ್ಷೋಭೆಗೆ ಕಾರಣವಾದ ಅನಗತ್ಯ ವಿಚಾರಗಳಿಂದ ದೂರವಿರುವಂತೆ ವೈಚಾರಿಕ ಜ್ಞಾನವನ್ನು ಜನತೆಗೆ ಶರಣರು ಮನದಟ್ಟು ಮಾಡಿದರೆಂದು ಗುರುತಿಸಬಹುದಾಗಿದೆ.

**ಕೊನೆಟಿಪ್ಪಣಿಗಳು :**

1. ತಿಪ್ಪೇರುದ್ರಸ್ವಾಮಿ. *ಶರಣರ ಅನುಭವ ಸಾಹಿತ್ಯ,* ಪುಟ.286
2. ಸ್ವಾಮಿ ಬಿ.ಎಸ್. *ಶರಣಪ್ರಭೆ,* ಪುಟ.21
3. ಬಸವರಾಜು ಎಲ್. *ಬಸವಣ್ಣನವರ ವಚನಗಳು.* ಪುಟ. 129
4. ಸ್ವಾಮಿ ಬಿ.ಎಸ್. *ಶರಣಪ್ರಭೆ.* ಪುಟ. 30
5. ಅಮರೇಶ ಯತಗಲ್ (ಸಂ.). *ಸಾರ್ಥಕ ಬದುಕು* (ಸಂಪುಟ 1) ಪುಟ. 531
6. ಸ್ವಾಮಿ ಬಿ.ಎಸ್. *ಪೂರ್ವೋಕ್ತ.* ಪುಟ.38
7. ಅಮರೇಶ ಯತಗಲ್ (ಸಂ.) *ಪೂರ್ವೋಕ್ತ.* (ಸಂಪುಟ 1) ಪುಟ.532
8. *ಅದೇ.* ಪುಟ. 531

**ಆಕರ ಗ್ರಂಥಗಳು**


- ಬಸವರಾಜು ಎಲ್. (1962). *ಬಸವಣ್ಣನವರ ವಚನ ಸಂಗ್ರಹ.* (ತೃತೀಯ ಮುದ್ರಣ). ಗೀತಾ ಬುಕ್ ಹೌಸ್.
- ಸ್ವಾಮಿ ಬಿ.ಎಸ್. (2007). *ಶರಣಪ್ರಭೆ.* ಕಿರಣ್ ಎಂಟರ್‌ಪ್ರೈಸಸ್.


**ಪರಾಮರ್ಶನ ಗ್ರಂಥಗಳು**


- ಬಸವರಾಜ ಕಲ್ಗುಡಿ. (1988). *ಮಧ್ಯಕಾಲೀನ ಭಕ್ತಿ ಮತ್ತು ಅನುಭವ ಸಾಹಿತ್ಯ ಹಾಗೂ ಚಾರಿತ್ರಿಕ ಪ್ರಜ್ಞೆ,* ಕನ್ನಡ ಸಾಹಿತ್ಯ ಪರಿಷತ್ತು.
- ಚಿದಾನಂದಮೂರ್ತಿ. (1995). *ವಚನ ಸಾಹಿತ್ಯ.* ಬೆಂಗಳೂರು ವಿಶ್ವವಿದ್ಯಾನಿಲಯ.
- ತಿಪ್ಪೇರುದ್ರಸ್ವಾಮಿ ಎಸ್. (1995). *ಬಸವೇಶ್ವರ ವಚನ ದೀಪಿಕೆ.* ಜಗದ್ಗುರು ಶ್ರೀ ಶಿವರಾತ್ರೀಶ್ವರ ಗ್ರಂಥಮಾಲೆ.

ಸೃಜನಿ

SRUJANI: Indian Journal of Innovative Research and Development (SIJIRD)
Volume-3 Issue 3, July-August 2024, Pp. 104-110
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ಬಂಜಾರ ಸಂಬೋಧನೆಯಲ್ಲಿ ಸಂಬಂಧವಾಚಕಗಳ ಪರ್ಯಾಯ ರೂಪಗಳು

**ಶ್ರೀ ಉಮ್ಲರ ಗೋಪಿನಾಯ್ಕ**
ಪ್ರಥಮ ದರ್ಜೆ ಸಹಾಯಕರು ಕಂ ಕಂಪ್ಯೂಟರ್ ಆಪರೇಟರ್, ಮೊರಾರ್ಜಿ ದೇಸಾಯಿ ವಸತಿ ಶಾಲೆ, ಹಂಪಸಾಗರ, ಹ.ಬೊ.ಹಳ್ಳಿ, ವಿಜಯನಗರ

***Abstract:***
*ಬಂಧುತ್ವವು ರಕ್ತ ಸಂಬಂಧ, ಕಳ್ಳುಬಳ್ಳಿ, ನೆಂಟರನ್ನು ಒಳಗೊಂಡಿದ್ದು, ಹುಟ್ಟಿನಿಂದಲೇ ಬೆಳೆದುಕೊಳ್ಳುತ್ತದೆ. ಕುಟುಂಬದ ಮೂಲ ಉದ್ದೇಶ ಸಂತಾನೋತ್ಪತ್ತಿಯ ಕಾರ್ಯ ಮಾತ್ರ ಆಗಿರದೆ ಬಂಧುತ್ವವನ್ನು ಗೊತ್ತುಪಡಿಸುವುದಾಗಿರುತ್ತದೆ. ಬಂಧುತ್ವವು ವಯಸ್ಸು, ಲಿಂಗ, ಜಾತಿ ಹಾಗೂ ಸಾಮಾಜಿಕ ವರ್ಗಗಳನ್ನು ಅವಲಂಬಿಸಿರುತ್ತದೆ. ವ್ಯಕ್ತಿಯ ವೈವಾಹಿಕ ಸಂಬಂಧವು ಕ್ರಮೇಣ ಸಮಾಜಿಕ ಬಂಧುತ್ವದೊಡನೆ ಸಮೀಕರಣಗೊಳ್ಳುತ್ತದೆ. ಕನ್ನಡ ಪರಿಸರ ಹಾಗೂ ಬಂಜಾರ ಪರಿಸರದಲ್ಲಿಯೂ ಬಂಧುತ್ವ ರೂಪಗಳು ಒಂದೇ ಇದ್ದರು ಬಂಧುತ್ವ ಸಂಬೋಧನಾ ರೂಪಗಳು ಅವರಾಡುವ ಭಾಷೆಗೆ ತಕ್ಕಂತೆ ಭಿನ್ನವಾಗಿರುತ್ತವೆ. ಸಂಬಂಧವಾಚಕಗಳಲ್ಲಿ ಒಂದಾದ ತಂದೆ, ತಾಯಿ, ಮಗ, ಮಗಳು, ಅಳಿಯ, ಸೊಸೆ ಸಂಬಂಧವಾಚಕ ರೂಪಗಳ ಪರ್ಯಾಯ ರೂಪಗಳನ್ನು ಇಲ್ಲಿ ತಿಳಿಯಬಹುದಾಗಿದೆ.*

***Keywords:*** *ಕುಟುಂಬ, ವಿವಾಹ, ಬಂಧುತ್ವ, ರಕ್ತಸಂಬಂಧ, ಸಂಬಂಧವಾಚಕ.*

**ಪೀಠಿಕೆ**

ಬಂಧುವಾಚಕ ಪದಗಳು ನೆಂಟರು ಪದದ ಅಡಿಯಲ್ಲಿ ಬರುತ್ತದೆ. ನೆಂಟರು ಎಂದರೆ ಇಲ್ಲಿ ಸಂಬಂಧಿಕರು. ಇದು ಕೆಲವೊಮ್ಮೆ ಸಮಾನಾಂತರ ಮತ್ತು ವಿವಾಹ ಯೋಗ್ಯ ರಕ್ತಬಂಧುಗಳ ಹಾಗೂ ವೈವಾಹಿಕ ಬಂಧುಗಳನ್ನು ಒಳಗೊಂಡಂತೆ ಎಲ್ಲಾ ಸಂಬಂಧಿಕರಿಗೂ ಅನ್ವಯಿಸುತ್ತದೆ. ಈ ಬಂಧುವಾಚಕಗಳು ಭಾಷಿಕರು ನಿರ್ವಹಿಸುವ ಸಾಮಾಜಿಕ ಕಾರ್ಯವನ್ನು ನಿರ್ಧರಿಸುವುದರ ಜೊತೆಗೆ ಬಂಧುಗಳ ಮಧ್ಯ ಉದ್ಭವಿಸುವ ಮನಸ್ತಾಪಗಳನ್ನು, ಘರ್ಷಣೆಗಳನ್ನು ತಪ್ಪಿಸುವ, ನಿಯಂತ್ರಿಸುವ ಸಾಧನವಾಗಿ ಕುಟುಂಬ ವಲಯದ ನೆಮ್ಮದಿಯ ಜೀವನಕ್ಕೆ ಸಹಕರಿಸುವುದರ ಜೊತೆಗೆ ಸಾಮಾಜಿಕ ಸಂಬಂಧವನ್ನು ಬೆಸೆಯುತ್ತದೆ.

ಜಗತ್ತಿನಲ್ಲಿ ಮಾತನಾಡುವ ಎಲ್ಲಾ ಭಾಷಾ ಸಮುದಾಯದಲ್ಲೂ ಬಂಧುತ್ವದ ರೂಪಗಳನ್ನು ಕಾಣಬಹುದಾಗಿದೆ. ಸಂಬಂಧವಾಚಕ ರೂಪಗಳು ಒಂದೆ ಇದ್ದರೂ ಸಂಬೋಧಿಸುವ ಕ್ರಮಗಳು ಮಾತ್ರ ಆಯಾ ಭಾಷಾ ಸಮುದಾಯ ಮೇಲೆ ನಿರ್ಧಾರಿತವಾಗಿರುತ್ತವೆ. ಇಲ್ಲಿ ನಾವು ಬಳ್ಳಾರಿ ಮತ್ತು ಕೊಪ್ಪಳ ಪರಿಸರದಲ್ಲಿ ಕಂಡುಬರುವ ಸಂಬಂಧವಾಚಕಗಳು ಸಂಬೋಧಿಸಲ್ಪಡುವ ಪರ್ಯಾಯ ರೂಪಗಳನ್ನು ಮಾತ್ರ ಅಧ್ಯಯನಕ್ಕಾಗಿ ಕೊಡಲಾಗಿದೆ.

***Please cite this article as:*** ಶ್ರೀ ಉಮ್ಲರ ಗೋಪಿನಾಯ್ಕ. (2024). ಬಂಜಾರ ಸಂಬೋಧನೆಯಲ್ಲಿ ಸಂಬಂಧವಾಚಕಗಳ ಪರ್ಯಾಯ ರೂಪಗಳು. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರೀಸರ್ಚ್ ಅಂಡ್ ಡೆವೆಲಪ್‌ಮೆಂಟ್,* 3(3), 104–110

| ತಂದೆ ಪದದ ಪರ್ಯಾಯ ರೂಪಗಳು | | | |
|---|---|---|---|
| **ಕನ್ನಡ** | **ಬಂಜಾರ** | **ಸಂದರ್ಭ** | |
| | | **ಕನ್ನಡ** | **ಬಂಜಾರ** |
| ತಂದೆ<br>ಯಪ್ಪ<br>ಅಪ್ಪಾ<br>ಅಪ್ಪಾಜಿ<br>ಅಪ್ಪಯ್ಯ<br>ಪಪ್ಪಾ<br>ಪಾ | ಬಾ<br>ಬಾಪ<br>ಬಾಪು<br>ಮಾರೋಬಾ<br>ಬಾಬಾ<br>ಪಪಾ<br>ಓಬಾ<br>ಮರಾಪ್ | ಜನ್ಮಧಾತ ತಂದೆ, ನನ್ನಪ್ಪ | ಜನಮ್ ದಿನೋಜೊ ಬಾಪು |
| | | ನಮ್ಮನ್ನು ಕಷ್ಟದಲ್ಲಿ ಕಾಪಾಡಿದ ವ್ಯಕ್ತಿಯ ತಂದೆ | ಹಮೂನ್ ಕಷ್ಟಮಾಯ್ ದಿಟೋಜೊ ಮನಕ್ಯನ್ ಬಾಪ್ |
| | | ದೇವರ ಸನ್ನಿಧಿಯಲ್ಲಿ ಗಂಡುದೇವರನ್ನು ಕಾಪಾಡಪ್ಪ ತಂದೆ | ದೇವೆನ್ ದೋಕಾಜನ್ನ ಸಾಯ್ ಕರ್ ರೆ ಮಾರಾಜ್ ಬಾಪು |
| | | ಕರ್ನಾಟಕದ ದಕ್ಷಿಣ ಭಾಗದ ಕೆಲವು ಸಮುದಾಯದಲ್ಲಿ ತಂದೆಯನ್ನು ಅಣ್ಣ ಎನ್ನುತ್ತಾರೆ. | |
| | | ಸಂತೆ ಮಾರುಕಟ್ಟೆಯಿಂದ ತರಕಾರಿಗಳನ್ನು ತಂದೆ | |
| | | ಜನ್ಮಧಾತ ತೀರಿಕೊಂಡಿದ್ದಲ್ಲಿ ದೊಡ್ಡಪ್ಪ ಮತ್ತು ಚಿಕ್ಕಪ್ಪನನ್ನು ತಂದೆಯನ್ನಾಗಿ ಸಂಬೋಧಿಸುತ್ತಾರೆ. | ಬಾಪ್ ನರತೊ ಮೊಡಾಪು, ಕಕಾ, ಬಾಪು |
| | | ಮಗುವನ್ನು ಲಾಲಿಸುವಾಗ ಗಂಡು ಮಗುವಾಗಿದ್ದಲ್ಲಿ ನನ್ನಪ್ಪ ಎಂದು ಸಂಬೋಧಿಸುತ್ತಾರೆ. | ಚಚಾಬ್ರುನ್ ರಮಾಡಾಜನ್ನ ರೊಮತ್ರೆ ಮಾರೋ ಬಾಪ |
| | | ಜಾತಿ ಮತ್ತು ಅಂತಸ್ತಿನ ಏರುಪೇರುಗಳ ಸಂದರ್ಭದಲ್ಲಿ ತಂದೆ ಎಂದು ಕರೆಯುತ್ತಾರೆ. | ಅಮೀರ್ ಗರೀಬ್ ಅನ್ ಜಾತೇತಿ ಮೋಟ್ ಚಜೇನ್ ಬಾಪು |
| | | ಪ್ರಕೃತಿ ವಿಕೋಪಗಳಿಗೆ ತಂದೆ | |
| | | ಗ್ರಹ ನಕ್ಷತ್ರಗಳಿಗೆ ತಂದೆ | |

**ಕನ್ನಡ: ತಂದೆ, ಬಂಜಾರ: ಬಾಪ**

ಕನ್ನಡದಲ್ಲಿ ತಂದೆ ಎಂದು ಕರೆಯಲ್ಪಡುವ ಸಂಬೋಧನ ರೂಪವು ಬಂಜಾರರಲ್ಲಿ ಬಾಪು ಎಂದು ಕರೆಯಲ್ಪಡುತ್ತದೆ. ಸಂಬಂಧಗಳು ಒಂದೆ ಆಗಿದ್ದರು ಸಂಬೋಧನಾ ರೂಪಗಳಂತು ಬೇರೆ ಬೇರೆ ಯಾಗಿರುತ್ತವೆ ಇದಕ್ಕೆ ಕಾರಣ ಅವರಾಡುವ ಭಾಷೆ ಆಗಿದೆ. ಜನ್ಮಧಾತನನ್ನು ತಂದೆ ಎಂದು ಕರೆಯುವುದುಂಟು ಅದನ್ನೆ ಬಂಜಾರರಲ್ಲಿ ಬಾಪು ಎಂದು ಕರೆಯುತ್ತಾರೆ. ಬಳ್ಳಾರಿ ಪರಿಸರದಲ್ಲಿ ಬಾಪು, ಬಾಪ, ಮರಾಪ್, ಬಾ, ಎಂದು ಕರೆದರೆ ಕೊಪ್ಪಳ ಪರಿಸರದ ಬಂಜಾರ ತಾಂಡಗಳಲ್ಲಿ ಬಾಪ, ಪಾಪ, ಓಬಾ, ಬಾಬಾ, ಯಾಯಬಾ, ಎಂದು ಸಂಬೋಧಿಸುವುದನ್ನು ಕಾಣಬಹುದು. ಇವುಗಳನ್ನು ಗಮನಿಸಿದಾಗ ಸಂಬೋಧನಾ ರೂಪಗಳು ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿರುತ್ತವೆ ಎಂದು ಕಂಡುಕೊಳ್ಳಬಹುದು. ಆಧುನಿಕ ಸಂದರ್ಭದಲ್ಲಿ ತಂದೆಯನ್ನು ಎಲ್ಲಾ ಭಾಷೆಯಲ್ಲು Father ಎಂದು ಕರೆಯುವುದನ್ನು ಕಾಣಬಹುದಾಗಿದೆ. ಕನ್ನಡ

ಪರಿಸರದಲ್ಲಿ ಕೆಲವು ಕಡೆ ತಂದೆಯನ್ನು ಅಣ್ಣ ಎಂದು ಕರೆಯುತ್ತಾರೆ.

**ತಾಯಿ:**

| ತಾಯಿ ಪದದ ಪರ್ಯಾಯ ರೂಪಗಳು | | | |
|---|---|---|---|
| **ಕನ್ನಡ** | **ಬಂಜಾರ** | **ಸಂದರ್ಭ** | |
| | | **ಕನ್ನಡ** | **ಬಂಜಾರ** |
| ತಾಯಿ<br>ಅಮ್ಮ<br>ನಮ್ಮಮ್ಮ<br>ಯವ್ವ<br>ಯಮ್ಮ<br>ಅಮ್ಮಯ್ಯ<br>ಮಾ<br>ಯವ್ವಬೇ | ಯಾಡಿ<br>ಯ<br>ಮರಾಡಿ<br>ಯಯಾ<br>ಓಯಾ<br>ಮಾರ್ ಯಾ | ಜನ್ಮ ನೀಡಿದವಳು, ನಮ್ಮನ್ನು ಹೆತ್ತವಳು, ಹೆತ್ತಮ್ಮ, ನಮ್ಮಮ್ಮ | ಜನಮ್ ದಿನಿಜೊ ಮಾ, |
| | | ನಮ್ಮನ್ನು ಕಷ್ಟದಲ್ಲಿ ಕಾಪಾಡಿದವಳಿಗೆ ತಾಯಿ | ಹಮೂನ್ ಕಷ್ಟಮಾಯ್ ಪಾರ್‌ಕರಜೇನ್(ದಿಟಿಜೇನ್) ಮಾ |
| | | ದೇವರ ಸನ್ನಿಧಿಯಲ್ಲಿ ಹೆಣ್ಣು ದೇವತೆಯನ್ನು ಕಾಪಾಡಮ್ಮ ತಾಯಿ | ದೇವೆನ್ ದೋಕಾಜನ್ನ ಸಾಯ್ ಕರ್‌ಯೇ ಮಾ |
| | | ಜನ್ಮಧಾತೆ ತೀರಿಕೊಂಡಾಗ ದೊಡ್ಡಮ್ಮ ಮತ್ತು ಚಿಕ್ಕಮ್ಮನನ್ನು ತಾಯಿ ಎಂದು ಸಂಬೋಧಿಸುತ್ತಾರೆ. | ಮೊಟ್ಯಾಡಿ, ಕಾಕಿನ್ ಮಾ ಕಚ |
| | | ಜಾತಿ ಮತ್ತು ಅಂತಸ್ತಿನ ಏರುಪೇರುಗಳ ಸಂದರ್ಭದಲ್ಲಿ ತಾಯಿ ಎಂದು ಸಂಬೋಧಿಸುತ್ತಾರೆ. | ಅಮೀರ್ ಗರೀಬ್ ಅನ್ ಜಾತೇತಿ ಮೋಟ್ ಚಜೇನ್ ಯಾ |
| | | ಪ್ರಕೃತಿ ವಿಕೋಪಗಳಿಗೆ ತಾಯಿ ಎನ್ನುತ್ತಾರೆ | |
| | | ಗ್ರಹ ನಕ್ಷತ್ರಗಳಿಗೆ ತಾಯಿ ಎನ್ನುವರು. | |

**ಕನ್ನಡ : ತಾಯಿ, ಬಂಜಾರ: ಯಾಡಿ**

ಮಕ್ಕಳು ಶಬ್ದಗಳ ಅನುಕರಣೆಯನ್ನು ತಾಯಿಯಿಂದ ಕಲಿಯಲು ಪ್ರಾರಂಭಿಸುತ್ತಾರೆ. ಕನ್ನಡದಲ್ಲಿ ತಾಯಿ ಎಂದು ಕರೆಯಲ್ಪಟ್ಟರೆ ಬಂಜಾರ ಸಮುದಾಯದಲ್ಲಿ ತಾಯಿಯನ್ನು ಯಾಡಿ ಎಂದು ಕರೆಯುವುದುಂಟು. ಇಲ್ಲಿ ಸಂಬೋಧನೆಗಳು ಬೇರೆ ಬೇರೆ ರೂಪದಲ್ಲಿವೆ ಏಕೆಂದರೆ ಅವರಾಡುವ ಭಾಷೆಯ ಮೇಲೆ ಸಂಬೋಧನಾ ರೂಪಗಳು ಬದಲಾಗಿರುತ್ತವೆ. ಬಳ್ಳಾರಿ ಪರಿಸರದಲ್ಲಿ ಯಾಡಿ, ಮರಾಡಿ, ಯಾ, ಓಯಾ, ಎಂದು ಕರೆದರೆ ಕೊಪ್ಪಳ ಪರಿಸರದಲ್ಲಿ ಯಾಯ, ಯಾ, ಯಾಯಮ, ಯಾಡಿ, ಎಂದು ಕರೆಯಲ್ಪಡುತ್ತದೆ. ಆಧುನಿಕತೆ ಬೆಳೆದಂತೆ ಎಲ್ಲಾ ಸಮುದಾಯದಲ್ಲು ತಾಯಿಯನ್ನು Mother ಎಂದು ಕರೆಯಲು ಇಷ್ಟ ಪಡುವುದನ್ನು ಇತ್ತೀಚಿನ ಪೀಳಿಗೆಯಲ್ಲಿ ಕಾಣಬಹುದು. ತಾಯಿಗಿಂತ ಬಂಧುವಿಲ್ಲ ಉಪ್ಪಿಗಿಂತ ರುಚಿಯಿಲ್ಲ ಎಂಬ ಗಾದೆಯಂತೆ ತಾಯಿ ಮಗುವಿನ ಮೊದಲ ಗುರು ಮಗು ಹೇಳುವ ಮೊದಲ ಪದ ತಾಯಿ ನಮ್ಮನ್ನು ಮನುಷ್ಯರಾಗಿ ರೂಪಿಸುವವಳು ತಾಯಿ. ತಾಯಿ ದೇವರ ಮತ್ತೊಂದು ರೂಪ ಏಕೆಂದರೆ ದೇವರು ನಮಗೆ ಸಹಾಯ ಮಾಡಲು ಎಲ್ಲೆಡೆ ಇರಲು ಸಾಧ್ಯವಿಲ್ಲ. ಅದಕ್ಕಾಗಿ ಅವನು ತಾಯಿಯನ್ನು ಸೃಷ್ಟಿಸಿದನು ತಾಯಿಯ ಪ್ರೀತಿ ವಾತ್ಸಲ್ಯವನ್ನು

ಪಡೆಯಲು ದೇವರು ಕೂಡ ಭೂಮಿಯಲ್ಲಿ ಹುಟ್ಟಿದ್ದಾನೆ.

**ಮಗ :**

| ಮಗ ಪದದ ಪರ್ಯಾಯ ರೂಪಗಳು | | | |
|---|---|---|---|
| ಕನ್ನಡ | ಬಂಜಾರ | ಸಂದರ್ಭ | |
| | | ಕನ್ನಡ | ಬಂಜಾರ |
| ಮಗ | ಬೇಟಾ | ಪುರುಷನಿಗೆ ಅಣ್ಣನ ಮಗ ಮಗನಾಗುತ್ತಾನೆ | ಮಾಟಿನ್ ಭಾಯಿರ್ ಬೇಟ ಬೇಟಲಾಗಚ |
| | | ಪುರುಷನಿಗೆ ತಮ್ಮನ ಮಗ ಮಗನಾಗುತ್ತಾರೆ. | ಮಾಟಿನ್ ನಾನಕ್ಯಭಾಯಿರ್ ಬೇಟ ಬೇಟಲಾಗಚ |
| | | ಮಹಿಳೆಗೆ ಅಕ್ಕನ ಮಗ ಮಗನಾಗುತ್ತಾನೆ | ತಾಂಡ್ರಿನ್ ಬೇನೆರ್ ಬೇಟ ಬೇಟಲಾಗಚ |
| | | ಮಹಿಳೆಗೆ ತಂಗಿಯ ಮಗ ಮಗನಾಗುತ್ತಾನೆ<br>ಆ ಮಗನ್ ಒಂದ್ ಕೈ ನೋಡ್ಕೊತಿನಿ | ತಾಂಡ್ರಿನ್ ನಾನಕಿ ಬೇನೆರ್ ಬೇಟ ಬೇಟಲಾಗಚ<br>ಓ ಬೇಟಾನ್ ದೇಕ್ಲುಚು |

**ಕನ್ನಡ: ಮಗ, ಬಂಜಾರ: ಬೇಟ**

ಮಗ ಎಂದು ಕರೆಯಲ್ಪಡುವ ಕನ್ನಡ ಪದವು ಬಂಜಾರ ಸಂಬೋಧನೆಯಲ್ಲಿ ಬೇಟ ಎಂದು ಉಚ್ಚರಿಸಲ್ಪಡುತ್ತದೆ ಇಲ್ಲಿ ಸಂಬೋಧನೆಗಳು ಬೇರೆ ಬೇರೆ ಆದರೆ ಸಂಬಂಧ ಮಾತ್ರ ಒಂದೆ ಈ ಸಂಬೋಧನೆಯ ಮೇಲೆ ಅವರ ಭಾಷೆ ನಿಂತಿರುತ್ತದೆ. ಬಳ್ಳಾರಿ ಸುತ್ತಮುತ್ತಲಿನ ಬಂಜಾರ ತಾಂಡಗಳಲ್ಲಿ ಮಗನನ್ನು ಬೇಟ, ಕೆಲವು ತಾಂಡಗಳಲ್ಲಿ ಬಹುಭಾಷೆಯ ಪ್ರಭಾವದಿಂದಾಗಿ ಭಿನ್ನ ರೂಪದಲ್ಲಿ ಕರೆಯುತ್ತಾರೆ ಮಾ ಕೊಡಕು ಇಲ್ಲಿ ತೆಲುಗು ಭಾಷೆಯನ್ನು ಅಷ್ಟೇ ಸರಾಗವಾಗ ಅಲ್ಲಿ ಬಳಸಲ್ಪಡುವುದರಿಂದ ಇಂತಹ ಸಂಬೋಧನಾ ರೂಪಗಳು ಉಂಟಾಗುತ್ತವೆ. ಆಧುನಿಕ ಸಂದರ್ಭದಲ್ಲಿ ಮಗನನ್ನು Son ಎಂದು ಕರೆಯಲು ಪ್ರಾರಂಭಿಸಿದ್ದಾರೆ. ಇಲ್ಲಿ ಶಿಕ್ಷಣ ಮತ್ತು ಅಂತಸ್ತಿನ ಪ್ರಭಾವ ಬೀರಿರುವುದನ್ನು ಕಾಣಬಹುದು.

**ಮಗಳು:**

| ಮಗಳು ಪದದ ಪರ್ಯಾಯ ರೂಪಗಳು | | | |
|---|---|---|---|
| ಕನ್ನಡ | ಬಂಜಾರ | ಸಂದರ್ಭ | |
| | | ಕನ್ನಡ | ಬಂಜಾರ |
| ಮಗಳು | ಬೇಟಿ | ಪುರುಷನಿಗೆ ಅಣ್ಣನ ಮಗಳು ಮಗಳಾಗುತ್ತಾಳೆ | ಮಾಟಿನ್ ಭಾಯಿರ್ ಬೇಟಿ ಬೇಟಿಲಾಗಚ |
| | | ಪುರುಷನಿಗೆ ತಮ್ಮನ ಮಗಳು ಮಗಳಾಗುತ್ತಾಳೆ | ಮಾಟಿನ್ ನಾನಕ್ಯ ಭಾಯಿರ್ ಬೇಟಿ ಬೇಟಿಲಾಗಚ |
| | | ಮಹಿಳೆಗೆ ಅಕ್ಕನ ಮಗಳು ಮಗಳಾಗುತ್ತಾಳೆ | ತಾಂಡ್ರಿನ್ ಬೇನೆರ್ ಬೇಟಿ ಬೇಟಿಲಾಗಚ |
| | | ಮಹಿಳೆಗೆ ತಂಗಿಯ ಮಗಳು ಮಗಳಾಗುತ್ತಳೆ | ತಾಂಡ್ರಿನ್ ನಾನಕಿ ಬೇನೆರ್ ಬೇಟಿ ಬೇಟಿಲಾಗಚ |

**ಕನ್ನಡ: ಮಗಳು, ಬಂಜಾರ: ಬೇಟಿ**

ಮಗಳು ಕನ್ನಡದಲ್ಲಿ ಸಂಬೋಧಿಸಲ್ಪಟ್ಟರೆ ಬಂಜಾರರಲ್ಲಿ ಬೇಟಿ ಎಂದು ಕರೆಯುವುದುಂಟು. ಅದರಲ್ಲು ಬಳ್ಳಾರಿ ಮತ್ತು ಕೊಪ್ಪಳ ಸುತ್ತಮುತ್ತಲಿನ ಪರಿಸರದಲ್ಲಿರುವ ಬಂಜಾರ ತಾಂಡಗಳಲ್ಲಿ ಮಗಳನ್ನು ಬೇಟಿ ಎಂದು ಕರೆಯುತ್ತಾರೆ. ಆಧುನಿಕತೆಯ ಪ್ರಭಾವದಿಂದಾಗಿ ಮಗಳನ್ನು Doughter ಎಂದು ಕರೆಯುವುದು ವಾಡಿಕೆಯಿದೆ.

**ಅಳಿಯ:**

| ಅಳಿಯ ಪದದ ಪರ್ಯಾಯ ರೂಪಗಳು | | | |
|---|---|---|---|
| ಕನ್ನಡ | ಬಂಜಾರ | ಸಂದರ್ಭ | |
| | | ಕನ್ನಡ | ಬಂಜಾರ |
| ಅಳಿಯ | ಸಾಳೊ | ಪುರುಷನಿಗೆ ಅಕ್ಕನ ಮಗ ಅಳಿಯನಾಗುತ್ತಾನೆ | ಮಾಟಿನ್ ಬೇನೆರ್ ಬೇಟ ಸಾಳೊಲಾಗಚ |
| | | ಪುರುಷನಿಗೆ ತಂಗಿಯ ಮಗ ಅಳಿಯನಾಗುತ್ತಾನೆ | ಮಾಟಿನ್ ನಾನಕಿ ಬೇನೆರ್ ಬೇಟ ಸಾಳೊಲಾಗಚ |
| ಅಳಿಯ | ಜಮಾಯಿ | ಮಹಿಳೆಗೆ ಅಣ್ಣನ ಮಗ ಅಳಿಯನಾಗುತ್ತಾನೆ | ತಾಂಡ್ರಿನ್ ಬೇನೆರ್ ಬೇಟ ಸಾಳೊ ಲಾಗಚ |
| | | ಮಹಿಳೆಗೆ ತಮ್ಮನ ಮಗ ಅಳಿಯನಾಗುತ್ತನೆ<br>ಮಗಳ ಗಂಡ ಅಳಿಯ<br>ಅಣ್ಣನ ಮಗಳ ಗಂಡ ಅಳಿಯ<br>ತಮ್ಮನ ಮಗಳ ಗಂಡ ಅಳಿಯ | ತಾಂಡ್ರಿನ್ ನಾನಕ್ಯ ಭಾಯಿರ್ ಬೇಟ ಸಾಳೊಲಾಗಚ<br>ಬೇಟಿರ್ ಘರೆವಾಳೊ ಜಮಾಯಿ<br>ಮೋಟ್ ಭಾಯಿರ್ ಬೇಟಿರ್ ಘರೆವಾಳೊ ಜಮಾಯಿ<br>ನಾನಕ್ಯ ಭಾಯಿರ್ ಬೇಟಿರ್ ಘರೆವಾಳೋ ಜಮಾಯಿ |

**ಕನ್ನಡ: ಅಳಿಯ, ಬಂಜಾರ: ಜಮಾಯಿ**

ಕನ್ನಡದಲ್ಲಿ ಕರೆಯಲ್ಪಡುವ ಅಳಿಯ ಸಂಬೋಧನೆಯು ಬಂಜಾರರಲ್ಲಿ ಸಾಳೊ ಮತ್ತು ಜಮಾಯಿ ಎಂದು ಕರೆಯುವುದುಂಟು. ಬಳ್ಳಾರಿ ಪರಿಸರದಲ್ಲಿ ಸಾಳೊ, ಜಮಾಯಿ ಎಂದು ಸಂಬೋಧಿಸುತ್ತಾರೆ. ಹಾಗೆಯೇ ಕೊಪ್ಪಳ ಪರಿಸರದಲ್ಲು ಸಾಳೊ, ಜಮಾಯಿ, ಎಂದು ಕರೆಯುತ್ತಾರೆ. ಬಂಜಾರರಲ್ಲಿ ಸಂಬಂಧಗಳು ಒಂದೆ ಆಗಿದ್ದರು ಸಂಬೋಧನೆಯಲ್ಲಿ ಬೇರೆ ಬೇರೆಯಾಗಿ ಸಂಬೋಧಿಸಲ್ಪಡುತ್ತವೆ. ಆಧುನಿಕತೆ ಬೆಳೆದಂತೆ ಅಳಿಯನನ್ನು Son in Law ಎಂದು ಕರೆಯುವುದು ವಾಡಿಕೆಯಾಗಿಬಿಟ್ಟಿದೆ.

ಬಂಜಾರ ಸಮುದಾಯದಲ್ಲಿ ಸಾಳೊ ಮತ್ತು ಜಮಾಯಿಗೆ ವ್ಯತ್ಯಾಸವಿದೆ ಆದರೆ ಕನ್ನಡದಲ್ಲಿ ಒಂದೆ ಅರ್ಥವನ್ನು ನೀಡುತ್ತಾರೆ. ಅಳಿವಾಗಿ ಸಂಬೋಧಿಸುತ್ತಾರೆ. ಬಂಜಾರರು ಭಿನ್ನತೆಗೆ ಕಾರಣ ಸಂಬಂಧವನ್ನು ಸಂಬೋಧಿಸುವ ಸಂದರ್ಭವು ಆ ಸಂಬಂಧದ ಮೇಲೆ ಪರಿಣಾಮ ಬೀರುತ್ತದೆ.

**ಸೊಸೆ:**

| ಸೊಸೆ ಪದದ ಪರ್ಯಾಯ ರೂಪಗಳು | | | |
|---|---|---|---|
| **ಕನ್ನಡ** | **ಬಂಜಾರ** | **ಸಂದರ್ಭ** | |
| | | ಕನ್ನಡ | ಬಂಜಾರ |
| ಸೊಸೆ | ಸಾಳಿ | ಹೆಂಡತಿಯ ತಂಗಿ ಸೊಸೆ | ಗೊಣ್ಣಿರ್ ಬೇನ್ ಸಾಳಿ |
| | | ಹೆಂಡತಿಯ ಚಿಕ್ಕಪ್ಪ/ದೊಡ್ಡಪ್ಪನ ಹೆಣ್ಣುಮಕ್ಕಳು(ತಂಗಿಯರು ಮಾತ್ರ) | ಗೊಣ್ಣಿರ್ ಕಾಕ/ಮೊಡಾಪುರ್ ನಾನಕಿ ಬೇಟಿವೊ ಸಾಳಿ ಲಾಗಚ |
| ಸೊಸೆ | ಬೋಡಿ | ಮಗನ ಹೆಂಡತಿ ಸೊಸೆ | ಬೇಟಾರ್ ಗೊಣ್ಣಿ ಬೋಡಿ |
| | | ಅಣ್ಣನ ಮಗನ ಹೆಂಡತಿ ಸೊಸೆ | ಮೊಟೋ ಭೀಯಾರ್ ಬೇಟಾರ್ ಗೊಣ್ಣಿ ಬೋಡಿ |
| | | ತಮ್ಮನ ಮಗನ ಹೆಂಡತಿ ಸೊಸೆ | ನಾನಕ್ಯ ಭಾಯಿರ್ ಬೇಟಾರ್ ಗೊಣ್ಣಿ ಬೋಡಿ |
| | | ಪುರುಷನಿಗೆ ಅಕ್ಕನ ಮಗಳು ಸೊಸೆ ಆಗುತ್ತಾಳೆ | ಮಾಟಿನ್ ಬೇನೆರ್ ಬೇಟಿ ಬೋಡಿ ಲಾಗಚ |
| | | ಪುರುಷನಿಗೆ ತಂಗಿಯ ಮಗಳು ಸೊಸೆ ಆಗುತ್ತಾಳೆ | ಮಾಟಿನ್ ನಾನಕಿ ಬೇನರ್ ಬೇಟಿ ಬೋಡಿ ಲಾಗಚ |
| | | ಮಹಿಳೆಗೆ ಅಣ್ಣನ ಮಗಳು ಸೊಸೆ ಆಗುತ್ತಾಳೆ | ತಾಂಡ್ರಿನ್ ಭಾಯಿರ್ ಬೇಟಿ ಬೋಡಿ ಲಾಗಚ |
| | | ಮಹಿಳೆಗೆ ತಮ್ಮನ ಮಗಳು ಸೊಸೆ ಅಗುತ್ತಾಳೆ | ತಾಂಡ್ರಿನ್ ನಾನಕಿ ಭಾಯಿರ್ ಬೇಟಿ ಸಾಳಿಲಾಗಚ |

**ಕನ್ನಡ: ಸೊಸೆ, ಬಂಜಾರ: ಸಾಳಿ, ಬೋಡಿ**

ಕನ್ನಡದಲ್ಲಿ ಸಹಜವಾಗಿ ಕರೆಯಲ್ಪಡುವ ಸೊಸೆ ಪದವು ಬಂಜಾರರಲ್ಲಿ ಸಾಳಿ ಮತ್ತು ಬೋಡಿ ಎಂದು ಸಂಬೋಧಿಸಲ್ಪಡುತ್ತವೆ. ಬಳ್ಳಾರಿ ಸುತ್ತಮುತ್ತಲಿನ ಬಂಜಾರ ತಾಂಡಗಳ ಪರಿಸರದಲ್ಲಿ ಸಾಳಿ ಮತ್ತು ಬೋಡಿ ಎಂದು ಕರೆಯುತ್ತಾರೆ. ಹಾಗೆಯೇ ಕೊಪ್ಪಳ ಜಿಲ್ಲೆಯಲ್ಲಿ ಬರುವ ಬಂಜಾರ ತಾಂಡಗಳಲ್ಲಿಯು ಸಹ ಸಾಳಿ ಮತ್ತು ಬೋಡಿ ಎಂದು ಕರೆಯುತ್ತಾರೆ. ಇಲ್ಲಿ ಸಂಬಂಧಗಳು ಒಂದೆ ಇದ್ದರು ಸಂಬೋಧಿಸುವಾಗ ಭಿನ್ನತೆ ಕಂಡುಬರುತ್ತದೆ. ಆಧುನಿಕ ಸಂಧರ್ಭದಲ್ಲಿ Doughter in Law ಎಂದು ಕರೆಯುವುದು ರೂಡಿಯಾಗಿಬಿಟ್ಟಿದೆ.

ಬಂಜಾರರು ಕನ್ನಡ ಭಾಷೆಗೆ ಹೆಚ್ಚು ಒತ್ತು ಕೊಡುತ್ತಾರೆ ಕಾರಣ ಅವರ ದೈನಂದಿನ ವ್ಯವಹಾರಕ್ಕಾಗಿ ಹಾಗೂ ಶಿಕ್ಷಣಕ್ಕಾಗಿರಬಹುದು

ಒಟ್ಟಾರೆಯಾಗಿ ಬಂಜಾರರು ಕರ್ನಾಟಕದಲ್ಲಿ ಕನ್ನಡವನ್ನೆ ಅವಲಂಬಿಸಿದ್ದಾರೆ. ಇದೆ ರೀತಿಯಾಗಿ ಬೇರೆ ಬೇರೆ ರಾಜ್ಯದಲ್ಲಿರುವ ಬಂಜಾರ ಸಮುದಾಯದವರು ಆಯಾ ರಾಜ್ಯಾದ ರಾಜ್ಯ ಭಾಷೆಯನ್ನೆ ಅವಲಂಬಿಸಿ ತಮ್ಮ ಬದುಕನ್ನು ದೂಡುತ್ತಿದ್ದಾರೆ. ಆದರೂ ತಮ್ಮದೇ ಆದ ಸಂಸ್ಕೃತಿ ಸಂಸ್ಕಾರ, ಆಚರಣೆಗಳನ್ನು ಹಾಗೆಯೆ ಮುಂದುವರೆಸಿಕೊಂಡು ಆಧುನಿಕತೆಯತ್ತ ವಾಲುತಿದ್ದಾರೆ.

**ಬಂಜಾರ ಭಾಷೆಯ ಮೇಲೆ ಕನ್ನಡದ ಪ್ರಭಾವ:**

ಉದಾ:

ಕನ್ನಡ: ನನ್ನ ಜೊತೆ**(ಜೋಡಿ)** ಬಾ

ಬಂಜಾರ: ಮಾರ್ ಸೋಬತ್**(ಜೋಡಿ)** ಆಜೋ.

ಕನ್ನಡ: **ರಾತ್ರಿ ಚಂದ್ರನ** ಬೆಳಕು ಇರುತ್ತೆ.

ಬಂಜಾರ: **ರಾತ್ ಚಾಂದಾರ್** ವಜಾಳೊ ರಚ

ಕನ್ನಡ: ಪ್ರತಿ ದಿನ **ಸಂಜೆ** ಸೂರ್ಯ ಮುಳುಗುತ್ತೆ

ಬಂಜಾರ: ದಾಡಿ **ಸಾಂಜ್** ಸೂರಜ್ ಡೂಬಚ.

ಕನ್ನಡ: ಮನೆ ಕಟ್ಟಲಿಕ್ಕೆ **ಉಸುಕು**(ಮರಳು) ಸಿಮೆಂಟ್ ಬೇಕಾಗುತ್ತದೆ

ಬಂಜಾರ: ಘರ್ ಬಾಂದೇನ್ ಉಸ್ಕ**(ಉಸುಕ)**ಸಿಮಿಂಟ್ ಚಾವಚ.

ಕನ್ನಡ: ಮರಳು ಗಾಡಿನ **ಪ್ರಾಣಿ** ಒಂಟೆ.

ಬಂಜಾರ: ಉಸ್ಕಮ್ ಚಾಲೇವಾಳ್ **ಪ್ರಾಣಿ** ಒಂಟಿ ಹಾವ್.

**ಪರಾಮರ್ಶನ ಗ್ರಂಥಗಳು**


- ಅಂಗಡಿ, ಎಸ್.ಎಸ್. (2002). *ಸಂಬಂಧವಾಚಕಗಳು ಮತ್ತು ಸಂಬೋಧನೆಗಳು.* ಕನ್ನಡ ಭಾಷಾಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ.
- ಖಂಡೋಬ, ಪಿ. ಕೆ. (1991). *ಕರ್ನಾಟದ ಲಂಬಾಣಿಗಳು: ಒಂದು ಸಾಂಸ್ಕೃತಿಕ ಅಧ್ಯಯನ.* ತೇಜಸಿಂಗ್ ರಾಠೋಡ್ ಮೇಮೋರಿಯಲ್ ಟ್ರಸ್ಟ್.
- ಹರಿಲಾಲ್ ಪವಾರ್. (2002). *ಬಂಜಾರ ಭಾಷೆ ತೌಲನಿಕ ಅಧ್ಯಯನ.* ಕರ್ನಾಟಕ ಜಾನಪದ ವಿಶ್ವವಿದ್ಯಾಲಯ.
- ಸಣ್ಣರಾಮ. (2023). *ದಕ್ಷಿಣ ಭಾರತದ ಲಂಬಾಣಿ ಭಾಷೆ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಸಣ್ಣರಾಮ. (2023). *ಬಂಜಾರ ಭಾಷೆ ಸಮಾಜ ಮತ್ತು ಸಂಸ್ಕೃತಿ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.

